# ವೀರ ಜಿನೇಂದ್ರ ಚರಿತೆ



ಹಂಪ ನಾಗರಾಜಯ್ಯ



ಮಹಾವೀರರ ೨೫೦೦ ನೆಯ ನಿರ್ವಾಣೋತ್ಸವದ
ವಿಶೇಷ ಪ್ರಕಟನೆ

# ಪರಿವಿಡಿ

# ವೀರ ಜಿನೇಂದ್ರ ಚರಿತೆ

## (ಹಿನ್ನೆಲೆ)

ಅಪಭ್ರಂಶ ಆಧಾರಗಳಿಂದ ಮಹಾವೀರರ ಜೀವನ ಚರಿತೆಯನ್ನು ಸಂಕಲನ ಮಾಡಲು ದಿವಂಗತ ಡಾ॥ ಹೀರಾಲಾಲ್‌ಜಿ ಜೈನ್ ಅವರನ್ನು ಪ್ರಾರ್ಥಿಸಲಾಯಿತು. ಅವರು ಆ ಕಾರ್ಯವನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಮಾಡಿದ್ದಾರೆ, ಅಲ್ಲದೆ ಅದರ ಹಿಂದಿ ಅನುವಾದವನ್ನೂ ಅವರು ಕೊಟ್ಟಿದ್ದಾರೆ. ಆದರ ಸಂಪಾದಕೀಯದಲ್ಲಿ ಡಾ॥ ಹೀರಾಲಾಲ್‌ಜಿಯವರ ಸಂಕಲನಕೃತಿಯನ್ನೂ ಮತ್ತು ಅವರು ಅದಕ್ಕೆ ಬರೆದ ಹಿಂದಿ ಅನುವಾದವನ್ನೂ ಇಂಗ್ಲೀಷಿನಲ್ಲಿ ಸಾರಸಂಗ್ರಹರೂಪದಲ್ಲಿ ಡಾ॥ ಆ. ನೇ. ಉಪಾಧ್ಯೆಯವರು ನಿರೂಪಿಸಿದ್ದಾರೆ. ಈ ಕನ್ನಡ ಅನುವಾದ ಹಿಂದಿ ಮತ್ತು ಇಂಗ್ಲಿಷ್ ಮೂಲಗಳನ್ನು ಆಧರಿಸಿದೆ; ಕನ್ನಡ ರೂಪಾಂತರ ಆದಷ್ಟೂ ಕನ್ನಡದಲ್ಲಿ ಸಿಗುವ, ಇದಕ್ಕೆ ಸಂವಾದಿಯಾದ ಸಾಹಿತ್ಯ ಸಾಮುಗ್ರಿಯನ್ನು ಅಳವಡಿಸಿಕೊಂಡಿದೆ.

ಈ ಸಂಪುಟ ಮಹಾವೀರರ ಜೀವನ ಮತ್ತು ಉಪದೇಶವನ್ನು, ಪ್ರಧಾನ ವಾಗಿ ಪುಷ್ಪದಂತ ಕವಿಯ '**ತಿಸಟ್ಠಿ ಮಹಾಪುರಿಸ ಗುಣಾಲಂಕಾರು**' ಅಥವಾ '**ಮಹಾಪುರಾಣ**' ಎಂಬ ಅಪಭ್ರಂಶ ಕಾವ್ಯದ 95–108ನೆಯ ಸಂಧಿಗಳ ಆಧಾರದಿಂದ ನೀಡುತ್ತದೆ. ಶ್ರೀ ಚಂದ್ರಕವಿಯ ಕಹಕೋಸು ಕೃತಿಯ ಕೆಲವು ಭಾಗ ಗಳು, (ಅದರ ಹಿಂದಿ ಅನುವಾದದೊಡನೆ) ಮಹಾಪುರಾಣದ ಆಧಾರಗಳನ್ನು ಪರಿ ಪೋಷಿಸಿವೆ. ಮಹಾವೀರರ ಜೀವನವನ್ನು ಕುರಿತು ವಿವರಿಸುವ ಗ್ರಂಥಗಳಲ್ಲಿ ಅಪ ಭ್ರಂಶ ಭಾಷೆಯ ಮಹಾ ಪುರಾಣವೇ ಅತ್ಯಂತ ಪ್ರಾಚೀನವಾದದ್ದು. ರಾಷ್ಟ್ರ ಕೂಟರ ದೊರೆ ಮುಮ್ಮುಡಿ ಕೃಷ್ಣನ ಆಳ್ವಿಕೆಯ ಕಾಲದಲ್ಲಿ ಮಹಾಪುರಾಣ ಕಾವ್ಯ ಮಾನ್ಯಖೇಟ (ಮಳಖೇಡ) ದಲ್ಲಿ ಪುಷ್ಪದಂತ ಕವಿಯಿಂದ ರಚಿತವಾಯಿತು. ಈ ಕಾವ್ಯ ರಚನೆಗೆ ತಾನು ಸಿದ್ಧಾರ್ಥ ಸಂವತ್ಸರದಲ್ಲಿ ತೊಡಗಿದುದಾಗಿಯೂ ಕ್ರೋಧನ ಸಂವತ್ಸರದಲ್ಲಿ ಪೂರ್ಣಗೊಳಿಸಿದುದಾಗಿಯೂ, ಪುಷ್ಪದಂತ ಕವಿ ತಿಳಿಸಿದ್ದಾನೆ; ಇದು ಶಕ 887 ಅಥವಾ ಕ್ರಿ. ಶ. 965ಕ್ಕೆ ಸಂವಾದಿಯಾಗಿದೆ.

ಈ ಜೀವನ ಚರಿತ್ರೆಯಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಗಳನ್ನು ಇಲ್ಲಿ ನಿರೂ ಪಿತವಾಗಿರುವ ಅಧ್ಯಾಯಗಳ ಕ್ರಮದಲ್ಲಿ ಪಟ್ಟಿ ಮಾಡುವುದು ಸ್ವಾರಸ್ಯಕರವಾಗಿರು ತ್ತದೆ. 95–97ನೆಯ ಅಧ್ಯಾಯಗಳು ಮಹಾವೀರರ ಜನನ ಪ್ರಸಂಗದಿಂದ ಹಿಡಿದು ಆತನ ಸರ್ವಜ್ಞತ್ವ ಪ್ರಾಪ್ತಿಯವರೆಗೆ ನಿರೂಪಿಸುತ್ತವೆ. ಅದರ ಅನಂತರದ ಅಧ್ಯಾಯ ಗಳು ಚಂದನೆಯ ಜೀವನವನ್ನು ತಿಳಿಸುತ್ತವೆ. ಚಂದನಾದೇವಿ ಆರ್ಯಿಕೆಯರ ಸಂಘಕ್ಕೆ ಮೊದಲ ಮುಂದಾಳುವಾಗಿದ್ದವಳು (98). ಅಲ್ಲಿಂದ ಜೀವಂಧರ ಮುನಿಯ

ಮೊದಲಿನ ಭವಾವಳಿಯ ವಿವರ ಬರುತ್ತದೆ (99), ಜಂಬೂ ಸ್ವಾಮಿಯ ವೈರಾಗ್ಯ (100) ಪ್ರೀತಿಂಕರರ ಕಥೆ (101) ಹಾಗೂ ಮಹಾವೀರರ ನಿರ್ವಾಣ (102)– ಇವು ನಿರೂಪಿತವಾಗಿವೆ.

ಮಹಾವೀರರ ಜೀವನದೊಡನೆ ಜೀವಂಧರ ಹಾಗೂ ಪ್ರೀತಿಂಕರರ ಉಪಕಥೆಗಳು ಯಾವ ಸಂಬಂಧವನ್ನೂ ಚಾರಿತ್ರಿಕವಾಗಿ ಪಡೆದಿಲ್ಲ. ಆದರಿಂದ ಅವನ್ನು ಇಲ್ಲಿ ಕೈ ಬಿಡಲಾಗಿದೆ. ಉಳಿದ ವಿವರಗಳನ್ನು ಸಂಕ್ಷಿಪ್ತಗೊಳಿಸಿ ಪರಿಷ್ಕರಿಸಲಾಗಿದೆ. ಹೀಗೆ ಒಂದು ಅವಿಚ್ಛಿನ್ನಗತಿಯಲ್ಲಿ ಮಹಾವೀರರ ಜೀವನವನ್ನೂ (ಸಂಧಿಗಳು 1–3) ಆತನ ಶಿಷ್ಯ ಗಣಧರರ ಬಾಳನ್ನೂ (ಸಂಧಿ 4), ಆರ್ಯಿಕೆ ಚಂದನಾಳ ಬದುಕನ್ನೂ (ಸಂಧಿ 5) ಸ್ವತಂತ್ರರೂಪದಲ್ಲಿ ಪ್ರತಿಪಾದಿಸಲಾಗಿದೆ.

ಮಗಧ ದೇಶದ ದೊರೆ ಶ್ರೇಣಿಕನು ಬಿಂಬಸಾರ ಮಹಾವೀರರ ಸಮಾಕಾಲೀನ. ಸಮಸ್ತ ಜೈನಪುರಾಣ ವಾಙ್ಮಯವನ್ನು ಶ್ರೇಣಿಕ ಮಹಾರಾಜನು ಭಗವಾನ್ ಮಹಾವೀರರಿಗೆ ಮತ್ತು ಆತನ ಗಣಧರರಿಗೆ ಹಾಕಿದ ಪ್ರಶ್ನೆಗಳಿಗೆ ದೊರೆತ ಉತ್ತರ ರೂಪವೆಂದು ನಂಬಲಾಗಿದೆ. ಆದರೆ ಶ್ರೇಣಿಕ ದೊರೆಯ ಬಗ್ಗೆಯಾಗಲಿ, ಅವನ ಪ್ರಧಾನ ರಾಣಿಯೂ ಮಹಾವೀರರ ಮಹಾಭಕ್ತೆಯೂ ಆದ ಚೇಳನಾದೇವಿಯ ಬಗ್ಗೆಯಾಗಲಿ, ಶ್ರೇಣಿಕನ ಮಕ್ಕಳ ವೈರಾಗ್ಯದ ವಿಚಾರವಾಗಿಯಾಗಲೀ ಮಹಾಪುರಾಣ ಯಾವ ಸಂಗತಿಯನ್ನೂ ಕೊಟ್ಟಿಲ್ಲ. ಆದ್ದರಿಂದ ಈ ಎಲ್ಲ ಸಂಗತಿಯನ್ನೂ 6–11ನೆಯ ಸಂಧಿಗಳಲ್ಲಿ, ಶ್ರೀ ಚಂದ್ರಕವಿಯ ಕಹಕೋಸು ಕೃತಿಯ 50, 12, 13, 14, 3 ಮತ್ತು 49ನೆಯ ಸಂಧಿಗಳಿಂದ ಸಂಗ್ರಹಿಸಿ, ನೀಡಲಾಗಿದೆ. ಈ ಸೇರ್ಪಡೆಗಳಾದ ಮೇಲೆ ಈಗ ಇಲ್ಲಿನ ಪರಿವಿಡಿ ಹೀಗಿದೆ: ಮಗಧ ದೇಶವನ್ನು ಶ್ರೇಣಿಕನಿಗಿಂತ ಮೊದಲು ಆಳಿದ ದೊರೆ ಚಿಲಾತಪುತ್ರ (ಸಂಧಿ 6). ಶ್ರೇಣಿಕ ಸಾಮ್ರಾಜ್ಯವನ್ನು ಸಂಗ್ರಹಿಸಿದ, ಧರ್ಮದಲ್ಲಿ ಅಚಲ ಶ್ರದ್ಧೆ ತಳೆದ, ಪರೀಕ್ಷೆಗಳಲ್ಲಿ ಹಾದು ಬಂದ– ಇತ್ಯಾದಿ (ಸಂಧಿಗಳು 7–9). ಅವನ ಮಕ್ಕಳ ಬಗೆಗೆ ಅಗತ್ಯವಾದ ವಿವರಗಳು: ವಾರಿಷೇಣ (ಸಂಧಿ 10) ಗಜ ಕುಮಾರ (ಸಂಧಿ 11). ಶ್ರೀ ಚಂದ್ರಕವಿ ತನ್ನ ಕಹಕೋಸು ಕೃತಿಯನ್ನು ಸುಮಾರು ಸಂವತ್ 1123ರಲ್ಲಿ ರಚಿಸಿದ (ಅಹಮದಾಬಾದು 1969).

ತೀರ್ಥಂಕರರ ಧಾರ್ಮಿಕ ವಿಧಿಗಳನ್ನು ಬಿಟ್ಟರೆ ಈ ಸಂಕಲನ ಅಪೂರ್ಣವಾಗುತ್ತದೆ. ಆದ್ದರಿಂದ ಮಹಾಪುರಾಣದ 10–12ನೆಯ ಸಂಧಿಗಳಿಂದ ಈ ವಿಷಯವನ್ನು ತೆಗೆದುಕೊಂಡಿದೆ. ಸಂಧಿಗಳ ಸಂಖ್ಯೆ ಇಲ್ಲಿ ಹನ್ನೆರಡು ಆಗಿದ್ದರೂ, ತುಲನಾತ್ಮಕವಾಗಿ ಅವು ಸಂಕ್ಷಿಪ್ತವಾಗಿಯೇ ಇವೆ. ಕಡವಕಗಳ ಒಟ್ಟು ಸಂಖ್ಯೆ ಕೇವಲ 71. ಈ ಕಡವಕಗಳು ಕೂಡ, ತೌಲನಿಕವಾಗಿ ನೋಡಿದರೆ, ಚಿಕ್ಕವು.

ಮಹಾವೀರರ ಜೀವನ, ಅವರ ಸಮಕಾಲೀನ ರಾಜಕೀಯ ಸ್ಥಿತಿಗತಿಗಳು, ಹಾಗೂ ಪುಷ್ಪದಂತ ಮಹಾಕವಿಯ ಕವಿತಾಶಕ್ತಿಯನ್ನು ಬಿಂಬಿಸುವ ಕಾವ್ಯ ಶೈಲಿಯ ಆಸ್ವಾದನೆ–ಇವುಗಳ ಒಂದು ಸುಸ್ಪಷ್ಟ ಚಿತ್ರವನ್ನು ಅಲ್ಪಾವಧಿಯಲ್ಲಿ ಓದುಗರು ಪಡೆಯಬೇಕೆಂದು ಸಂಪಾದಕ–ಸಂಕಲನಕಾರರ ಪ್ರಯತ್ನವಾಗಿದೆ. ಸಾಹಿತ್ಯಕ ಸಂಪ್ರದಾಯದ ಕಣ್ಣೆಲೆಯಲ್ಲಿ ಮಹಾತ್ಮರ ಜೀವನ ಹಾಗೂ ಘಟನೆಗಳನ್ನು ಅರ್ಥೈಸಲು ಈ ಮುನ್ನುಡಿ ಓದುಗರಿಗೆ ಸಹಕರಿಸುತ್ತದೆ.

ಅಪಭ್ರಂಶ ಮೂಲಪಾಠವನ್ನು ಸಮಾಸ ಶಬ್ದಗಳ ನಡುವೆ ಕಿರುಕೂಡುಗೆರೆ ಮೂಲಕ ನಿರೂಪಿಸಿದೆ, ಓದುಗರು ಸುಲಭವಾಗಿ ಅರ್ಥವನ್ನು ಗುರುತಿಸಲೆಂದು. ಕೆಲವು ಪಾಠಾಂತರಗಳನ್ನು ಇನ್ನೂ ಪರಿಷ್ಕಾರಗೊಳಿಸಿದೆ. ಹ್ರಸ್ವ ಎ—ಒ ಗಳನ್ನು ಸ್ಪಷ್ಟವಾಗಿ ನಿರ್ದೇಶಿಸಿದೆ. ಹಿಂದಿ ಭಾಷಾಂತರ ಕೂಡ, ನುಡಿಕಟ್ಟುಗಳ ಬಳಕೆಯನ್ನು ಮೀರದಂತೆ ಸಾಕಷ್ಟು ವಿಷಯನಿಷ್ಠವೇ ಆಗಿದೆ. ಪಾರಿಭಾಷಿಕ ಶಬ್ದಗಳನ್ನು ಸಂದೇಹಾಸ್ಪದ ಭಾಗಗಳನ್ನು ಸ್ಪಷ್ಟವಾಗಿ ವಿವರಿಸಿದೆ. ಈ ಸಂಕಲನದ ಹೆಸರನ್ನು, ಅದಕ್ಕೆ ಇರುವ ಇತರ ಸಾಧ್ಯತೆಗಳನ್ನು ಪರಿಗಣಿಸಿ, ವೀರ ಜಿಣಿಂದ ಚರಿಉ ಎಂಬುದಾಗಿ ಒಪ್ಪಲಾಗಿದೆ. ಓದುಗರು ಇದನ್ನು ಸ್ವಾಗತಿಸುವರೆಂದು ನಿರೀಕ್ಷಿಸಲಾಗಿದೆ. ಇದನ್ನು ಕನ್ನಡಾನುವಾದದಲ್ಲಿ ವೀರ ಜಿನೇಂದ್ರ ಚರಿತೆ ಎಂದು ಕರೆಯಲಾಗಿದೆ.



# ಪ್ರಸ್ತಾವನೆ

## 1. ಮಹಾವೀರರ ತೀರ್ಥಂಕರತ್ವದ ಹಿನ್ನೆಲೆ

ಭಗವಾನ್ ಮಹಾವೀರರು ಜೈನಧರ್ಮದ ತೀರ್ಥಂಕರರು. ಆದರೆ ಅವರು ಜೈನ ಐತಿಹಾಸಿಕ ಪರಂಪರೆಯ ಅನುಸಾರವಾಗಿ ಜೈನಧರ್ಮದ ಆದಿಪ್ರವರ್ತಕರಾಗಲಿ ಮತ್ತು ಸುದೈವದಿಂದ ಕೊನೆಯ ತೀರ್ಥಂಕರರಾಗಲಿ ಆಗಲಿಲ್ಲ.

ಅನಾದಿ ಕಾಲದಿಂದಲೂ ಈ ಧರ್ಮದಲ್ಲಿ ತೀರ್ಥಂಕರರ ಪರಂಪರೆ ನಡೆದು ಬಂದಿದೆ. ಹಾಗೂ ಮುಂದೆಯೂ ಈ ಪರಂಪರೆ ಮುಂದುವರೆಯುತ್ತದೆ. ಈ ಮೂಲಕ ಉಪದಿಷ್ಟ ಧರ್ಮದಲ್ಲಿ ತನ್ನದೇ ಆದ ಯುಗಧರ್ಮದ ವಿಶೇಷತೆಗಳನ್ನು ಪಡೆದಿದೆ ಮತ್ತು ಅವುಗಳ ಮೌಲಿಕ ಸ್ವರೂಪದಲ್ಲಿಯೂ ಸಹ ಇವುಗಳಿಗನುಗುಣವಾಗಿ ತಾಳ ಮೇಳಗಳನ್ನು ಹೊಂದಿವೆ. ಈ ವರ್ತಮಾನ ಯುಗದಲ್ಲಿ ಋಷಭನಾಥನನ್ನು ಆದಿ ತೀರ್ಥಂಕರರೆಂದು ಕರೆಯಲಾಗಿದೆ. ಅವರ ಪ್ರಸ್ತಾಪವು ಕೇವಲ ಸಮಸ್ತ ಜೈನ ಪುರಾಣಗಳಷ್ಟರಲ್ಲಿಯೇ ಅನಿವಾರ್ಯವಾಗಿ ಬಂದಿಲ್ಲ; ಭಾರತದ ಪ್ರಾಚೀನ ಗ್ರಂಥಗಳಾದ ಋಗ್ವೇದ ಮುಂತಾದವುಗಳಲ್ಲಿಯೂ ನಾನಾ ಪ್ರಸಂಗಗಳಲ್ಲಿ ಇದರ ಉಲ್ಲೇಖ ಬಂದಿದೆ.[1] ಇದರಿಂದ ಆರಂಭವಾಗಿ ಮಹಾವೀರರವರೆವಿಗೂ 24 ತೀರ್ಥಂಕರರ ಚರಿತ್ರೆಯ ವಿದ್ವತ್ ವರ್ಣನೆಯನ್ನು ಜೈನಪುರಾಣಗಳಲ್ಲಿ ಕಾಣುತ್ತೇವೆ.[2] ಧಾರ್ಮಿಕ, ಸೈದ್ಧಾಂತಿಕ, ದಾರ್ಶನಿಕ, ಮುಂತಾದ ದೃಷ್ಟಿಯಿಂದ ಏಕರೂಪತೆಯನ್ನು ಹಾಗೂ ಒಂದೇ ಆತ್ಮದ ವ್ಯಾಪ್ತಿಯನ್ನು ಪ್ರಕಟಿಸುವ ಸಲುವಾಗಿ ಮಹಾವೀರರ ಪೂರ್ವ ಜನ್ಮದ ವೃತ್ತಾಂತವನ್ನು (ಭವಾವಳಿ ಪರಂಪರೆಯನ್ನು) ಋಷಭದೇವರೊಂದಿಗೆ ಜೋಡಿಸಲಾಗಿದೆ. ಋಷಭದೇವರ ಮಗ ಭರತ. ಈತನೇ ಪ್ರಥಮ ಚಕ್ರವರ್ತಿ. ಈತನ ಹೆಸರನ್ನು ನಮ್ಮ ದೇಶ ತನ್ನದಾಗಿಸಿಕೊಂಡು ಭರತವರ್ಷ ಎಂದು ಕರೆಸಿಕೊಳ್ಳುತ್ತಿದೆ. ಈ ವಿಚಾರವನ್ನು ಸಮಸ್ತ ವೈದಿಕ ಪುರಾಣಗಳು ಸಹ ಏಕಮತದಿಂದ ಸ್ವೀಕರಿಸಿವೆ.[3] ಈತನ ಮಗ ಮರೀಚಿ. ಮರೀಚಿಯೂ ಸಹ ಹಿಂದಿನ ಜನ್ಮದಲ್ಲಿ (ಒಬ್ಬ ಶಬರನ ಜೀವವಾಗಿದ್ದ). ತನ್ನ ಜೀವನದ ಸಾಮಾನ್ಯ ಪ್ರವೃತ್ತಿಯಾಗಿದ್ದ ಪ್ರಾಣಿಹಿಂಸೆಯನ್ನು ತ್ಯಜಿಸಿ ಅಹಿಂಸಾವೃತ್ತಿಯಿಂದ ಶಬರನ ಜೀವವನ್ನು ಹೊಂದಿದ್ದವ, ಹಾಗೂ ಋಷಭದೇವರ ಪಾದಕಮಲದ ಸನ್ನಿಧಿಯಲ್ಲಿ ದೀಕ್ಷೆಯನ್ನು ಪಡೆದವ. ಆದರೆ ಆದಿತೀರ್ಥಂಕರರಿಂದ ನಿರ್ದೇಶಿಸಲ್ಪಟ್ಟಿದ್ದ ನಿರ್ದಿಷ್ಟ, ಕಠೋರ ಮುನಿವ್ರತವನ್ನು ಪಾಲನೆ ಮಾಡದೆ, ವ್ರತಭಂಗವಾಗಿ ಮುನಿಸ್ಥಾನದಿಂದ ಭ್ರಷ್ಟನಾಗಿದ್ದ.

ಇಷ್ಟಾದರೂ ಆತನಲ್ಲಿ ಧಾರ್ಮಿಕ ಬೀಜ ಬಿತ್ತಿದ್ದರಿಂದ ಹಾಗೂ ಸಂಸ್ಕಾರದಿಂದಾಗಿ ದೇವ ಹಾಗೂ ಮರ್ತ್ಯ ಲೋಕದಲ್ಲಿ ಸಂಚರಿಸುತ್ತಾ, ಕೊನೆಯಲ್ಲಿ ಮಹಾ

ವೀರನಾಗಿ ಜನ್ಮಧಾರಣೆ ಮಾಡುತ್ತಾನೆ. ಈ ರೀತಿಯಾಗಿ ಕೊನೆಯ ತೀರ್ಥಂಕರರಾದ ಮಹಾವೀರರ ಆಧ್ಯಾತ್ಮ ಪರಂಪರೆ ಆದಿ ತೀರ್ಥಂಕರರಾದ ಋಷಭದೇವರೊಂದಿಗೆ ಸಹಜವಾಗಿಯೆ (ಕಾಣಿಸಿಕೊಂಡಿದೆ.)[4] ಆದರೆ ಈ ಮಹಾವೀರರೊಂದಿಗೆ 'ತೀರ್ಥಂಕರ ಪರಂಪರೆ'ಯೂ ಒಂದು ನಿಲುಗಡೆಗೆ ಬಂದಂತೆ ಮುರಿದು ಬೀಳುವುದಿಲ್ಲ. ಮುಂದೆ ಈತನಿಗೆ ಒಬ್ಬ ಶಿಷ್ಯನಿರುವುದನ್ನು ಕಾಣುತ್ತೇವೆ. ಅವನೇ ಭಾರತದ ಶ್ರೇಷ್ಠ ರಾಜರಲ್ಲಿ ಒಬ್ಬನಾದ ಬಿಂಬಸಾರ. ಈತನಲ್ಲಿ ಮಹಾವೀರರ ಮೂಲಕ ಧರ್ಮದ ಬೀಜ ಬಿತ್ತಿರುವುದನ್ನು ನೋಡುತ್ತೇವೆ. ಪೂರ್ವಜನ್ಮದ ದುಷ್ಕೃತ್ಯಗಳಿಂದ ಇವರು ನರಕಗಾಮಿಯಾದರೂ ಸಹ ಇವರಲ್ಲಿ ಮರೀಚಿಯ ರೀತಿಯಲ್ಲಿ ಸಮಾನ ಧಾರ್ಮಿಕ ಸಂಸ್ಕಾರ ಪ್ರಬಲವಾಗಿ ಸ್ಥಾಪಿತವಾಗಿದ್ದರಿಂದ ಮುಂದೆ ಇದರ ಫಲ ಸ್ವರೂಪವಾಗಿ ಹೊಸ ತೀರ್ಥಂಕರರ ಪೀಳಿಗೆಯ ಆದಿಪ್ರವರ್ತಕರಾಗುತ್ತಾರೆ. ಈ ರೀತಿಯಲ್ಲಿ ಎಲ್ಲ ದೃಷ್ಟಿಯಲ್ಲಿ ವಿಚಾರ ಮಾಡಿ ನೋಡಿದಾಗ ಜೈನ ಪರಂಪರೆಯಲ್ಲಿ ಒಂದು ವಿಚಾರ ಸ್ಪಷ್ಟವಾಗುತ್ತದೆ. ಅದೇನೆಂದರೆ, ಯಾವ ರೀತಿಯಲ್ಲಿ ಮಹಾವೀರರು ಒಬ್ಬ ಚಾರಿತ್ರಿಕ ಪುರುಷರಾಗಿ, ಪೂರ್ವ ಪೌರಾಣಿಕ ಪರಂಪರೆಯಲ್ಲಿ ಅವರು ವರ್ತಮಾನಕಾಲದ ಅಂತಿಮ ತೀರ್ಥಂಕರರಾಗಿ, ನಿಲ್ಲುತ್ತಾರೆಯೊ ಅದರಂತೆ ಅವರು ಒಂದು ಹೊಸ ತೀರ್ಥಂಕರರ ಪೀಳಿಗೆಗೆ ಸೃಷ್ಟಿಕರ್ತರೂ ಉದ್ಘಾಟಕರೂ ಆಗಿದ್ದಾರೆ.

## 2. ಮಹಾವೀರರ-ಜೀವನ, ಜನ್ಮ ಮತ್ತು ಬಾಲ್ಯಾವಸ್ಥೆ

ಮಹಾವೀರ ತೀರ್ಥಂಕರರ ಜೀವನ ಚರಿತ್ರೆಯನ್ನು ಜೈನ ಸಾಹಿತ್ಯದ ಅಂಶಗಳಿಂದ ಸಂಕ್ಷೇಪವಾಗಿ ಈ ರೀತಿಯಾಗಿ ಸಾದರಪಡಿಸಬಹುದು.

ಮಹಾವೀರರ ಜನ್ಮ, ಕ್ಷತ್ರಿಯ ಕುಲದಲ್ಲಿ, ರಾಜಪರಿವಾರದಲ್ಲಿ ಆಯಿತು ಎನ್ನಬಹುದು. ತಂದೆ ಸಿದ್ಧಾರ್ಥ, ತಾಯಿ ಪ್ರಿಯಕಾರಿಣಿ. (ತ್ರಿಶಲಾದೇವಿ) ಸಿದ್ಧಾರ್ಥನ ಗೋತ್ರ ಕಾಶ್ಯಪವೆಂದು ಮತ್ತು ತ್ರಿಶಲಾದೇವಿ ಅಥವಾ ಪ್ರಿಯಕಾರಿಣಿಯ ಗೋತ್ರ ವಾಸಿಷ್ಠ ಎಂದು ತಿಳಿದುಬರುತ್ತದೆ. ತ್ರಿಶಲಾದೇವಿ ಆ ಸಮಯದಲ್ಲಿ ವೈಶಾಲಿ ರಾಜನಾಗಿದ್ದ ಚೇಟಕನ ಹಿರಿಯ ಮಗಳಾಗಿದ್ದಳು ಅಥವಾ ಮತಾಂತರದಿಂದಾಗಿ ಚೇಟಕನ ಸೋದರಿಯಾಗಿದ್ದಳೆಂದು ಹೇಳುತ್ತಾರೆ. ಮಹಾವೀರನ ಬಾಲ್ಯ ಅಥವಾ ಶೈಶಾವಸ್ಥೆಯ ಲಾಲನೆ, ಪಾಲನೆ, ಶಿಕ್ಷಣ– ಮುಂತಾದುವುಗಳೆಲ್ಲವೂ ರಾಜಭವನದಲ್ಲಿಯೇ ಆ ಕಾಲದ ಪ್ರಚಲಿತ ಪದ್ಧತಿಯಂತೆ ದೊರೆಯಿತು. ಅವನ ಬಾಲಕ್ರೀಡೆಯ ಬಗ್ಗೆ ಒಂದು ದಂತ ಕತೆಯೂ ದೊರೆಯುತ್ತದೆ. ಈತ ಬಾಲ್ಯದಲ್ಲಿ ಒಂದು ದಿನ ಆಟದಲ್ಲಿ ನಿರತನಾಗಿದ್ದ ಸಮಯದಲ್ಲಿ ಒಂದು ಭೀಷಣ ಸರ್ಪವನ್ನು ನಿಗ್ರಹಿಸಿದಂತೆಯೂ ಈ ಕಾರಣದಿಂದಾಗಿ ಈತನಿಗೆ 'ಮಹಾವೀರ' ಅಥವಾ ವೀರನಾಥನೆಂಬ ಪ್ರಶಸ್ತಿ ದೊರೆತಂತೆಯೂ ತಿಳಿಯುತ್ತದೆ. ಈ ಘಟನೆ ನಮಗೆ ಕೃಷ್ಣನ, ಕಾಳಿಂಗ ಸರ್ಪ ಸಂಹಾರದ ಘಟನೆಯನ್ನು ನೆನಪಿಗೆ ತರುವಂತೆ ಮಾಡುತ್ತದೆ.

## 3. ಮಹಾವೀರರ ತಪಸ್ಸು

ಇವರು ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಸನ್ಯಾಸವನ್ನು ಸ್ವೀಕರಿಸಿದರು. ಸಕಲ ವೇಷಭೂಷಣವನ್ನು ತೊಡೆದು ಗೃಹವನ್ನು ತೊರೆದು ಕುಂಡಪುರದ ಬಳಿಯಿರುವ ಜ್ಞಾತೃಷಂಡವನವನ್ನು ಪ್ರವೇಶಿಸಿದರು. ತಮ್ಮ ಕೈಗಳಿಂದ ಕೇಶವನ್ನು ಕಿತ್ತೊಗೆದು ಮೂರು ದಿನಗಳ ಉಪವಾಸ ಕೈಗೊಂಡು ಧ್ಯಾನಸ್ಥರಾದರು. ಮುಂದೆ ದೇಶಾಟನೆಯನ್ನು ಕೈಗೊಂಡರು. ಇಷ್ಟಾದರೂ ಕಾಡನ್ನೇ ನಿವಾಸವನ್ನಾಗಿ ಮಾಡಿಕೊಂಡು ಸಂಚರಿಸುತ್ತಿದ್ದರು. ತಮ್ಮ ವ್ರತ ಹಾಗೂ ಉಪವಾಸದ ನಿಯಮಾನುಸಾರವಾಗಿ ದಿನಕ್ಕೊಮ್ಮೆ ಮಾತ್ರ ನಗರ ಅಥವಾ ಗ್ರಾಮವನ್ನು ಪ್ರವೇಶಿಸಿ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದರು. ಅವರು ಧ್ಯಾನ ಹಾಗೂ ಆತ್ಮಚಿಂತನೆಯನ್ನು ಪದ್ಮಾಸನದಿಂದಾಗಲಿ, ಖಡ್ಗಾಸನದಲ್ಲಿ ನಿಂತು ಮೂಗಿನ ನೇರವುಳ್ಳವರಾಗಿ ದೃಷ್ಟಿ ನೆಟ್ಟು ಪಡೆಯುತ್ತಿದ್ದರು. ಲೇಶಮಾತ್ರವೂ ಹಿಂಸೆಯನ್ನು ಮಾಡದಿರುವುದು, ಮೈಥುನ ಮುಂತಾದ ಕಾಮಕ್ರೀಡೆಗಳಿಗೆ ಬಲಿಯಾಗದಿರುವುದು, ಅವುಗಳಿಗೆ ಸ್ಥಾನ ನೀಡದಿರುವುದು ಹಾಗೂ ಯಾವ ಪರಿಸ್ಥಿತಿಯಲ್ಲಿಯೂ ಧನಸಂಪತ್ತನ್ನು ಸಂಗ್ರಹಿಸದಿರುವುದು ಇವೇ ಅವರ ಐದು ಮಹಾವ್ರತಗಳಾಗಿದ್ದವು. ಈ ನಿಷೇಧಾರ್ಥಕ ವ್ರತಗಳ ಜೊತೆಯಲ್ಲಿಯೆ ಅವರು ಶಾರೀರಕ ಹಾಗೂ ಮಾನಸಿಕ ತೊಂದರೆಗಳಿಂದಲೂ ಸಹ ಶಾಂತಿ ಹಾಗೂ ಧೈರ್ಯದಿಂದ ಎದುರಿಸುವ ಸಹನೆಯನ್ನು ಪಡೆದಿದ್ದರು. ಗೃಹಹೀನ, ವಸ್ತ್ರಹೀನ, ಧನ-ಧಾನ್ಯ ಹೀನ, ನಿರಾಶ್ರಯ ಮುಂತಾದ ಮಾನಸಿಕ ತೊಂದರೆಗಳನ್ನು ಹಾಗೂ ಹಸಿವು-ನೀರಡಿಕೆ, ಶೀತೋಷ್ಣ, ಹುಳ ಹುಪ್ಪಟೆಗಳಿಂದ ಆಗುವ ಶಾರೀರಿಕ ಬಾಧೆಗಳನ್ನು ಸಹಿಸುವ ತಾಳ್ಮೆ, ಸ್ಥೈರ್ಯ ಅವರು ಪಡೆದುಕೊಂಡಿದ್ದರು.

## 4. ಕೇವಲ ಜ್ಞಾನಪ್ರಾಪ್ತಿ: ಮಹಾವೀರರ ಸರ್ವಜ್ಞತ್ವ

ಈ ರೀತಿಯಾಗಿ ಹನ್ನೆರಡು ವರ್ಷಗಳ ದೀರ್ಘಕಾಲದ ತಪಸ್ಸನ್ನು ಆಚರಿಸಿದ ನಂತರ ಒಂದು ದಿನ ಋಜುಕೂಲಾ ನದಿಯ ದಂಡೆಯಲ್ಲಿರುವ ಜೃಂಬಕ ಗ್ರಾಮದ ಬಳಿ ಧ್ಯಾನಸ್ತರಾಗಿದ್ದಾಗ ಕೇವಲ ಜ್ಞಾನ ದೊರೆಯಿತು. ಈ ಕೇವಲ ಜ್ಞಾನವನ್ನು ಸರಳರೀತಿಯಲ್ಲಿ ತಿಳಿದುಕೊಳ್ಳಲು ನಾವು ಪ್ರಯತ್ನಪಟ್ಟಲ್ಲಿ ತಿಳಿಯಬಹುದಾದುದಿಷ್ಟು. ಜೀವನ ಹಾಗೂ ಸೃಷ್ಟಿಗೆ ಸಂಬಂಧಿಸಿದಂತೆ ಯಾವುದೇ ಸಮಸ್ಯೆಯಾಗಲಿ ಪ್ರಶ್ನೆಯಾಗಲಿ ಸಾಮಾನ್ಯ ಚಿಂತಕನ ಹೃದಯದಲ್ಲಿ ಎದ್ದಾಗ ಅವುಗಳಿಗೆ ಅವನಿಗೆ ತೃಪ್ತಿದಾಯಕ ರೀತಿಯಲ್ಲಿ ಸಮಾಧಾನ ದೊರೆಯುತ್ತದೆ. ಅದು ಆರು ದ್ರವ್ಯ ಮತ್ತು ಏಳು ತತ್ವಗಳ ಮೂಲಕ ತ್ರೈಲೋಕ್ಯದ ಸಮಸ್ತವಸ್ತುಗಳು, ಘಟನೆಗಳ ಸ್ವರೂಪವನ್ನು ತಿಳಿಯಲು ಸಹಾಯಕವಾಗಿದೆ. ಆ ಆರು ದ್ರವ್ಯಗಳು ಈ ರೀತಿಯಲ್ಲಿವೆ; ಜೀವ, ಅಜೀವ,

ಆಸ್ರವ, ಬಂಧ, ಸಂವರ, ನಿರ್ಜರೆ, ಮತ್ತು ಮೋಕ್ಷ. ಜಡ ಪದಾರ್ಥದಿಂದ ಭಿನ್ನ ವಾಗಿರುವ ಜೀವ ಅಥವಾ ಆತ್ಮತತ್ವವೇ ಜೀವನದ ಮೂಲಾಧಾರವಾಗಿದೆ, ಆತ್ಮ ಸಂವೇದನೆ ಮತ್ತು ಪರ-ಪದಾರ್ಥ ಬೋಧ ಲಕ್ಷಣಗಳಿಂದ ಯುಕ್ತವಾಗಿದೆ, ಹಾಗೂ ಅಮೂರ್ತ ಮತ್ತು ಶಾಶ್ವತವಾಗಿದೆ. ಇಷ್ಟಾಗಿ ಅದು ಜಡತತ್ವದಿಂದ ಸಂಘಟಿತ ಶರೀರದಲ್ಲಿ ವ್ಯಾಪ್ತವಾಗಿ ನಾನಾ ರೂಪ-ರೂಪಾಂತರಗಳಲ್ಲಿ, ಜನ್ಮಜನ್ಮಾಂತರಗಳಲ್ಲಿ ಹರಿದಾಡುತ್ತದೆ. (ಇಂದ್ರಿಯ ಗ್ರಾಹ್ಯ ಪದಾರ್ಥ) ನಮಗೆ ಕಾಣಲ್ಪಡುವ ಇಂದ್ರಿಯ ಗ್ರಾಹ್ಯ ಪದಾರ್ಥಗಳಲ್ಲಿ ಪರಮಾಣುವಿನಿಂದ ಹಿಡಿದು ಮಹಾಸ್ಕಂದದವರೆಗಿನ ಈ ಎಲ್ಲವೂ ಅಜೀವ ಪುದ್ಗಲ ದ್ರವ್ಯದ ರೂಪ-ರೂಪಾಂತರವಾಗಿದೆ. ಧರ್ಮ ಅಧರ್ಮ ಗಳೆಂಬ ಸೂಕ್ಷ್ಮ ಅದೃಶ್ಯ ಅಮೂರ್ತ ತತ್ವಗಳೇನಿವೆಯೋ ಅವು ಲೋಕಾಕಾರದಲ್ಲಿ ವ್ಯಾಪ್ತವಾಗಿವೆ ಮತ್ತು ಜೀವ ಅಥವಾ ಅವತಾರ ಕಲ್ಪಿಸುವ ತತ್ವವಾಗಿವೆ. ಮತ್ತು ಕಾಲ ದ್ರವ್ಯವಸ್ತುಗಳನ್ನು ಮಾಡುವಲ್ಲಿ, ಪರಿವರ್ತನೆ ತರುವಲ್ಲಿ ಹಾಗೂ ಪೂರ್ವ ಮತ್ತು ಪಶ್ಚಿಮದ ಭೌದ್ಧಿಕ ಕ್ರಿಯೆಯನ್ನು ಉಂಟುಮಾಡುವಲ್ಲಿ ಸಹಾಯಕವಾಗಿದೆ. ಇದು ಸೃಷ್ಟಿತತ್ವದ ಒಂದು ವ್ಯಾಖ್ಯೆಯಾದಲ್ಲಿ ಜೀವದ ಸುಖ ದುಃಖದ ಸಂಸಾರಿಕ ಅವಸ್ಥೆ ಯನ್ನು ತಿಳಿದುಕೊಳ್ಳುವಲ್ಲಿ ಮತ್ತು ಆತ್ಮತತ್ವದ ಶುದ್ಧಸ್ವರೂಪದ ವಿಕಾಸ ಹೊಂದು ವಿಕೆಯ ಕಾರಣಗಳೊಂದಿಗೆ ಏಳು ತತ್ವಗಳನ್ನು ತಿಳಿದುಕೊಳ್ಳುವ ಬಯಕೆ ಅವಶ್ಯವಾಗಿದೆ. ಜೀವ ಅಜೀವಗಳು ಸೃಷ್ಟಿಯ ಮೂಲತತ್ವವೆಂಬುದು ಸಿದ್ಧಾಂತವಾಗಿರುವಾಗ ಅವುಗಳ ಪರಸ್ಪರ ಸಂಪರ್ಕ ಹೊಂದುವಿಕೆ ಮೂಲಬಂಧವಾಗಿರುತ್ತದೆ. ಈ ಸಂಪರ್ಕದಿಂದ ಆತ್ಮದ ಶುದ್ಧಸ್ವರೂಪವನ್ನು ಮುಚ್ಚಿಬಿಡುವ ಮತ್ತು ಜ್ಞಾನ-ದರ್ಶನಾತ್ಮಕ ಗುಣಗಳನ್ನು ಕುಂಠಿತಗೊಳಿಸುವ ಒಂದು ಚೌಕಟ್ಟು ನಿರ್ಮಾಣವಾಗುತ್ತದೆ. ಅದನ್ನು ಕರ್ಮ ಬಂಧವೆಂದು ನಾವು ಕರೆಯುತ್ತೇವೆ. ಯಾವ ಸಂಯಮ, ರೂಪ ಕ್ರಿಯೆ ಹಾಗೂ ಸಾಧನೆಯ ಮೂಲಕ ಈ ಜೀವ-ಅಜೀವಗಳನ್ನು ತಡೆಯಲ್ಪಡುತ್ತದೆಯೋ ಅವುಗಳನ್ನು ಸಂವರ ಎಂದು ಕರೆಯುತ್ತೇವೆ. ಸಂಚಿತ ಕರ್ಮಬಂಧವನ್ನು ನಿಷ್ಕ್ರಿಯಗೊಳಿಸುವ ವ್ರತ ಮತ್ತು ತಪರೂಪ ಕ್ರಿಯೆಗಳಿಗೆ ನಿರ್ಜರವೆನ್ನುತ್ತೇವೆ. ಈ ಕರ್ಮ ನಿರ್ಜರ ಪ್ರಕ್ರಿಯೆ ಪೂರ್ಣವಾದಾಗ ಜೀವ ತನ್ನ ಶುದ್ಧಸ್ವರೂಪವನ್ನು ಪಡೆಯುತ್ತದೆ. ಮುಕ್ತಿ ಯನ್ನು ಹೊಂದಿ ನಿರ್ವಾಣವನ್ನು ಪಡೆಯುತ್ತದೆ. ಈ ರೀತಿಯಾಗಿ ಜೀವ-ಅಜೀವ ಪೂರ್ಣ ವ್ಯಾಖ್ಯಾನಮಾಡುವಲ್ಲಿ ಸೃಷ್ಟಿಯ ಪದಾರ್ಥ ವಿಜ್ಞಾನ ಅಥವಾ ಭೌತಿಕ ಶಾಸ್ತ್ರವನ್ನು ನಾವು ಕಾಣಬಹುದಾಗಿದೆ. ಆಸ್ರವ ಅಥವಾ ಬಂಧದಲ್ಲಿ ಮನೋವಿಜ್ಞಾನದ ವಿಶ್ಲೇಷಣೆ ಬರುತ್ತದೆ. ಸಂವರ ಮತ್ತು ನಿರ್ಜರ ತತ್ವಗಳ ವ್ಯಾಖ್ಯಾನಗಳಲ್ಲಿ ಸಂಪೂರ್ಣ ನೀತಿ-ಆಚಾರ ಸಮಾವೇಶವಾಗುತ್ತದೆ. ಮತ್ತು ಮೋಕ್ಷದ ಸ್ವರೂಪದಲ್ಲಿ ಜೀವನದ (ಉಚ್ಚತಮ ಆದರ್ಶ) ಶ್ರೇಷ್ಠತೆ ಪ್ರತಿಪಾದಿತವಾಗುತ್ತದೆ. ಕೇವಲ ಜ್ಞಾನದಲ್ಲಿ ಈ ಸಮಸ್ತ ಬೋಧನೆ, ಸೂಕ್ಷ್ಮ ಹಾಗೂ ವ್ಯಾಪಕ ಸ್ವರೂಪ ಸಮ್ಮಿಲಿತವಾಗಿದೆ.

## 5. ಮಹಾವೀರರ ಧರ್ಮೋಪದೇಶ

ಈ ಕೇವಲಜ್ಞಾನವನ್ನು ಪಡೆದು ಭಗವಾನ್ ಮಹಾವೀರರು ಮಾಗಧದ ರಾಜಧಾನಿ ರಾಜಗೃಹಕ್ಕೆ ಬಂದು ವಿಪುಲಾಚಲ ಪರ್ವತದಲ್ಲಿ ನೆಲಸಿದರು. ಅಲ್ಲಿ ಅವರ ಸಮವಸರಣ ಅಥವಾ ಸಭಾಮಂಟಪದ ರಚನೆಯಾಯಿತು. ಧರ್ಮದ ಅರ್ಥವನ್ನು ತಿಳಿಯಲು ರಾಜ ಹಾಗೂ ಪ್ರಜೆಗಳು ಅಲ್ಲಿ ಸೇರುತ್ತಿದ್ದರು; ಮತ್ತು ಭಗವನ್ ಮಹಾವೀರರು ಅವರಿಗೆ ತನ್ನ ಪೂರ್ವೋಕ್ತ ತತ್ವಗಳ ಸ್ವರೂಪವನ್ನು ತಿಳಿಸುವಲ್ಲಿ ಹಾಗೂ ಜೀವನದ ಸುಖಮಯ ಆದರ್ಶವನ್ನು ಪಡೆಯುವಲ್ಲಿ ಅನುಸರಿಸಬೇಕಾದ ವ್ರತಗಳನ್ನು, ತ್ಯಾಗಿಗಳಿಗೆ ಮಹಾವ್ರತವನ್ನು ಉಪದೇಶಿಸುತ್ತಿದ್ದರು.

## 6. ಮಹಾವೀರರ ಉಪದೇಶವನ್ನು ಆಧರಿಸಿರುವ ಸಾಹಿತ್ಯ

ಭಗವಾನ್ ಮಹಾವೀರರಿಗೆ ಇಂದ್ರಭೂತಿ, ಗೌತಮ, ಸುಧರ್ಮ, ಜಂಬೂ, ಮುಂತಾಗಿ ಹನ್ನೊಂದು ಮಂದಿ ಪ್ರಮುಖ ಶಿಷ್ಯರಿದ್ದರು. ಅವರುಗಳನ್ನು ಗಣಧರರೆಂದು ಕರೆಯುತ್ತಿದ್ದರು. ಅವರುಗಳು ಮಹಾವೀರರ ಸಮಸ್ತ ಉಪದೇಶಗಳನ್ನು ಹನ್ನೆರಡು ಅಂಗಗಳಲ್ಲಿ ಲಿಪಿಬದ್ಧಗೊಳಿಸಿದ್ದಾರೆ.

**ಅವು ಈ ಕೆಳಗಿನಂತಿವೆ**

1. **ಆಚಾರಾಂಗ :** ಇದರಲ್ಲಿ ಮುನಿಗಳ ನಿಯಮೋಪನಿಯಮಗಳ ವರ್ಣನೆಯಿದೆ. ಬೌದ್ಧಧರ್ಮದ ವಿನಯ ಪಿಟಕಕ್ಕೆ ಇಂದು ಯಾವ ಸ್ಥಾನವಿದೆಯೋ ಅದೇ ಸ್ಥಾನ ಇವುಗಳಿಗೆ ಇದೆಯೆಂಬುದನ್ನು ಮನಗಾಣಬೇಕು.

2. **ಸೂತ್ರಕೃತಾಂಗ :** ಇದರಲ್ಲಿ ಜೈನ ದರ್ಶನದ ಸಿದ್ಧಾಂತ ಹಾಗೂ ಕ್ರಿಯೋವಾದ, ಅಕ್ರಿಯೋವಾದ, ನಿಯತಿವಾದ ಮುಂತಾಗಿ ಆ ಕಾಲದಲ್ಲಿ ಪ್ರಚಲಿತದಲ್ಲಿರಬಹುದಾದ ಮತಮತಾಂತರಗಳ ನಿರೂಪಣೆ ಹಾಗೂ ವಿಶ್ಲೇಷಣೆಯಿದೆ.

3. **ಸ್ಥಾನಾಂಗ :** ಇದರಲ್ಲಿ ಸಂಖ್ಯಾನುಸಾರವಾಗಿ ಕ್ರಮಬದ್ಧವಾಗಿ ವಸ್ತುಗಳ ಭೇದೋಪಭೇದಗಳ ವಿವರಣೆಯಿದೆ. ದರ್ಶನ ಒಂದು, ಚರಿತ್ರೆ ಒಂದು, ಸಮಯ ಒಂದು, ಪ್ರದೇಶ ಒಂದು, ಪರಮಾಣು ಒಂದು, ಮುಂತಾಗಿ, ಇದೇ ರೀತಿಯಲ್ಲಿ ಕ್ರಿಯೆಯನ್ನು ಎರಡು ರೀತಿಯಲ್ಲಿ ವಿಭಾಗಿಸಲಾಗಿದೆ. ಜೀವಕ್ರಿಯೆ, ಅಜೀವಕ್ರಿಯೆ. ಜೀವಕ್ರಿಯೆಯನ್ನು ಪುನಃ ಎರಡು ಭಾಗಗಳಾಗಿ ಮಾಡಿದ್ದಾರೆ. ಸಮ್ಯಕ್ತ್ವಕ್ರಿಯೆ ಮತ್ತು ಮಿಥ್ಯಾತ್ವಕ್ರಿಯೆ. ಇದೇ ರೀತಿಯಲ್ಲಿ ಅಜೀವ-ಕ್ರಿಯೆಯಲ್ಲಿಯೂ ಸಹ ಎರಡು ಭಾಗವಾಗಿ ವಿಭಾಜಿಸಿ ಈರ್ಯ್ಯಾಪಥಿಕ ಮತ್ತು ಸಾಂಪರಾಯಿಕ ಎಂಬುದಾಗಿ ಕರೆದಿದ್ದಾರೆ.

4. **ಸಮವಾಯೊಂಗ :** ಸ್ಥಾನಾಂಗದಲ್ಲಿ ಮಾಡಿರುವಂತೆ ಇದರಲ್ಲಿಯೂ ಸಹ ಪದಾರ್ಥಗಳ ನಿರೂಪಣೆ ಅವುಗಳ ಭೇದೋಪಭೇದಗಳ ಸಂಖ್ಯೆಗನುಗುಣವಾಗಿ ಮಾಡಲಾಗಿದೆ. ಆದರೆ ಇಲ್ಲಿ ವಸ್ತುಗಳ ಸಂಖ್ಯೆ ಸ್ಥಾನಾಂಗದಲ್ಲಿರುವಂತೆ ಸೀಮಿತ ವಾಗಿಲ್ಲ. ಶತ-ಶತ ಸಹಸ್ರದವರೆವಿಗೂ ತಲುಪಿದೆ. ಈ ರೀತಿಯಲ್ಲಿ ಈ ಎರಡು ಅಂಗಗಳ ಸ್ವರೂಪ ತ್ರಿಪಿಟಕೆಯ ಅಂಗುತ್ತರನಿಕಾಯಗಳಿಗೆ ಸಮಾನವಾಗಿದೆ.

5. **ವ್ಯಾಖ್ಯಾ ಪ್ರಜ್ಞಪ್ತಿ :** ಪ್ರಶ್ನೋತ್ತರ ರೂಪದಲ್ಲಿದೆ, ಜೈನ ದರ್ಶನದ ಆಚಾರ-ವಿಚಾರಗಳ ವಿವೇಚನೆಯಿದೆ.

6. **ನಾಯ ಧಮ್ಮ ಕಥಾ :** ಇದರ ಸಂಸ್ಕೃತ ರೂಪ ಜ್ಞಾತೃಧರ್ಮ ಕಥೆ. ಆದರಲ್ಲಿ ಜ್ಞಾತೃಪುತ್ರ ಮಹಾವೀರನ ಮೂಲಕ ಉಪದಿಷ್ಟ ಧರ್ಮದ ಕಥೆ ಗಳನ್ನು ಕೂಡಿಹಾಕಲಾಗಿದೆ. ಪ್ರಕೃತದಲ್ಲಿ ಸಂಸ್ಕೃತ ರೂಪಾಂತರ ನ್ಯಾಯಧರ್ಮ ಕಥಾ ಇರಬಹುದೆಂದೂ ಮತ್ತು ಅದರಲ್ಲಿ ಜ್ಞಾನ ಅಥವಾ ನೀತಿಗೆ ಸಂಬಂಧಿಸಿದ ಸಂಕ್ಷೇಪ ಗಾದೆಗಳಿಗೆ ದೃಷ್ಟಾಂತಗಳನ್ನು ನೀಡಿ, ಕಥೆಗಳ ಮೂಲಕ ತಿಳಿಯಹೇಳುವ ಪ್ರಯತ್ನ ನಡೆದಿದ್ದರೆ ಆಶ್ಚರ್ಯಪಡಬೇಕಾಗಿಲ್ಲ.

7. **ಉಪಾಸಕಾಧ್ಯಯನ :** ಧರ್ಮಾನುಯಾಯಿ ಗೃಹಸ್ಥರ ಶ್ರಾವಕ ಜನಗಳ ವ್ರತ ಹಾಗೂ ಈ ವ್ರತಗಳನ್ನು ಪಾಲಿಸುವ ಪುರುಷರ ಚರಿತ್ರೆಗಳನ್ನು ಕಥೆಗಳ ಮೂಲಕ ತಿಳಿಯಹೇಳುವ ಯತ್ನ ಇಲ್ಲಿ ನಡೆದಿದೆ. ಈ ರೀತಿಯಲ್ಲಿ ಈ ಅಂಗವುಮುನಿ ಆಚಾರಗಳನ್ನು ಪ್ರಕಟಿಸುವ ಪ್ರಥಮ ಗ್ರಂಥವಾಗಿದೆ.

8. **ಅಂತಕೃತ್‌ದಶಾ :** ಜೈನ ಪರಂಪರೆಯಲ್ಲಿ ಉಗ್ರ ತಪಸ್ಸನ್ನಾಚರಿಸಿ ಉಪಸರ್ಗಗಳನ್ನು (ಸಹಿಸಿ) ದಾಟಿ, ತಮ್ಮ ಜನ್ಮ ಮರಣವೆಂಬ ಭವಬಂಧಗಳನ್ನು ಕಳಚಿಕೊಂಡು ಮುಕ್ತರಾಗಿ ನಿರ್ವಾಣ ಪಡೆದವರ ವಿಚಾರವಿದೆ. ಇದರಲ್ಲಿ ಹತ್ತು ಜನ ಶ್ರೇಷ್ಠಮುನಿಗಳ ವರ್ಣನೆಯಿದೆ ಎಂದು ತಿಳಿಯುತ್ತದೆ. 'ಅಂತಕೃತ್' ಯಾರೆಂದರೆ; ಅನೇಕ ತೊಂದರೆಗಳನ್ನು ತಾಳ್ಮೆಯಿಂದ ತಾಳಿಕೊಳ್ಳುವ ಮೂಲಕ, ಕಠೋರ ತಪಗಳ ನ್ನಾಚರಿಸುವುದರ ಮೂಲಕ, ಯಾವ ಮುನಿ ಈ ಸಂಸಾರಕ್ಕೆ ಮಂಗಳ ಹಾಡುತ್ತಾ ನಿರ್ವಾಣ ಪಡೆಯುತ್ತಾರೊ ಅವರು.

9 **ಅನುತ್ತರೌಪ ಪಾತಿಕದಶಾ :** ಯಾರಲ್ಲಿ ಪುಣ್ಯಶಾಲಿ ಜೀವ ಉತ್ಪನ್ನ ವಾಗುತ್ತದೊ ಅಂತಹವರನ್ನು ಅನುತ್ತರೆಂದು ಕರೆಯುತ್ತಾರೆ. ಅಲ್ಲಿಂದ ಜ್ಞಾತರಾಗಿ ಮನುಷ್ಯ ಜನ್ಮಕ್ಕೆ ಮತ್ತೆ ಪ್ರವೇಶಿಸಿ ಆ ಜನ್ಮದಲ್ಲಿಯೇ ತಮ್ಮ ಧಾರ್ಮಿಕ ಪ್ರವೃತ್ತಿ ಯಿಂದ ಮೋಕ್ಷ ಪ್ರಾಪ್ತಿಯನ್ನು ಯಾರು ಹೊಂದುತ್ತಾರೋ ಅಂತಹವರ ವಿಚಾರ ವಿದೆ. ಇಂತಹ ಹತ್ತುಜನ ಮಹಾಮುನಿಗಳು ಸ್ವರ್ಗಸ್ಥರಾಗುವ ಚರಿತ್ರೆ ಪೂರ್ಣ ವಿವರಣೆಗಳೊಂದಿಗೆ ಇದರಲ್ಲಿದೆ.

10. **ಪ್ರಶ್ನೆ-ವ್ಯಾಕರಣ :** ಇದರ ಹೆಸರೇ ಸೂಚಿಸುವಂತೆ ಈ ಅಂಗ ನಾನಾ ಪಂಥಗಳ, ಸಿದ್ಧಾಂತಗಳ ಬಗ್ಗೆ ಪ್ರಶ್ನೆಗಳನ್ನೂ ಉತ್ತರಗಳನ್ನೂ ಒಳ ಗೊಂಡಿದೆ. ಒಂದು ರೀತಿಯಲ್ಲಿ ಇದು ವ್ಯಾಖ್ಯಾಪ್ರಜ್ಞಪ್ತಿಗೆ ಅನುಬಂಧದಂತಿದೆ.

11. **ವಿಪಾಕ ಸೂತ್ರ :** ವಿಪಾಕತಾ ಎನ್ನುವುದರ ಅರ್ಥ ಕರ್ಮಫಲ. ಕರ್ಮಸಿದ್ಧಾಂತದ ಅನುಸಾರವಾಗಿ ಸತ್ ಕರ್ಮದ ಫಲ ಸುಖ-ಭೋಗ, ದುಷ್ಕೃತ್ಯದ ಫಲ ದುಃಖಪ್ರದವಾಗುತ್ತದೆ. ಈ ವಿಚಾರವನ್ನೇ ಇಲ್ಲಿ ಪ್ರತಿಪಾದಿಸ ಲಾಗಿದೆ.

12. **ದೃಷ್ಟಿ ವಾದ :** ಇದರಲ್ಲಿ ಐದು ಭೇದಗಳಿವೆ. ಪರಿಕರ್ಮ, ಸೂತ್ರ, ಪೂರ್ವಗತ, ಅನುಯೋಗ ಮತ್ತು ಚೂಲಿಕಾ. ಪರಿಕರ್ಮದಲ್ಲಿ ಗಣಿತ ಶಾಸ್ತ್ರವು, ಸೂತ್ರದಲ್ಲಿ ಮತಗಳು ಮತ್ತು ಸಿದ್ಧಾಂತಗಳು ಸಮ್ಮಿಳಿತವಾಗಿರುತ್ತದೆ. ಈ ಹಿಂದಿನ ಹದಿನಾಲ್ಕು ಪ್ರಭೇದಗಳು ಈ ರೀತಿ ಇವೆ—1. ಉತ್ಪಾದಪೂರ್ವ 2. ಅಗ್ರಾಯ ಣೀಯ 3. ವೀರ್ಯಾನುವಾದ 4. ಅಸ್ತಿನಾಸ್ತಿಪ್ರವಾದ 5. ಜ್ಞಾನ ಪ್ರವಾದ 6. ಸತ್ಯಪ್ರವಾದ 7. ಆತ್ಮ ಪ್ರವಾದ 8. ಕರ್ಮಪ್ರವಾದ 9. ಪ್ರತ್ಯಾಖ್ಯಾನ 10. ವಿದ್ಯಾನುವಾದ 11. ಕಲ್ಯಾಣವಾದ 12. ಪ್ರಾಣವಾಯ 13. ಕ್ರಿಯಾ ವಿಶಾಲ ಮತ್ತು 14. ಲೋಕಬಿಂದುಸಾರ. ಇವುಗಳಲ್ಲಿ ಹೆಸರಿಗೆ ಅನುಗುಣವಾಗಿ ತತ್ವಗಳ ಪ್ರತಿಪಾದನೆ ಮಾಡಲಾಗಿದೆ. ಇವುಗಳಲ್ಲಿ ಎಂಟನೆಯ ಪೂರ್ವ ಕರ್ಮ ಪ್ರವಾದ ವಿಶೇಷ ಮಹತ್ವವುಳ್ಳದ್ದಾಗಿದೆ. ಕಾರಣ ಜೈನಧರ್ಮ ಪ್ರಾಣಭೂತ ಕರ್ಮ ಸಿದ್ಧಾಂತದ ಮೂಲ ಸ್ರೋತವಾಗಿದೆ. ಮತ್ತು ಇದರ ಆಧಾರದಿಂದಲೇ ಉತ್ತರ ಕಾಲೀನ ಕರ್ಮ-ಸಂಬಂಧ ಸಮಸ್ತ ಸಾಹಿತ್ಯವು ರಚನೆಯಾಗಿದೆ. ಈ ಎಲ್ಲ ರಚನೆಗಳನ್ನೂ ಪೂರ್ವಗತ ಎಂದು ಕರೆಯುವುದಕ್ಕೆ ಇಲ್ಲಿನ ವಿಷಯಗಳೆಲ್ಲವೂ ಮಹಾವೀರರಿಗಿಂತಲೂ ಹಿಂದಿನ ಕಾಲಕ್ಕೆ ಸೇರಿರುವುದೇ ಸಾಕ್ಷಿಯಾಗಿದೆ. ಇವುಗಳ ಮೂಲಕವೇ ಮಹಾವೀರರು ತಮ್ಮ ಸಿದ್ಧಾಂತಕ್ಕೆ ಅನುಗುಣವಾದ ಸಂಶೋಧನೆಗಳನ್ನು ಮಾಡಿರಬಹುದಾಗಿದೆ.

ದೃಷ್ಟಿವಾದದ ನಾಲ್ಕನೆಯ ಭೇದವಾದ ಅನುಯೋಗವು ಜೈನಸಾಹಿತ್ಯದಲ್ಲಿ ಮಹತ್ವಪೂರ್ಣ ಸ್ಥಾನ ಹೊಂದಿದೆ. ಇದನ್ನು ಪ್ರಥಮಾನುಯೋಗವೆಂದು ಸಹ ಕರೆಯಲಾಗುತ್ತಿದೆ. ಹಾಗೂ ಸಂಪೂರ್ಣ ಪೌರಾಣಿಕ ವೃತ್ತಾಂತ, ಧಾರ್ಮಿಕ ಚರಿತ್ರೆ, ಆಖ್ಯಾನಾತ್ಮಕ ಕತೆ ಮುಂತಾದುವುಗಳನ್ನು ಪ್ರಥಮಾನುಯೋಗದ ಚೌಕಟ್ಟನಲ್ಲಿ ಇಡಲಾಗಿದೆ. ಷಟ್‌ಖಂಡಾಗಮಸೂತ್ರ 1, 1, 2ರ ಸೂತ್ರ ಧವಲ ಟೀಕೆಯ ಅನು ಸಾರವಾಗಿ, ಪುರಾಣಗಳನ್ನು ಹನ್ನೆರಡು ಭೇದಗಳಾಗಿ ಪರಿಗಣಿಸಲಾಗಿದೆ. ಅವುಗಳಲ್ಲಿ ಕ್ರಮವಾಗಿ-ಅರಹಂತ, ಚಕ್ರವರ್ತಿ, ವಿದ್ಯಾಧರ, ವಾಸುದೇವ, ಚಾರಣ, ಪ್ರಜ್ಞಾ

ಶ್ರಮಣ, ಕುರು, ಹರಿ, ಇಕ್ಷ್ವಾಕು, ಕಾಶ್ಯಪ, ವಾದಿ ಹಾಗೂ ನಾಥ ಮುಂತಾದ ವಂಶಗಳ ವರ್ಣನೆಯಿದೆ.

ದೃಷ್ಟಿವಾದದ ಐದನೆಯ ಭೇದ ಚೂಲಿಕಾದ ಐದು ಪ್ರಭೇದಗಳೆಂದು ಪರಿಗಣಿಸಲಾಗಿದೆ-ಜಲ, ಸ್ಥಲ, ಆಕಾಶ, ಮಾಯಾ, ಮತ್ತು ರೂಪ. ಇವುಗಳಲ್ಲಿ ಜಲ-ತಲ ಮುಂತಾದ ವಿಷಯಗಳ ಭೌಗೋಳಿಕ ತಾತ್ವಿಕ ವಿಶ್ಲೇಷಣೆಯನ್ನು ನಡೆಸಿರಬಹುದು. ಹಾಗೂ ಅವುಗಳ ಮೇಲೆ ಅಧಿಕಾರ ಪಡೆಯಲು ಮಾಂತ್ರಿಕ-ತಾಂತ್ರಿಕ ಸಿದ್ಧಿ-ಸಾಧನೆಗಳನ್ನು ನಿರೂಪಿಸಿರಬಹುದು.

ದಿಗಂಬರ ಪರಂಪರೆಗನುಸಾರವಾಗಿ ಉಕ್ತ ಸಂಪೂರ್ಣ ಅಂಗ ಸಾಹಿತ್ಯವು ಕ್ರಮವಾಗಿ ತನ್ನ ಮೂಲರೂಪದಲ್ಲಿ (ವಿಲೋಪವಾಯಿತು) ಅದೃಶ್ಯವಾಯಿತು. ಮಹಾವೀರ ನಿರ್ವಾಣರಾದ 162 ವರ್ಷ ನಂತರ ಬಂದ ಎಂಟು ಜನ ಜೈನಮುನಿಗಳಿಗೆ ಈ ಅಂಗಗಳ ಸಂಪೂರ್ಣ ಜ್ಞಾನವಿತ್ತು. ಇವರಲ್ಲಿ ಕೊನೆಯವರನ್ನು ಶ್ರುತಕೇವಲಿ ಭದ್ರಬಾಹುಗಳೆಂದು ಕರೆಯಲಾಗಿದೆ. ಇದಾದನಂತರ ಕ್ರಮವಾಗಿ ಎಲ್ಲ ಅಂಗಗಳ ಮತ್ತು ಪೂರ್ವಗಳ ಜ್ಞಾನದಲ್ಲಿ ಉತ್ತರೋತ್ತರ ವಿನಾಶವಾಯಿತು. ಮತ್ತು ನಿರ್ವಾಣದಿಂದ 7 ಶತಮಾನದವರೆವಿಗೆ ಕೇವಲ ಕೆಲವು ಮಹಾಮುನಿಗಳಿಗೆ ಮಾತ್ರವೆ ಈ ಜ್ಞಾನದ ಕೆಲವಂಶ ಪ್ರಾಪ್ತವಾಗಿ, ಅದರಿಂದ ಸಂಪೂರ್ಣ ಜೈನಶಾಸ್ತ್ರ, ಪುರಾಣಗಳು ಸ್ವತಂತ್ರವಾಗಿ ಹೊಸರೂಪು ತಳೆದು, ಶೈಲಿಯಲ್ಲಿ ನವೀನತೆಯನ್ನು ತುಂಬಿಕೊಂಡು ದೇಶ-ಕಾಲಕ್ಕನುಗುಣವಾಗಿ ಪ್ರಚಲಿತವಿದ್ದ ಪ್ರಾಕೃತಾದಿ ಭಾಷೆಗಳಲ್ಲಿ ರಚನೆಯಾಯಿತು.

ಶ್ವೇತಾಂಬರ ಪರಂಪರೆಯ ಅನುಸಾರವಾಗಿ ವೀರ ನಿರ್ವಾಣದ ಹತ್ತನೆಯ ಶತಮಾನದಲ್ಲಿ ಮುನಿಗಳ ಒಂದು ಸಭೆ ಗುಜರಾತ್ ಪ್ರಾಂತದ ವಲ್ಲಭಿನಗರದಲ್ಲಿ ನಡೆಯಿತು. ಮತ್ತು ಅಲ್ಲಿ ಕ್ಷಮಾಶ್ರಮಣ ದೇವರ್ದ್ಧಿಗಣಿಯವರ ಅಧ್ಯಕ್ಷತೆಯಲ್ಲಿ ಉಕ್ತ ಅಂಗಗಳಿಂದ ಹನ್ನೊಂದು ಅಂಗಗಳನ್ನು ಆರಿಸಿ ಸಂಕಲನ ರೂಪದಲ್ಲಿ ತರಲಾಯಿತು. ಹಾಗೂ ಅದು ಈಗ ನಮಗೆ ದೊರೆತಿದೆ. ಈ ಸಂಕಲನ ಪೂರ್ಣವಾಗಿ ತನ್ನ ಮೌಲಿಕ ರೂಪವನ್ನು ಕಾಯ್ದುಕೊಂಡಂತೆ ಕಂಡುಬರುವುದಿಲ್ಲ. ವಿಷಯಗಳ ದೃಷ್ಟಿಯಲ್ಲಿ ಶಿಥಿಲತೆಯನ್ನು ಕಾಣುತ್ತೇವೆ. ಭಾಷೆಯೂ ಸಹ ಮಹಾವೀರರ ಕಾಲದಲ್ಲಿ ಪ್ರಚಲಿತವಿದ್ದ ಅರ್ಧಮಾಗಧಿ ಭಾಷೆಯಲ್ಲಿಲ್ಲ. ಅದರಲ್ಲಿ ಆ ಕಾಲದಿಂದ ಹಿಡಿದು ಒಂದು ಸಹಸ್ರ ವರ್ಷದವರೆಗಿನ ಅವಧಿಯಲ್ಲಿ ಆಗಿರಬಹುದಾದ, ಭಾಷೆಗೆ ಸಂಬಂಧಿಸಿದ ವಿಶೇಷತೆಗಳು ಸಮಾವೇಶಗೊಂಡಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಅವು ಪ್ರಾಚೀನ ವಿಷಯಗಳ ಶೈಲಿಯನ್ನು ಪ್ರತಿಪಾಲಿಸಲು ಶಕ್ತವಾಗಿವೆ. ಇವುಗಳು ಪ್ರಾಚೀನವಾದ ಬೌದ್ಧ ಸಾಹಿತ್ಯದಿಂದಲೂ ಸಾಮ್ಯವನ್ನು ಹೊಂದಿದಂತೆ ಕಂಡುಬರುತ್ತದೆ. ಯಾವರೀತಿಯಲ್ಲಿ ಬೌದ್ಧ ಸಾಹಿತ್ಯ ತ್ರಿಪಿಟಕ ಎಂದು ಕರೆಯಲಾಗುತ್ತದೆಯೋ ಅದೇ ರೀತಿಯಲ್ಲಿ ಜೈನ ಸಾಹಿತ್ಯ ಗಣಿಪಿಟಕ ಎಂಬ ಹೆಸರಿನಿಂದ ಸಿಗುತ್ತದೆ.

ಈ ಎಲ್ಲವನ್ನೂ ಅಂಗಪ್ರವಿಷ್ಠ ಎಂದು ಕರೆಯಲಾಗಿದೆ. ಇದಲ್ಲದೆ ಮುನಿಗಳ ಆಚಾರ ಹಾಗೂ ಕ್ರಿಯಾಕಲಾಪಗಳನ್ನು ವಿವರಣಾತ್ಮಕವಾಗಿ ತಿಳಿಸುವ ಅಂಗಬಾಹ್ಯ ಎಂಬ ಹೆಸರಿನಲ್ಲಿ ಹದಿನಾಲ್ಕು ರೀತಿಯ ಸಾಹಿತ್ಯ ಪ್ರಕಾರಗಳನ್ನು ಕಾಣುತ್ತೇವೆ. ಅವು ಈ ಕೆಳಗಿನಂತಿವೆ.

1. ಸಾಮಾಯಿಕ; 2. ಚತುರ್ವಿಂಶತಿಸ್ತವ; 3. ವಂದನೆ; 4. ಪ್ರತಿಕ್ರಮಣ; 5. ವೈನಯಿಕ, 6. ಕೃತಿಕರ್ಮ; 7. ದಶವೈಕಾಲಿಕ; 8. ಉತ್ತರಾಧ್ಯಯನ; 9. ಕಲ್ಪವ್ಯವಹಾರ; 10. ಕಲ್ಪಾಕಲ್ಪ; 11. ಮಹಾಕಲ್ಪ; 12. ಪುಂಡರೀಕ; 13. ಮಹಾಪುಂಡರೀಕ; 14. ನಿಷಿದ್ಧಿಕಾ.

ಈ ರಚನೆಗಳ ವಿಷಯ, ಧಾರ್ಮಿಕ ಸಾಧನೆಗಳು ಮತ್ತು ವಿಶೇಷತೆಗಳು, ಮುನಿಗಳ ಕ್ರಿಯಾಶಕ್ತಿ ಯಾವ ರೀತಿಯಲ್ಲಿ ಸಂಬಂಧಿಸಿದ್ದುದು ಎನ್ನುವುದು ಇಲ್ಲಿನ ಹೆಸರುಗಳಿಂದಲೇ ವೇದ್ಯವಾಗುತ್ತದೆ. ಈ ಹದಿನಾಲ್ಕು ರಚನೆಗಳು ತಮ್ಮ ಹಳೇ ಸ್ವರೂಪವನ್ನು ಬೇರೆ ಬೇರೆಯಾಗಿ ಹೊಂದಿಲ್ಲವಾದರೂ ಬೇರೆ ಬೇರೆ ಗ್ರಂಥಗಳಲ್ಲಿ ಸಮಾವೇಶಗೊಂಡಿದೆ. ಮತ್ತು ಜೈನ ಮುನಿಗಳ ಮೂಲಕ ಇಂದಿಗೂ ಪ್ರಚಲಿತದಲ್ಲಿದೆ. ವಲ್ಲಭಿಪುರದಲ್ಲಿ ಜೈನ ಮುನಿಗಳ ನೇತೃತ್ವದಲ್ಲಿ ಬಂದ ಹನ್ನೊಂದು ಸಂಕಲನಗಳಲ್ಲದೆ ಔಪಪಾತಿಕ, ರಾಯಪಸೇಣಿಯ ಮುಂತಾಗಿ (12) ಹನ್ನೆರೆಡು ಉಪಾಂಗಗಳು, ನಿಶೀಯ ಮಹಾನಿಶೀಯ ಇತ್ಯಾದಿಯಾದ ಆರು (6) ಛೇದಸೂತ್ರಗಳು, ಉತ್ತರಾಧ್ಯಯನ ಅವಶ್ಯಕ ಮುಂತಾದ ನಾಲ್ಕು (4) ಮೂಲಸೂತ್ರಗಳು ಚತುಃಶರಣ, ಆತುರ-ಪ್ರತ್ಯಾಖ್ಯಾನ ಮುಂತಾದ ಹತ್ತು (10) ಪ್ರಕೀರ್ಣಕಗಳು ಹಾಗೂ ಅನುಯೋಗದ್ವಾರ ಮತ್ತು ನಂದಿಯೆಂಬ ಎರಡು ಚೂಲಿಕ ಸೂತ್ರಗಳು ಕೂಡಿಕೊಂಡು ಅರ್ಧಮಾಗಧಿ ಆಗಮ ಗ್ರಂಥಗಳ ಸಂಖ್ಯೆ ನಲವತ್ತೈದಾಗಿ (45) ಶ್ವೇತಾಂಬರ ಸಂಪ್ರದಾಯದಲ್ಲಿ ಧಾರ್ಮಿಕ ಮಾನ್ಯತೆಯನ್ನು ಪಡೆದುಕೊಂಡಿದೆ. ಈ ಎಲ್ಲದರಿಂದ ಈ ಸಾಹಿತ್ಯ, ಭಾಷೆ, ಶೈಲಿ, ದರ್ಶನ, ಐತಿಹಾಸಿಕ ವಿಚಾರಗಳಿಗೆ ಪಾಲಿಸಾಹಿತ್ಯದ ಮಟ್ಟದಲ್ಲಿ ಮಹತ್ವಪೂರ್ಣವಾಗಿದೆ, ಶ್ರೇಷ್ಠತೆಯನ್ನು ಪಡೆದಿದೆ

## ಮಹಾವೀರರ ನಿರ್ವಾಣ ಕಾಲ.

ಭಗವಾನ್ ಮಹಾವೀರರು ಯಾವಾಗ ನಿರ್ವಾಣಹೊಂದಿದರು ಎನ್ನುವ ವಿಚಾರದಲ್ಲಿ, ಕಾರ್ತಿಕ ಕೃಷ್ಣಪಕ್ಷ ಚತುರ್ದಶಿ ರಾತ್ರಿಯ ಕಡೆಯ ಘಳಿಗೆ (ಚರಣ) ಅಥವಾ ಅಮಾವಾಸ್ಯೆಯ ಮುಂಜಾವಿಗೆ ಮುಂಚೆ ಎನ್ನುವುದು ಸ್ಪಷ್ಟವಾಗಿದೆ. ಮತ್ತು ಇದನ್ನು ದೇವತೆಗಳು ಮಾನವರು ದೀಪಾವಳಿಯೆಂಬ ಹೆಸರಿನಲ್ಲಿ ಆಚರಿಸಿದರು. ಇದನ್ನು ಅಂದಿನಿಂದ ಇಂದಿನವರೆವಿಗೂ ಕಾರ್ತಿಕ ದೀಪಾವಳಿ ಎಂಬ ಹೆಸರಿನಲ್ಲಿ ಅವರ ನಿರ್ವಾಣ ಮಹೋತ್ಸವ ಆಚರಿಸುತ್ತಿದ್ದಾರೆ. ಇದರ 2500ನೆಯ ಮಹೋತ್ಸವವನ್ನು ವಿಶ್ವದೆಲ್ಲೆಡೆ

ಈಗ ಆಚರಿಸಲಾಗುತ್ತಿದೆ. ಪಾಶ್ಚಾತ್ಯರ ಗ್ರಂಥಗಳಲ್ಲಿ ಕಾಲಕ್ಕೆ ಸಂಬಂಧಿಸಿದ ಹಾಗೆ ಅನೇಕ ವಿರೋದಾಭಾಸಗಳನ್ನು ಕಾಣುತ್ತೇವೆ. ಮತ್ತು ಬೇರೆ ಸಾಹಿತ್ಯದಲ್ಲಿ ದೊರೆಯಬಹುದಾದ ಉಲ್ಲೇಖಗಳಿಗೂ ಐತಿಹಾಸಿಕ ಘಟನೆಗಳಿಗೂ ಸಾಮ್ಯವೇ ಕಂಡು ಬರುವುದಿಲ್ಲ. ಹೀಗಾಗಿ ಈ ನಿರ್ವಾಣಕಾಲದ ವಿಚಾರವಾಗಿ ಆಧುನಿಕರಲ್ಲಿ ಬಹಳಷ್ಟು ಭಿನ್ನಾಭಿಪ್ರಾಯಗಳಿವೆ. ಒಂದು ಕಡೆ ಜರ್ಮನ್ ವಿದ್ವಾಂಸರಾದ ಡಾ|| ಯಾಕೋಬಿ ಯವರು ಮಹಾವೀರ ನಿರ್ವಾಣಕಾಲವನ್ನು ಕ್ರಿ. ಪೂ. 477 ಎಂದಿದ್ದಾರೆ. ಇವರು ಚಂದ್ರಗುಪ್ತ ಮೌರ್ಯನ ರಾಜ್ಯಾಭಿಷೇಕ ಕ್ರಿ. ಪೂ. 322 ಆಯಿತೆಂದು ಮತ್ತು ಹೇಮಚಂದ್ರನಿಂದ ರಚಿತವಾದ ಪರಿಶಿಷ್ಟಪರ್ವ (7–339)ದ ಅನುಸಾರವಾಗಿ ಈ ಅಭಿಷೇಕಮಹೋತ್ಸವವು ಮಹಾವೀರ ನಿರ್ವಾಣ ಹೊಂದಿದ 155 ವರ್ಷಗಳ ನಂತರ ಆಯಿತೆನ್ನುತ್ತಾರೆ. ಈ ರೀತಿಯಲ್ಲಿ ಮಹಾವೀರರು ನಿರ್ವಾಣಹೊಂದಿದ ಕಾಲ 322+155=477 ಆಗಿದೆ ಎಂದು ಸಿದ್ಧಪಡಿಸಿದ್ದಾರೆ. ಡಾ|| ಜಯಸ್ವಾಲ್‌ರ ಅಭಿ ಪ್ರಾಯದಲ್ಲಿ ಕ್ರಿ. ಪೂ. 456 ಎಂದಿದೆ. ಇವರು ಕೊಡುವ ಆಧಾರ ಈ ರೀತಿಯದು. ಬೌದ್ಧರ ಸಿಂಹಳ ದೇಶೀಯ ಪರಂಪರೆಯಲ್ಲಿ ಬುದ್ಧ ನಿರ್ವಾಣಹೊಂದಿದಕಾಲ ಕ್ರಿ. ಪೂ. 544 ಎಂದಿದೆ. ಹಾಗೂ ಮಜ್ಜಿಮನಿಕಾಯ ಸೂಕ್ತಿ ಮತ್ತು ತ್ರಿಪಿಟಕೆಯಲ್ಲಿ ವಿಷಯ ಈ ರೀತಿ ಬರುತ್ತದೆ. ಬುದ್ಧನಿಗೆ ತಮ್ಮ ಒಬ್ಬ ಶಿಷ್ಯನಮೂಲಕ ಪಾವಾದಲ್ಲಿ ಮಹಾವೀರ ನಿರ್ವಾಣಹೊಂದಿದರೆಂದು ತಿಳಿಯುತ್ತದೆ. ಇದಾದ ಎರಡು ವರ್ಷಗಳ ನಂತರ ಬುದ್ಧ ನಿರ್ವಾಣ ಹೊಂದುತ್ತಾರೆ. ಈ ಎಲ್ಲವನ್ನು ಆಧಾರವಾಗಿಟ್ಟುಕೊಂಡರೆ ಜಯಸ್ವಾಲ್‌ರವರು ಮಹಾವೀರರು ನಿರ್ವಾಣ ಹೊಂದಿದ ಕಾಲ ಕ್ರಿ. ಪೂ. 546 ಎಂದಿದ್ದಾರೆ. ವಿಚಾರಮಾಡಿ ನೋಡಿದಾಗ ಈ ಎರಡು ಪ್ರಾಮಾಣಿಕವಾಗಿ ಸಿದ್ಧವಾಗುವುದಿಲ್ಲ. ಜೈನಸಾಹಿತ್ಯದ ಹಾಗೂ ಐತಿಹಾಸಿಕ ಶುದ್ಧಪರಂಪರೆಯಲ್ಲಿ ವೀರ ನಿರ್ವಾಣದ ಕಾಲ ವಿಕ್ರಮಸಂವತ್ಸರ 470 ರ ಪೂರ್ವದಲ್ಲಿ, ಹಾಗೂ ಶಕೆಯಲ್ಲಿ 605 ರ ಪೂರ್ವದಲ್ಲಿ ಆಗಿದೆಯೆಂದು ತಿಳಿಯುತ್ತದೆ. ಈ ಪರಂಪರೆಯಲ್ಲಿ ಐತಿಹಾಸಿಕ ವಿಚಾರ ಈ ಕ್ರಮದಲ್ಲಿದೆ. ಭಗವಾನ್ ಮಹಾವೀರರು ನಿರ್ವಾಣಹೊಂದಿದ ರಾತ್ರಿಯಲ್ಲಿ ಉಜ್ಜಯಿನಿಯ ಪಾಲಕರಾಜನಿಗೆ ಅಭಿಷೇಕವಾಗುತ್ತದೆ. ಪಾಲಕರಾಜ 60 ವರ್ಷ ರಾಜ್ಯಭಾರ ನಡೆಸಿದಂತೆ ತೋರುತ್ತದೆ. ಇದರ ನಂತರ ನಂದವಂಶೀಯ ರಾಜರು 155 ವರ್ಷ, ಮೌರ್ಯ ವಂಶದವರು 107 ವರ್ಷ, ಪುಷ್ಯಮಿತ್ರ 30 ವರ್ಷ, ಬಾಲಮಿತ್ರ ಹಾಗೂ ಭಾನು ಮಿತ್ರ 60 ವರ್ಷ, ನಹಪಾನ (ನಹವಾನ) ನರವಾಹನ ಅಥವಾ ನಹಸೇನ 40 ವರ್ಷ, ಗರ್ದಭಿಲ್ಲ 13 ವರ್ಷ, ಹಾಗೂ ಮತ್ತೊಬ್ಬ ರಾಜ 4 ವರ್ಷ ಆಳಿದಂತೆಯೂ ಇದಾದ ನಂತರ ವಿಕ್ರಮಶಕೆ ಆರಂಭವಾಯಿತೆಂದು ತಿಳಿಯುತ್ತದೆ. ಈ ರೀತಿಯಲ್ಲಿ ನಿರ್ವಾಣದಿಂದ 60+155+155+107+30+60+40+13+4=470 ವಿಕ್ರಮ ಸಂವತ್ಸರದ ಆರಂಭದವರೆವಿಗೂ ಸಿದ್ಧವಾಗುತ್ತದೆ. ಡಾ|| ಯಾಕೋಬಿ ಅವರು ಆಚಾರ್ಯ ಹೇಮಚಂದ್ರನ ಮತವನ್ನು ಆಧಾರವಾಗಿಟ್ಟು

ಕೊಂಡು ವೀರ-ನಿರ್ವಾಣ ಮತ್ತು ಚಂದ್ರಗುಪ್ತ ಮೌರ್ಯರ ನಡುವೆ 155 ವರ್ಷದ ಅಂತರವನ್ನು ಆಧಾರವಾಗಿಟ್ಟುಕೊಂಡು ಮಾಡಿರತಕ್ಕ ಕಾಲನಿರ್ಣಯವು. ಪ್ರಸ್ತುತ ಸರಿಯಲ್ಲವೆಂದು ತೋರುತ್ತದೆ. ಇವರು ಹೇಮಚಂದ್ರನು ಪರಿಶಿಷ್ಟ ಪರ್ವವನ್ನು ಸಂಪಾದನೆ ಮಾಡಿದ್ದರು. ಕೃತಿಯ ರಚನೆಯಲ್ಲಿ ಅನೇಕ ತಪ್ಪುಗಳು ಇರಬಹುದು ಎಂದಿದ್ದಾರೆ. ವೀರನಿರ್ವಾಣ ಚಂದ್ರಗುಪ್ತನ ಕಿರೀಟಧಾರಣ ಕಾಲದ ಅಂತರ ಹುಡುಕುವಲ್ಲಿ ಪಾಲರಾಜನ 60 ವರ್ಷವನ್ನು ಮರೆತಿದ್ದಾರೆ. ಇದೂ ಸಹ ಆ ತಪ್ಪುಗಳಲ್ಲಿ ಒಂದಾಗಿರಬಹುದು. ಈ 60 ವರ್ಷವನ್ನು ಸೇರಿಸಿದಲ್ಲಿ ಇವರು ತೋರಿಸಿರುವ 155 ವರ್ಷದ ಅಂತರವು 215 ಆಗುತ್ತದೆ. ಇದಲ್ಲದೆ ಸ್ವತಃ ಹೇಮಚಂದ್ರನೇ ತನ್ನ ತ್ರಿಷಷ್ಟಿ ಶಲಾಕಾ ಪುರುಷರ ಚರಿತ್ರೆಯಲ್ಲಿ (ಪರ್ವ 60 ಸರ್ಗ 12, ಶ್ಲೋಕ 45-46) ನಿರ್ವಾಣವಾದ 1669 ವರ್ಷದ ನಂತರದಲ್ಲಿ ಕುಮಾರಪಾಲ ರಾಜನಾದ ಎಂದಿದ್ದಾನೆ. ಕುಮಾರಪಾಲನ ರಾಜ್ಯಾಭಿಷೇಕ 1142 ರಲ್ಲಿ ಆಯಿತೆಂದು ಅನ್ಯ ಆಧಾರಗಳಿಂದ ತಿಳಿದುಬರುತ್ತದೆ. ಹೀಗಾಗಿ ಈ ಎಲ್ಲದರ ಅನುಸಾರವಾಗಿ ವೀರನಿರ್ವಾಣದ ಕಾಲ 1669-1142, ಅಂದರೆ ಕ್ರಿ. ಪೂ. 527 ಇದ್ದಿರಬಹುದೆಂದು ಹೇಳಬಹುದು.

ಡಾ|| ಜಯಸ್ವಾಲ್‌ರು ಬುದ್ಧನಿರ್ವಾಣ ಕಾಲ ಸಿಂಹಳೀಯ ಪರಂಪರೆಯ ಆಧಾರದ ಮೇಲೆ ಕ್ರಿ. ಪೂ. 544 ಎಂದಿದ್ದರೂ ಅನ್ಯ ಆಧಾರಗಳಿಂದ ಪರಿಶೀಲಿಸಿದಾಗ ಅದೂ ಸಹ ಸರಿಯಲ್ಲವೆಂದು ತೋರುತ್ತದೆ. ಇವುಗಳಿಂದ ಪ್ರಾಚೀನವಾದ ಸಿಂಹಳೀಯ ಪ್ರಾಚೀನ ಪರಂಪರೆಯ ಅನುಸಾರವಾಗಿ ಮೌರ್ಯ ಸಾಮ್ರಾಟ ಅಶೋಕನ ರಾಜ್ಯಾಭಿಷೇಕ ಬುದ್ಧ ನಿರ್ವಾಣಹೊಂದಿದ 218 ವರ್ಷಗಳ ನಂತರದಲ್ಲಿ ಆಯಿತೆಂದು ತಿಳಿಯುತ್ತದೆ. ಅಶೋಕನ ರಾಜ್ಯಾಭಿಷೇಕ ಕ್ರಿ. ಪೂ. 269ನೆಯ ವರ್ಷದಲ್ಲಿ ಅಥವಾ ಸುಮಾರು ಈ ಅವಧಿಯಲ್ಲಿ ಆಗಿರಬೇಕೆಂಬುದಕ್ಕೆ ಐತಿಹಾಸಿಕ ಪ್ರಮಾಣಗಳು ದೊರಕುತ್ತವೆ. ಅಂದರೆ ಬುದ್ಧನ ನಿರ್ವಾಣದ ಕಾಲ 218+269=ಕ್ರಿ. ಪೂ. 487 ಎಂದು ತಿಳಿದು ಬರುತ್ತದೆ. ಚೀನದ ಒಂದು ಪರಂಪರೆಯು ಇದನ್ನೇ ಪುಷ್ಟೀಕರಿಸುತ್ತದೆ. ಚೀನಾದ ಕ್ಯಾಂಟನ್ ಎಂಬ ನಗರದಲ್ಲಿ ಬುದ್ಧ ನಿರ್ವಾಣ ಹೊಂದಿದ ಕಾಲವನ್ನು ಸ್ಮರಣೆಯಲ್ಲಿಡಲು ಬಿಂದುಗಳ ಮೂಲಕ ಕಾಯ್ದಿಡುವ ಅಥವಾ ಸಂರಕ್ಷಿತವಾಗಿರಿಸುವ ಪ್ರಯತ್ನ ನಡೆಯುತ್ತಿತ್ತು. ಪ್ರತಿವರ್ಷ ಇದರ ನೆನಪಿನಲ್ಲಿ ಒಂದೊಂದು ಬಿಂದು ದ್ರವವನ್ನು ಸಂಗ್ರಹಿಸಲಾಗುತ್ತಿತ್ತು. ಈ ಬಿಂದುಗಳ ಸಂಖ್ಯೆ ನಿರಂತರವಾಗಿ ಇಸ್ವಿಸನ್ 489 ರವರೆಗೂ ನಡೆದುಬಂದಿತು. ಮತ್ತು ಆ ಕಾಲದ ನಡುವಿನ ಬಿಂದುಗಳ ಸಂಖ್ಯೆ 975 ಆಗಿತ್ತೆಂದೂ ತಿಳಿಯುತ್ತದೆ. ಈ ರೀತಿಯಲ್ಲಿ ಸಿಂಹಳ ಹಾಗೂ ಚೀನೀ ಪರಂಪರೆಯಲ್ಲಿ ಸಾಮಂಜಸ್ಯವನ್ನು ಕಾಣುತ್ತೇವೆ. ಬುದ್ಧ ನಿರ್ವಾಣದ (975-489 =ಕ್ರಿ. ಪೂ. 486) ಈ ಕಾಲ ಸ್ವೀಕಾರ ಯೋಗ್ಯವಾಗಿದೆ.

ಸ್ವಯಂ ಪಾಲಿ ತ್ರಿಪಿಟಕೆಯಲ್ಲಿಯೂ ಸಹ ಈ ವಿಚಾರ ಸ್ಪಷ್ಟವಾಗಿದೆ. ಮಹಾವೀರ, ವಯಸ್ಸಿನಲ್ಲಿ ಹಾಗೂ ತಪಸ್ಸಿನಲ್ಲಿ ಜ್ಯೇಷ್ಠನಾಗಿದ್ದ, ಮತ್ತು ನಿರ್ವಾಣವು ಸಹ

ಬುದ್ಧನ ಜೀವಿತ ಕಾಲದಲ್ಲಿಯೇ ನಡೆಯಿತು. ಶ್ರಾಪ್ರಣ್ಯ ಫಲ ಸುಕ್ತ, ಸಂಯುಕ್ತ-ನಿಕಾಯದ ದಹರ ಸೂಕ್ತ, ಹಾಗೂ ಸುಕ್ತ ನಿಪಾತಕೆಯ ಸಮಿಯ ಸುತ್ತಾದಲ್ಲಿ ಬುದ್ಧನ ಹಿಂದಿನವರ ಆರು ಜನ ತೀರ್ಥಂಕರರ ಉಲ್ಲೇಖ ಸಿಗುತ್ತದೆ. ಪೂರಣ ಕಶ್ಯಪ, ಮಖ್ಖಲಿಗೋಶಾಲ, ನಿಗಂಠನಾಥಪುತ್ತ. (ಮಹಾವೀರ), ಸಂಜಯ ಬೇಲಟ್ಟಪುತ್ರ, ಪ್ರಕುಧ ಕಚ್ಚಾಯನ ಮತ್ತು ಅಜಿತಕೇಶ ಕಂಬಲಿ.

ಈ ಎಲ್ಲರನ್ನೂ ಜನತೆ ಸನ್ಮಾನಿಸಿ ಅನುಭವಿ, ಚಾರುಪ್ರವಜಿತ, ಅಥವಾ ವಯೋವೃದ್ಧ ಎಂದು ಕರೆಯಲಾಗುತ್ತಿತ್ತು. ಆದರೆ ಬುದ್ಧನಿಗೆ ಈ ಯಾವ ಉಪಾಧಿಗಳು ದೊರೆಯಲಿಲ್ಲ. ಇದರ ಬದಲಾಗಿ ಅವನಿಗೆ ಜನ್ಮದಿಂದಲೇ ಅಲ್ಪವಯಸ್ಕ ಅಥವಾ ಪ್ರಜಾಯಾಮೆ ಎಂದು ಕರೆಯಲಾಗಿದೆ. ಇದರಿಂದಾಗಿ ಮಹಾವೀರರು ಬುದ್ಧನಿಗಿಂತ ಹಿರಿಯ ಹಾಗೂ ಇವನಿಗೆ ಮೊದಲೆ ಪ್ರವ್ರಜಿತನಾಗಿದ್ದ ಎನ್ನಬಹುದಂದು ವೇದ್ಯವಾಗುತ್ತದೆ.

ಮಜ್ಝಿಮನಿಕಾಯದ ಸಾಮಗಾಮ ಸೂಕ್ತದಲ್ಲಿ ಈ ವರ್ಣನೆ ದೊರೆಯುತ್ತದೆ. ಭಗವಾನ್ ಬುದ್ಧ ಸಾಮಗಾಮದಲ್ಲಿ ವಿಹಾರ ಮಾಡುತ್ತಿದ್ದಾಗ ಚುಂದ ಎಂಬ ಹೆಸರಿನ ಶ್ರವಣ ಬರುತ್ತಾನೆ. ಮತ್ತು ಪಾವಾದಲ್ಲಿ ನಿಗಂಠ ನಾಥಪುತ್ತ (ಮಹಾವೀರ)ನ ಮೃತ್ಯು ಸಂಭವಿಸಿತೆಂದು ತಿಳಿಸುತ್ತಾನೆ; ಇದರಿಂದಾಗಿ ಮಹಾವೀರರ ಅನುಯಾಯಿಗಳಲ್ಲಿ ಕಲಹ ಪ್ರಾರಂಭವಾಗಿರುತ್ತದೆ. ಬುದ್ಧನ ಪ್ರಿಯ ಶಿಷ್ಯನಾದ ಆನಂದನಿಗೆ ಈ ಸುದ್ದಿಯಿಂದ, ಬುದ್ಧನ ಸಾವಿನ ನಂತರವು ಇದೇ ರೀತಿಯ ಗಲಭೆಯಾಗಬಹುದೇನೋ ಎಂಬ ಸಂಶಯ ಬರುತ್ತದೆ. ಹಾಗೂ ಇದನ್ನು ಆತ ಬುದ್ಧನ ಮುಂದೆಯೂ ಪ್ರಸ್ತಾಪಿಸುತ್ತಾನೆ. ಇದೇ ವೃತ್ತಾಂತವನ್ನು ದೀಗನಿಕಾಯದಲ್ಲಿಯೂ ಪಡೆಯುತ್ತೇವೆ. ಇದೇ ನಿಕಾಯದ ಸಂಗೀತಿ ಪರಿಯಾಯ ಸುತ್ತದಲ್ಲಿಯೂ ಸಹ ಬುದ್ಧನ ಸಂಘದಲ್ಲಿ ಮಹಾವೀರ ನಿರ್ವಾಣ ಹೊಂದಿದ ಅದೇ ಸಮಾಚಾರ ತಲುಪುತ್ತದೆ. ಮತ್ತು ಬುದ್ಧನ ಶಿಷ್ಯನಾದ ಸಾರಿಪುತ್ತನೆಂಬ ಭಿಕ್ಷುಕ ಎಲ್ಲರನ್ನೂ ಆಮಂತ್ರಿಸಿ ಈ ಸಮಾಚಾರವನ್ನು ತಿಳಿಸುತ್ತಾನೆ. ಹಾಗೂ ಬುದ್ಧ ನಿರ್ವಾಣ ಹೊಂದಿದ ನಂತರ ಈ ರೀತಿಯ ವಿವಾಧ ಏಳದಿರುವಂತೆ ಎಚ್ಚರಿಸುತ್ತಾನೆ. ಇದನ್ನೂ ಕೇಳಿದ ಬುದ್ಧನು ಸಾಧು ಸಾಧು ಸಾರಿಪುತ್ರ, ನೀನು ಭಿಕ್ಷುಕರಿಗೆ ಒಳ್ಳೆಯ ಉಪದೇಶವನ್ನು ನೀಡಿದ್ದೀಯೆ ' ಎನ್ನುತ್ತಾನೆ. ಈ ಪ್ರಕರಣ ನಿಸ್ಸಂದೇಹವಾಗಿಯೂ ಮಹಾವೀರರ ನಿರ್ವಾಣ ಬುದ್ಧನ ಜೀವನ ಕಾಲದಲ್ಲಿ ಆಯಿತೆನ್ನುವುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಇಷ್ಟೇ ಅಲ್ಲ, ಇದರಿಂದ ಅವನ ಅನುಯಾಯಿಗಳಲ್ಲಿ ವಿವಾದ ಎದ್ದಿತು. ಇದರಿಂದ ಬುದ್ಧನ ಸಂಘದಲ್ಲಿ ಚಿಂತೆಯು ಆವರಿಸಿತ್ತು. ಅದಕ್ಕಾಗಿ ಪರಿಹಾರವನ್ನು ಹುಡುಕಲು ಯತ್ನಿಸಲಾಗಿತ್ತು. ಈ ರೀತಿಯಾಗಿ ಮಹಾವೀರ ನಿರ್ವಾಣವು ಬುದ್ಧಪೂರ್ವವೆಂದು ನಿಸ್ಸಂದೇಹವಾಗಿ ಸ್ಪಷ್ಟವಾಗುತ್ತದೆ. ಮತ್ತು ಅವರಿಬ್ಬರ ಪರಂಪರಾಗತ ನಿರ್ವಾಣ ವಿಧಿಯಲ್ಲಿ ಸಹ ಸಾಮ್ಯವನ್ನು ಕಾಣುತ್ತೇವೆ.

## 8. ಮಹಾವೀರರ ಜನ್ಮಸ್ಥಾನ (ಜನ್ಮಭೂಮಿ)

(ಪ್ರಸ್ತುತ ಗ್ರಂಥ ಸಂಧಿ 1 ಕಡವಕ 6-7ರಲ್ಲಿ ಬರುವಂತೆ)

ಜಂಬೂದ್ವೀಪದ ಭರತ ಕ್ಷೇತ್ರದಲ್ಲಿ ಇರುವ ಕುಂಡಪುರದ ರಾಜ ಸಿದ್ಧಾರ್ಥ ಹಾಗೂ ರಾಣಿ ಪ್ರಿಯಕಾರಿಣಿಗೆ 24ನೇ ತೀರ್ಥಂಕರನಾದ ಮಹಾವೀರ ಜನಿಸುತ್ತಾನೆ. ಇದರಿಂದ ಮಹಾವೀರರ ಜನ್ಮ ಕುಂಡಪುರದಲ್ಲಿ ಆಯಿತೆಂಬುದಂತೂ ಸ್ಪಷ್ಟವಾಗುತ್ತದೆ. ಆದರೆ ಅಲ್ಲಿ ಭಾರತದಲ್ಲಿತ್ತು ಎನ್ನುವುದನ್ನು ಬಿಟ್ಟಿಲ್ಲ. ಇನ್ಯಾವುದೇ ಆಧಾರ ದೊರೆಯು ವುದಿಲ್ಲ ಮತ್ತು ಬೇರೆ ಪ್ರದೇಶಗಳ ಸೂಚನೆಯೂ ಅಲ್ಲಿಲ್ಲ. ಬದಲಾಗಿ ಕುಂಡಪುರ ವಿದೇಹ ಪ್ರದೇಶದಲ್ಲಿತ್ತೆನ್ನುವುದಕ್ಕೆ ಅನ್ಯ ಆಧಾರಗಳು ಸಾಕಷ್ಟು ದೊರೆಯುತ್ತವೆ. ಉದಾಹರಣೆಗೆ-ಪೂಜ್ಯಪಾದ ಸ್ವಾಮಿಯವರಿಂದ ರಚಿಸಲ್ಪಟ್ಟ ನಿರ್ವಾಣ ಭಕ್ತಿಯಲ್ಲಿ ಈ ರೀತಿ ಹೇಳಲ್ಪಟ್ಟಿದೆ;

"ಸಿದ್ಧಾರ್ಥ-ನೃಪತಿ-ತನಯೋ ಭಾರತವಾಸ್ಯೇ ವಿದೇಹ-ಕುಂಡಪುರೇ" ರಾಜ ಸಿದ್ಧಾರ್ಥನ ಮಗ ಮಹಾವೀರರ ಜನ್ಮ ಭಾರತವರ್ಷದ ವಿದೇಹ ಪ್ರದೇಶದಲ್ಲಿ ಇರುವ ಕುಂಡಪುರದಲ್ಲಿ ಆಯಿತು. ಇದೇ ರೀತಿಯಲ್ಲಿ ಜಿನಸೇನನಿಂದ ರಚಿತವಾಗಿರ ಬಹುದಾದ ಹರಿವಂಶಪುರಾಣದಲ್ಲಿ (ಸರ್ಗ 2 ಶ್ಲೋಕ 1ರಿಂದ 5) ಕೂಡ ಈ ರೀತಿ ಹೇಳಲ್ಪಟ್ಟಿದೆ;

ಅಥ ದೇಶೋಸ್ತಿ ವಿಸ್ತಾರೊ ಜಂಬೂದ್ವೀಪಸ್ಯ ಭಾರತೇ ।
ವಿದೇಹ ಇತಿ ವಿಖ್ಯಾತಃ ಸ್ವರ್ಗ ಖಂಡಸಮಃ ಶ್ರಿಯಾ ॥
ತತ್ರಾಖಂಡಲ ನೇತ್ರಾಲೀ ಪದ್ಮಿ ನೀಖಂಡಮಂಡನಮ್ ।
ಸುಖಾಂಭಃ ಕುಂಡಮಾಭಾತಿ ನಾಮ್ನಾ ಕುಂಡಪುರಂ ಪುರಮ್॥

ಅರ್ಥಾತ್, ಜಂಬೂದ್ವೀಪದ ಭರತಕ್ಷೇತ್ರದಲ್ಲಿ ವಿಶಾಲವೂ, ವಿಖ್ಯಾತವೂ ಸಮೃದ್ಧಿ ಯಲ್ಲಿ ಸ್ವರ್ಗಕ್ಕೆ ಸಮಾನವೂಆಗಿ ವಿದೇಹ ದೇಶವಿದೆ. ಅದರಲ್ಲಿ ಕುಂಡಪುರ ಹೆಸರಿನ ನಗರವು ಶೋಭಾಯಮಾನವಾಗಿ ಕಾಣಿಸುತ್ತಿದೆ. ಸುಖರೂಪಿ ಜಲದ ಕುಂಡವೇ ಇದ್ದಂತೆ ಹಾಗೂ ಇಂದ್ರನ ಸಹಸ್ರ ನೇತ್ರ ಪಂಕ್ತಿಯಂತೆ ಕಮಲಗಳಿಂದ ಶೋಭಿಸು ತ್ತಿದೆ. ಗುಣಭದ್ರಕೃತ ಉತ್ತರ ಪುರಾಣ (ಪರ್ವ 74 ಶ್ಲೋಕ 251-252) ದಲ್ಲಿಯೂ ಸಹ ಈ ವಿವರ ಪಡೆಯುತ್ತೇವೆ.

ಭರತೇಸ್ಮಿನ್ವಿದೇಹಾಖ್ಯೇ ವಿಷಯೇ ಭವನಾಂಗಣೇ ।
ರಾಜ್ಞಃ ಕುಂಡಪುರೇಶಸ್ಯ ವಸುಧಾರಾಪತತ್ಪೃಥುಃ ॥

ಅರ್ಥಾತ್ ಇದೇ ಭರತ ಕ್ಷೇತ್ರದ ವಿದೇಹ ಎಂಬ ದೇಶದಲ್ಲಿ ಕುಂಡಪುರ ರಾಜನ ಅರಮನೆಯ ಅಂಗಳದಲ್ಲಿ ಐಶ್ವರ್ಯದ ಹೊಳೆ ಹರಿದಿತ್ತು.

ಅರ್ಧಮಾಗಧಿ ಆಗಮದ ಆಚಾರಾಂಗ ಸೂತ್ರ (2, 15) ಹಾಗೂ ಕಲ್ಪಸೂತ್ರ (110)ದಲ್ಲಿಯೂ ಇದನ್ನೆ ಪ್ರತಿಪಾದಿಸಲಾಗಿದೆ :

"ಸಮಣೆ ಭಗವಂ ಮಹಾವೀರೇ ಣಾಏ ಣಾಯಪುತ್ತೇ ಣಾಯ ಕುಲಣಿವ್ವತ್ತೇ
ವಿದೇಹೆ ವಿದೇಹದಿತ್ತೇ ವಿದೇಹ ಜಚ್ಚೇ ವಿದೇಹ ಸುಮಾಲೆ ತೀಸಂ ವಾಸಾಯಿಂ
ವಿದೇಹಂಸಿ ಕಟ್ಟು ಆಗಾರಮಝೆ ವಸಿತ್ತಾ.........॥"

ಅರ್ಥಾತ್ ಜ್ಞಾತೃ, ಜ್ಞಾತಪುತ್ರ, ಜ್ಞಾತೃಕುಲೋತ್ಪನ್ನ, ವೈದೇಹ, ವಿದೇಹದತ್ತ, ವಿದೇಹ ಜಾತ್ಯ, ವಿದೇಹ ಸುಕುಮಾರ, ಶ್ರಮಣ ಭಗವಾನ ಮಹಾವೀರರು 30 ವರ್ಷ ವಿದೇಹ ದೇಶದಲ್ಲಿ ಗೃಹ ನಿವಾಸಿಯಾಗಿ ಪ್ರವ್ರಜಿತರಾದರು.

ಇದೇ ರೀತಿಯಲ್ಲಿ ಇನ್ನೂ ಅನೇಕ ಉದಾಹರಣೆಗಳನ್ನು ಉಲ್ಲೇಖಿಸಬಹುದಾದರೂ ಈ ಆಧಾರಗಳಿಂದಲೆ ಮಹಾವೀರರ ಜನ್ಮಸ್ಥಾನದ ಹೆಸರು ಕುಂಡಪುರವಾಗಿತ್ತೆಂದೂ ಮತ್ತು ಆ ಕುಂಡಪುರ ವಿದೇಹದಲ್ಲಿತ್ತೆಂದೂ ತಿಳಿಯುತ್ತದೆ. ಸೌಭಾಗ್ಯದಿಂದಾಗಿ ವಿದೇಹ ರಾಜ್ಯದ ಸೀಮಾರೇಖೆಯ ಬಗ್ಗೆ ಯಾವ ವಿವಾದವೂ ಇಲ್ಲ. ಪ್ರಾಚೀನ ಕಾಲದಿಂದಲೂ ಬಿಹಾರ ರಾಜ್ಯದ ಗಂಗಾ ನದಿಯ ಉತ್ತರಭಾಗ ವಿದೇಹವೆಂಬುದಾಗಿ ದಕ್ಷಿಣಭಾಗ ಮಾಗಧವೆಂಬುದಾಗಿ ಪ್ರಸಿದ್ಧವಾಗಿದೆ. ಇದೇ ವಿದೇಹ ಪ್ರದೇಶವನ್ನು ತೀರ ಭುಕ್ತಿ ಹೆಸರಿನಿಂದಲೂ ಕರೆಯುತ್ತಾರೆ. ಇದರ ವರ್ತಮಾನ ರೂಪವಾದ ತಿರಹುತ್ ಈಗಲೂ ಪ್ರಚಲಿತದಲ್ಲಿದೆ. ಪುರಾಣಗಳಲ್ಲಿ ಇದರ ಗಡಿ ರೇಖೆಗಳು ಈ ರೀತಿಯಲ್ಲಿ ನಿರ್ದಿಷ್ಟವಾಗಿ ಉಲ್ಲೇಖಿತವಾಗಿವೆ :

ಗಂಗಾ–ಹಿಮವತೋರ್ಮಧ್ಯೇ ನದೀಪಂಚದಶಾಂತರೇ ।
ತೀರಭುಕ್ತಿ ರಿತಿ ಖ್ಯಾತೋ ದೇಶಃ ಪರಮ ಪಾವನಃ ॥
ಕೌಶಿಕೀಂ ತು ಸಮಾರಭ್ಯ ಗಂಡಕೀ ಮಧಿಗಮ್ಯವೈ ।
ಯೋಜನಾನಿ ಚತುರ್ವಿಂಶದ್ ವ್ಯಾಯಾಮಃ ಪರಿ ಕೀರ್ತಿತಃ ॥
ಗಂಗಾ–ಪ್ರವಾಹಮಾರಭ್ಯ ಯಾವದ್ ಹೈಮವತಂ ವರಮ್ ।
ವಿಸ್ತಾರಃ ಷೋಡಶಂ ಪ್ರೋಕ್ತೋ ದೇಶಸ್ಯ ಕುಲನಂದನ ॥

ಈ ರೀತಿಯಲ್ಲಿ ವಿದೇಹ ಅರ್ಥಾತ್ ತೀರ ಭುಕ್ತಿ (ತಿರಹುತ್) ಪ್ರದೇಶದ ಸೀಮಾರೇಖೆ ಸುನಿಶ್ಚಿತವಾಗಿದೆ. ಉತ್ತರದಲ್ಲಿ ಹಿಮಾಲಯ, ದಕ್ಷಿಣದಲ್ಲಿ ಗಂಗಾ ನದಿ ಮತ್ತು ಪೂರ್ವದಲ್ಲಿ ಕೌಶಿಕೀ ಪಶ್ಚಿಮದಲ್ಲಿ ಗಂಡಕೀ ನದಿಯಿತ್ತೆಂದು ತಿಳಿದು ಬರುತ್ತದೆ. ಆದರೆ ವಿದೇಹದ ಈ ಗಡಿ ರೇಖೆಗಳು ಸಹ ಒಂದು ವಿಶಾಲ ಕ್ಷೇತ್ರವನ್ನು ಸೂಚಿಸುತ್ತವೆ ಮತ್ತು ಈಗ ನಮಗೆ (ಕಾಡುವ ಪ್ರಶ್ನೆಯೆಂದರೆ) ಉಂಟಾಗುವ ಸಮಸ್ಯೆಯೆಂದರೆ ಈ ವಿಶಾಲ ಕ್ಷೇತ್ರದಲ್ಲಿ ಕುಂಡಪುರದ ಸ್ಥಾನ ಎಲ್ಲಿತ್ತು ಎನ್ನುವುದಾಗಿದೆ. ಇದನ್ನು ನಿರ್ಣಯಿಸುವಲ್ಲಿ ನಮ್ಮ ಗಮನ ಮಹಾವೀರರ ಜ್ಞಾತೃ ಕುಲೋತ್ಪನ್ನ, ಜ್ಞಾತೃಪುತ್ರ ಮುಂತಾದ ವಿಶೇಷಣಗಳ ಕಡೆ ಹರಿಯುತ್ತದೆ. ಈ ಜ್ಞಾತೃ ಕ್ಷತ್ರಿಯ

ವಂಶ ಎಲ್ಲಿತ್ತು ಎಂಬ ಪ್ರಶ್ನೆ ಬಂದಾಗ ಇದರ ಸಂಕೇತ ನನಗೆ ಬೌದ್ಧ ಸಾಹಿತ್ಯದ ಅತಿ ಪ್ರಾಚೀನ ಗ್ರಂಥಗಳಲ್ಲಿ ಒಂದಾದ 'ಮಹಾವಸ್ತು'ವಿನಲ್ಲಿ ದೊರೆಯುತ್ತದೆ. ಅಲ್ಲಿ ಇದರ ಪ್ರಸಂಗ ಈ ರೀತಿಯಾಗಿ ಬರುತ್ತದೆ. ಒಮ್ಮೆ ಬುದ್ಧ ಗಂಗಾನದಿಯನ್ನು ದಾಟಿ ವೈಶಾಲಿಯ ಕಡೆ ನಡೆದಿದ್ದರು ಮತ್ತು ಅವರನ್ನು ಸ್ವಾಗತಿಸಲು ವೈಶಾಲಿ ಸಂಘಾರಾಮದ ಲಿಚ್ಛವಿ ಮುಂತಾದ ಅನೇಕ ಕ್ಷತ್ರಿಯ ಸಮೂಹ ಶೋಭಾಯಾತ್ರೆಯಲ್ಲಿ ಬಂದಿದ್ದರು. ಇದನ್ನು ವರ್ಣಿಸುತ್ತ ಕೆಳಗಿನ ಪದ್ಯ ಈ ರೀತಿ ಹೇಳುತ್ತದೆ.

"ಸ್ಫೀತಾನಿ ರಾಜ್ಯಾನಿ ಪ್ರಶಾಸ್ಯಮಾನಾ ।
ಸಮ್ಯಗ್ ರಾಜ್ಯಾನಿ ಕರೋಂತಿ ಜ್ಞಾತಯಃ ॥
ತಥಾ ಇಮೇ ಲಿಚ್ಛವಿ-ಮಧ್ಯೇ ಸಂತೋ ।
ದೇವೇಹಿ ಶಾಸ್ತಾ ಉಪಮಾಮುಕಾಸಿ ॥"

ಅರ್ಥಾತ್ ಸ್ವಾಗತಿಸಲು ಬರುತ್ತಿರುವ ಕ್ಷತ್ರಿಯ ಗಣದಲ್ಲಿ ಜ್ಞಾತೃ ವಂಶದವರು ಇದ್ದಾರೆ. ಅವರು ತಮ್ಮ ವಿಶಾಲ ರಾಜ್ಯವನ್ನು ಸರಿಯಾದ ರೀತಿಯಲ್ಲಿ ಆಳುತ್ತಿದ್ದಾರೆ. ಮತ್ತು ಲಿಚ್ಛವಿಗಣಗಳ ಕ್ಷತ್ರಿಯರ ಮಧ್ಯೆ ಬರುತ್ತಿರುವ ಇವರು ಶೋಭಾಯಮಾನವಾಗಿ ಕಾಣುತ್ತಿದ್ದಾರೆ. ಸ್ವಯಂ ಬುದ್ಧ ಭಗವನರೇ ಇವರನ್ನು ನೋಡಿ ದೇವತೆಗಳೊಂದಿಗೆ ಹೋಲಿಸಿದ್ದಾರೆ. ಇದರಿಂದ ಒಂದು ವಿಚಾರವಂತು ಸ್ಪಷ್ಟವಾಗುತ್ತದೆ. ಅದೆಂದರೆ ಜ್ಞಾತೃಕುಲದ ಕ್ಷತ್ರಿಯರ ನಿವಾಸ ಸ್ಥಾನವು ವೈಶಾಲಿಯಾಗಿತ್ತು ಎನ್ನುವುದು ಹಾಗೂ ಲಿಚ್ಛವಿಗಣದಲ್ಲಿ ಅವರು ಬಹಳಷ್ಟು ಗೌರವವನ್ನು ಪಡೆದಿದ್ದರು ಎನ್ನುವುದು. ಇದರ ಕಾರಣವು ಸ್ಪಷ್ಟವಾಗಿದೆ. ಜ್ಞಾತೃಕುಲದ ಪ್ರತಿಷ್ಠೆ ಗೌರವ ಘನತೆಗಳು ಇದರಿಂದಾಗಿ ಇನ್ನು ಹೆಚ್ಚು ಪ್ರಸಾರಗೊಳ್ಳುತ್ತವೆ. ಕಾರಣ ಇದರ ಗಣನಾಯಕ ಸಿದ್ಧಾರ್ಥನು ವೈಶಾಲಿ ಗಣನಾಯಕ ರಾಜ ಚೇಟಕನ ಅಳಿಯನಾಗಿದ್ದನು. ಚೇಟಕನ ಕನ್ಯೆ (ಭಗಿನೀ) ಪ್ರಿಯಕಾರಿಣೀ ತ್ರಿಶಲಾಳ ವಿವಾಹ ಜ್ಞಾತೃಕುಲ ಶ್ರೇಷ್ಠನಾದ ಸಿದ್ಧಾರ್ಥನೊಂದಿಗೆ ಆಗಿತ್ತು. ಭಗವಾನ್ ಮಹಾವೀರರನ್ನು ವೈಶಾಲಿ ನಗರದೊಂದಿಗೆ ಸಂಬಂಧ ಕಲ್ಪಿಸುವ ಇನ್ನೊಂದು ಆಧಾರ ಉಪಲಬ್ಧವಾಗುತ್ತದೆ. ಅರ್ಧಮಾಗಧಿ ಆಗಮಗಳ (ಸೂತ್ರ ಕೃತಾಂಗ 1, 2; ಉತ್ತರಾಧ್ಯಯನ 8, 6 ಮುಂತಾಗಿ) ಅನೇಕ ಪ್ರಸಂಗಗಳಲ್ಲಿ ಮಹಾವೀರರನ್ನು ವೈಶಾಲಿಯ ವೈಶಾಲಿಕ ಎನ್ನುವುದಕ್ಕೆ ವಿಶಾಲ-ವ್ಯಕ್ತಿತ್ವಶೀಲ, ವಿಶಾಲಮಾತೆಯ ಪುತ್ರ, ಮುಂತಾದ ರೂಪಗಳಿಂದ ವಿವಿಧ ಪ್ರಕಾರವಾಗಿ ಅರ್ಥೈಸಿದ್ದರು. ಅದು ಅಷ್ಟು ಸಮಂಜಸಕಾರಿಯಾಗಲಿಲ್ಲ. ವೈಶಾಲಿಕ ಎಂಬುದರ ಸ್ಪಷ್ಟ ಅರ್ಥ ವೈಶಾಲಿ ನಗರದ ನಾಗರಿಕ ಎಂದು ಸ್ಪಷ್ಟವಾಗಿ ಹೇಳಬಹುದು. ಆಗಮಗಳಲ್ಲಿ ಅನೇಕ ಕಡೆ ವೈಶಾಲಿ ಶ್ರಾವಕರ ಉಲ್ಲೇಖ ಬರುತ್ತದೆ. ಭಗವಾನ ಋಷಭದೇವರು ಕೌಶಲ ದೇಶದವರಾಗಿದ್ದರು. ಅವರನ್ನು 'ಅರಹಾ ಕೌಶಲೀಯ' ಅರ್ಥಾತ್ ಕೌಶಲ ದೇಶದ ಅರಹಂತಾ ಎಂದು ಕರೆಯ

ಲಾಗುತ್ತಿತ್ತು (ಸಮವಾಯಾಂಗ ಸೂತ್ರ 141, 162) ಮಹಾವೀರರು ವೈಶಾಲಿ ನಗರದಲ್ಲಿ ಜನಿಸಿದ್ದರು,ಮತ್ತು ಕುಂಡಪುರವು ಇದೇ ವಿಶಾಲನಗರದ ಒಂದು ಭಾಗವಾಗಿರಬಹುದು ಎನ್ನುವುದು ಇದರಿಂದ ಪ್ರಮಾಣಿತವಾಗಿ ಸಿದ್ಧವಾಗುತ್ತದೆ.

ಈಗ ಏಳುವ ಸಮಸ್ಯೆಯೆಂದರೆ, ವೈಶಾಲಿಯ ಸ್ಥಿತಿ ಹೇಗಿತ್ತು? ಇದರ ಸ್ಪಷ್ಟ-ಉತ್ತರವನ್ನು ವಾಲ್ಮೀಕಿ ರಾಮಾಯಣದಲ್ಲಿ (1, 45) ಪಡೆಯುತ್ತೇವೆ. ರಾಮ ಮತ್ತು ಲಕ್ಷ್ಮಣರು ವಿಶ್ವಾಮಿತ್ರ ಮುನಿಗಳೊಂದಿಗೆ ರಾಜ ಜನಕನಿಂದ ಆಯೋಜಿತವಾಗಿದ್ದ ಧನುರ್ಯಜ್ಞದಲ್ಲಿ ಭಾಗವಹಿಸಲು ಹೋಗುತ್ತಿದ್ದರು. ಹಾಗೆ ಬರುತ್ತಾ ಗಂಗಾನದಿಯ ತೀರದ ಬಳಿಗೆ ಬಂದಾಗ ಮುನಿಗಳು ಅವರಿಗೆ ಗಂಗಾ ಅವತರಣಿಕೆಯ ಆಖ್ಯಾನವನ್ನು ಹೇಳುತ್ತಾರೆ. ಇದರ ನಂತರ ಗಂಗಾನದಿಯನ್ನು ದಾಟಿ ಉತ್ತರ ತೀರವನ್ನು ತಲುಪುತ್ತಾರೆ. ಅಲ್ಲಿಂದ ಅವರು ವಿಶಾಲನಗರ ಪ್ರದೇಶವನ್ನು ನೋಡುತ್ತಾರೆ.

ಉತ್ತರಂ ತೀರಮಾಸಾದ್ಯ ಸಂಪೂಜ್ಯರ್ಷಿಗಣಂ ತತಃ |
ಗಂಗಾಕುಲೇ ನಿವಿಷ್ಟಾಸ್ತೇ ವಿಶಾಲಾಂ ದದೃಶಃ ಪುರಿಮ್ || (ರಾಮಾಯಣ 45 9)

ಮತ್ತು ಶೀಘ್ರದಲ್ಲಿಯೆ ಆ ರಮ್ಯ, ದಿವ್ಯ ಹಾಗೂ ಸ್ವರ್ಗೋಪಮ ನಗರವನ್ನು ತಲುಪುತ್ತಾರೆ

ತತೋ ಮುನಿವರಸ್ತೂರ್ಣ ಜಗಾಮ ಸಹರಾಘವಃ |
ವಿಶಾಲಾಂ ನಗರೀಂ ರಮ್ಯಾಂ ದಿವ್ಯಾಂ ಸ್ವರ್ಗೋಪಮಾಂ ತದಾ ||

(1, 45, 9-10)

ಇಲ್ಲಿ ಅವರು ಒಂದು ರಾತ್ರಿ ತಂಗಿದ್ದು, ಮಾರನೆಯ ದಿನ ಅಲ್ಲಿಂದ ಹೊರಟು ಜನಕಪುರಿ ಮಿಥಿಲೆಯನ್ನು ಪ್ರವೇಶಿಸುತ್ತಾರೆ. ಉಷ್ಯ ತತ್ರ ನಿಶಾಮೇಕಾಂ ಜಗ್ಮತುರ್ಮಿಥಿಲಾಂ ತತಃ. ಬೌದ್ಧ ಗ್ರಂಥಗಳಲ್ಲಿಯೂ ಸಹ ವೈಶಾಲಿ ಬಗ್ಗೆ ಅನೇಕ ಉಲ್ಲೇಖಗಳು ಬಂದಿವೆ. ಅಲ್ಲಿಯೂ ಸಹ ಬುದ್ಧ ಗಂಗಾನದಿಯನ್ನು ದಾಟಿ ಉತ್ತರಾಭಿಮುಖವಾಗಿ ವೈಶಾಲಿಗೆ ಹೊರಡುವ ಸಂಗತಿಯನ್ನು ಓದುತ್ತೇವೆ. ಆ ಕಾಲದಲ್ಲಿ ವೈಶಾಲಿ ಲಿಚ್ಛವಿ ಸಂಘದ ರಾಜ್ಯವಾಗಿತ್ತು; ಗಂಗಾನದಿಯ ದಕ್ಷಿಣಕ್ಕೆ ಮಗಧನರೇಶ ಶ್ರೇಣಿಕ ಬಿಂಬಸಾರನೂ, ಅವನ ಅನಂತರ ಕುಣಿಕ ಅಜಾತ ಶತ್ರುವೂ ರಾಜ್ಯವಾಳುತ್ತಿದ್ದರು. ವೈಶಾಲಿ ಹಾಗೂ ಮಾಗಧರಲ್ಲಿ ಮೌಲಿಕ ಭೇದವಿತ್ತು ಮತ್ತು ಶತ್ರು ಭಾವನೆಯೂ ಬೆಳೆಯುತ್ತಿತ್ತು. ಇದರ ಉಲ್ಲೇಖ ಬೌದ್ಧಗ್ರಂಥದಲ್ಲಿ ಈ ರೀತಿ ಬರುತ್ತದೆ. ಅಜಾತ ಶತ್ರುವಿನ ಮಂತ್ರಿ ವರ್ಷಕಾರನು ಬುದ್ಧನನ್ನು ಪ್ರಶ್ನಿಸಿದನಂತೆ "ವೈಶಾಲಿಯ ಲಿಚ್ಛವಿ ಸಂಘದ ಮೇಲೆ ವಿಜಯ ಪಡೆಯಬಹುದೆ?" ಇದಕ್ಕೆ ಉತ್ತರವಾಗಿ ಬುದ್ಧ ಈ ರೀತಿ ಹೇಳುತ್ತಾನೆ. ಎಲ್ಲಿಯವರೆವಿಗೂ ಲಿಚ್ಛವಿ ಗಣರಾಜ್ಯದ ಜನತೆ ತಮ್ಮ ಗಣತಂತ್ರ ವ್ಯವಸ್ಥೆಯನ್ನು ಸುಸಂಘಟಿತರಾಗಿ ಕಾಯ್ದುಕೊಳ್ಳುತ್ತಾರೋ, ನ್ಯಾಯನೀತಿಗಳನ್ನು

ಪಾಲಿಸಿಕೊಂಡು ಸದಾಚಾರ ನಿಯಮಗಳನ್ನು ಉಲ್ಲಂಘಿಸುವುದಿಲ್ಲವೋ ಅಲ್ಲಿಯ ವರೆವಿಗೂ ಅವರನ್ನು ಪರಾಜಿತಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ. ಈ ವಿಷಯ ವನ್ನು ತಿಳಿದುಕೊಂಡು, ವರ್ಷಕಾರ ಮಂತ್ರಿಯು, ಕೂಟನೀತಿಯಿಂದ ಲಿಚ್ಛವಿಯರ ಮಧ್ಯೆ ವಿಷಬೀಜವನ್ನು ಬಿತ್ತುತ್ತಾನೆ; ಹಾಗೂ ಅವರನ್ನು ನ್ಯಾಯ ನೀತಿಗಳಿಂದ ಭ್ರಷ್ಟಗೊಳಿಸುತ್ತಾನೆ. ಇದರ ಪರಿಣಾಮ ಹಾಗೂ ವಿಶದ ವರ್ಣನೆಯನ್ನು ಅರ್ಧ ಮಾಗಧಿ ಆಗಮದ ಭಗವತೀ ಸೂತ್ರ, ಸಪ್ತಮ ಶತಕದಲ್ಲಿ ಪಡೆಯುತ್ತೇವೆ. ಇದರ ಅನುಸಾರವಾಗಿ ಅಜಾತ ಶತ್ರುವಿನ ಸೇನೆ ವೈಶಾಲಿ ನಗರದ ಮೇಲೆ ಆಕ್ರಮಣ ಮಾಡುತ್ತದೆ. ಯುದ್ಧದಲ್ಲಿ ಮಹಾಶೀಲಕಂಟಕ ಮತ್ತು ರಥಮುಸಲವೆಂಬ ಯುದ್ಧ ತಂತ್ರಗಳನ್ನು ಬಳಸಲಾಗುತ್ತದೆ. ಕೊನೆಗೆ ವೈಶಾಲಿಯ ಕೋಟೆ ಭಗ್ನವಾಗಿ ಅಜಾತ ಶತ್ರುವಿಗೆ ವಿಜಯ ಲಭಿಸುತ್ತದೆ. ಒಟ್ಟರ್ಥ ಇಷ್ಟೆ, ಮಹಾವೀರನ ಕಾಲದಲ್ಲಿ ವೈಶಾಲಿ ನಗರ ಪ್ರತಿಷ್ಠಿತ ನಗರವಾಗಿತ್ತು. ಮತ್ತು ಆ ನಗರದ ನಾಗರಿಕನಾಗುವುದು ಅಭಿಮಾನದ ವಿಷಯವಾಗಿತ್ತು. ಹೀಗಾಗಿಯೇ ಮಹಾವೀರರನ್ನು ವೈಶಾಲೀಯಯೆಂದು ಕರೆಯಲಾಗಿದೆ. ಅನೇಕ ಪ್ರಾಚೀನ ನಗರಗಳೊಂದಿಗೆ ಈ ವೈಶಾಲಿಯು ದೀರ್ಘ ಕಾಲದವರೆವಿಗೂ ಇತಿಹಾಸಜ್ಞರ ಗಮನಕ್ಕೆ ಬಂದಿರಲಿಲ್ಲ. ಆದರೆ ಈ ಒಂದು ಶತಾಬ್ಧಿಯಲ್ಲಿ ದೊರೆತಿರುವ ಭಗ್ನಾವಶೇಷ, ಮುದ್ರೆಗಳು, ಶಿಲಾಲೇಖನಗಳು, ಮುಂತಾದುವುಗಳ ಆಧಾರದಿಂದ ಪ್ರಚೀನ ವೈಶಾಲಿಯ ಸ್ಥಿತಿಯನ್ನು ಗುರುತಿಸಬಹು ದಾಗಿದೆ. ಬಿಹಾರ ರಾಜ್ಯದ ಗಂಗಾನದಿಯ ಉತ್ತರ ಭಾಗದ ಮುಜಫರ್ ಜಿಲ್ಲೆಗೆ ಸೇರಿದ ಬಸಾಢ ಎಂಬ ಗ್ರಾಮ ಪ್ರಾಚೀನ ವೈಶಾಲಿಯಾಗಿತ್ತು ಎಂದು ನಿಖರವಾಗಿ ದೊರೆತಿರುವ ಮಾಹಿತಿಗಳಿಂದ ವ್ಯಕ್ತವಾಗಿದೆ. ಬಸಾಢ ಗ್ರಾಮದ ಸಮೀಪವಿರುವ ವಾಸುಕುಂಡ ಹಳ್ಳಿಯ ವೈಶಾಲಿ ಬಳಿಯಿದ್ದ ಕುಂಡಪುರವೆಂದು ಇತ್ತೀಚೆಗೆ ನಡೆ ಸಿರುವ ಸ್ಥಳೀಯ ಶೋಧನೆಗಳಿಂದ ತಿಳಿದುಬಂದಿದೆ. ಅಲ್ಲಿ ಒಂದು ಪ್ರಾಚೀನ ಕುಂಡದ ಚಿಹ್ನೆಯು ಸಹ ದೊರೆಯುತ್ತದೆ. ಅದನ್ನು ಕ್ಷತ್ರಿಯ ಕುಂಡ ಎಂತಲೂ ಕರೆಯುತ್ತಾರೆ. ಇದರ ಹತ್ತಿರವೇ ಭೂಮಿಖಂಡ ಸಿಗುತ್ತದೆ. ಇದನ್ನು ಅಹಲ್ಯ ಎಂದು ಕರೆಯುತ್ತಾರೆ. ಇದರ ಮೇಲೆ ಯಾವುದೇ ಒಂದು ನೇಗಿಲನ್ನು ಸಹ ತಂದಿಲ್ಲ. ಉಳುಮೆಯನ್ನೂ ಮಾಡಿಲ್ಲ. ಕಾರಣ ಸ್ಥಳೀಯ ಜನರ ಪ್ರಕಾರ ಇದೊಂದು ಅತಿ ಪ್ರಾಚೀನವಾದ, ಮಹಾಪುರುಷನ ಜನ್ಮಸ್ಥಾನವಾಗಿದೆ ಎನ್ನಬಹುದು. ಇದರಿಂದಾಗಿ ಇದನ್ನು ಪವಿತ್ರ ಎಂದು ಭಾವಿಸಿ ಅಲ್ಲಿ ದೀಪಾವಳಿಯ ದಿನದಂದು ದೀಪಗಳನ್ನು ಹಚ್ಚಿ ಉತ್ಸವಗಳನ್ನು ಆಚರಿಸುತ್ತಾರೆ. ಈ ಎಲ್ಲ ವಿಷಯಗಳನ್ನು ವಿಚಾರಮಾಡಿ ವಿದ್ವಾಂಸರು ಆ ಸ್ಥಳವನ್ನು ಮಹಾವೀರರ ಜನ್ಮಭೂಮಿಯನ್ನಾಗಿ ಸ್ವೀಕರಿಸಿದ್ದಾರೆ. ಹಾಗೂ ಬಿಹಾರ ರಾಜ್ಯ ಸರ್ಕಾರವು ಸಹ ತನ್ನ ಅಧೀನಕ್ಕೆ ತೆಗೆದುಕೊಂಡು ಅದನ್ನು ರಕ್ಷಿಸುವ ಕಾರ್ಯ ಕೈಗೊಂಡಿದೆ. ಕಮಲಪುಷ್ಪದಾಕಾರದ ವೇದಿಕೆಯನ್ನು ನಿರ್ಮಿಸಿ ಅಲ್ಲಿ ಒಂದು ಅಮೃತಶಿಲೆಯ ಶಿಲಾಸ್ತಂಭವನ್ನು ಕಡೆದು ನಿಲ್ಲಿಸಲಾಗಿದೆ. ಹಾಗೂ

ಅದರ ಮೇಲೆ ಅರ್ಧಮಾಗಧಿ ಭಾಷೆಯಲ್ಲಿ ಎಂಟು ಗಾಹೆಗಳನ್ನು ಹಿಂದಿ ಭಾಷೆಯ ಅನುವಾದದೊಂದಿಗೆ ಅಂಕಿತಮಾಡಲಾಗಿದೆ. ಮಹಾವೀರರ ಜನ್ಮಸ್ಥಳವೆಂದು ಇಲ್ಲಿ ಅವರು ತಮ್ಮ 30 ವರ್ಷಬಾಲ್ಯವನ್ನು ಕಳೆದು ಪ್ರವ್ರಜಿತರಾದರೆಂದು ತಿಳಿಸುತ್ತದೆ. ಭಗವಾನ್ ಮಹಾವೀರರ 2555ರ ಹುಟ್ಟುಹಬ್ಬದ ನಂತರ ವಿಕ್ರಮ ಶಕೆ 3012 ವರ್ಷಗಳಲ್ಲಿ ಭಾರತದ ರಾಷ್ಟ್ರಪತಿ ಶ್ರೀ ರಾಜೇಂದ್ರ ಪ್ರಸಾದರು ಅಲ್ಲಿಗೆ ಬಂದು ಆ ಸ್ಮಾರಕವನ್ನು ಉದ್ಘಾಟಿಸಿದರೆಂದು ತಿಳಿಯುತ್ತದೆ. ಈ ಸ್ಮಾರಕದ ಹತ್ತಿರವೆ ಪ್ರಾಚೀನ ಕ್ಷತ್ರಿಯ ಕುಂಡದ ಹತ್ತಿರದ ಪ್ರದೇಶದಲ್ಲಿ ಶಾಂತಿಪ್ರಸಾದರ ದಾನದಿಂದ ಒಂದು ಭವ್ಯ ಭವನವು ಸಹ ನಿರ್ಮಾಣ ಆಗಿದೆ ಮತ್ತು ಬಿಹಾರ ರಾಜ್ಯ ಸರ್ಕಾರ ಪ್ರಾಕೃತ ಜೈನ ಪೀಠವನ್ನು, ಸ್ಥಾಪಿಸಿದ್ದು ಶೋಧನೆಗಳನ್ನು ಕೈಗೊಳ್ಳುವವರಿಗೆ ಅದು ನೆರವೀಯುತ್ತಿದೆ. ಈ ಅಧ್ಯಯನ ಕೇಂದ್ರ 1956 ರಲ್ಲಿ ಡಾ॥ ಹೀರಾಲಾಲ್ ಜೈನರ ನಿರ್ದೇಶಕತ್ವದಲ್ಲಿ ಮುಜಫರ್ ಜಿಲ್ಲೆಯಲ್ಲಿ ಪ್ರಾರಂಭಗೊಂಡಿತು. ಇದರಿಂದಲೆ ವೈಶಾಲಿಯಲ್ಲಿ ಮಹಾವೀರ ಸ್ಮಾರಕ ಸ್ಥಾಪನೆಯಾಯಿತು. ಅಧ್ಯಯನ ಕೇಂದ್ರದ ನಿರ್ಮಾಣಕಾರ್ಯವೂ ಪ್ರಾರಂಭವಾಯಿತು.

ವೈಶಾಲಿಯ ಸ್ಥಿತಿಯನ್ನು ನಿರ್ಣಯಿಸುವಾಗ ಅದರಲ್ಲಿ ಒಂದು ಸಂಶಯ ಉಳಿದು ಬಿಡುವುದುಂಟು. ಕೆಲವು ಧಾರ್ಮಿಕ ಬಂಧುಗಳಿಗಂತೂ ಇದೊಂದು ಸಮಸ್ಯೆಯೆ ಆಗ ಬಹುದು. ಅದೇನೆಂದರೆ, ವೈಶಾಲಿಯ ಸ್ಥಿತಿ ವಿದೇಹದಲ್ಲಿ ಅಲ್ಲ, ಸಿಂಧೂ ದೇಶದಲ್ಲಿ ಎಂದು ಕೆಲವೆಡೆ ಬಂದಿರುವುದು; ಪ್ರಸ್ತುತ ಗ್ರಂಥದಲ್ಲಿಯೂ (5.5) ಸಹ ಕಾಣುತ್ತೇವೆ, ಸಿಂಧೂ ವಿಸಇ ವಇಸಾಲೀಪುರವರಿ' ಹಾಗೂ ಸಂಸ್ಕೃತದ ಉತ್ತರ ಪುರಾಣದಲ್ಲಿಯೂ ಸಹ ಹೇಳಲ್ಪಟ್ಟದೆ. (75.3)

ಸಿಂಧ್ವಾಖ್ಯವಿಷಯೇ ಭೂಭೃದ್ವೈಶಾಲೀನಗರೇ ಭವತ್
ಚೇಟಕಾಖ್ಯೋತಿ ವಿಖ್ಯಾತೋ ವಿನೀತಃ ಪರಮಾರ್ಹತಃ ॥

ಈ ಎರಡು ಪ್ರಸಂಗಗಳಲ್ಲಿಯೂ ಸಿಂಧೂ ವಿಷಯ ಅಥವಾ 'ಸಿಂಧ್ವಾಖ್ಯವಿಷಯದ' ತಾತ್ಪರ್ಯವನ್ನು ಸಿಂಧೂ ದೇಶದೊಂದಿಗೆ ಹೇಳುವುದು ಸ್ವಾಭಾವಿಕವಾಗಿದೆ. ಆದರೆ ಇದರೊಂದಿಗೆ ಈ ವಿಚಾರವು ಸ್ಪಷ್ಟವಾಗಿದೆ. ಅದೆಂದರೆ, ವರ್ತಮಾನದ ಸಿಂಧೂ ದೇಶದಲ್ಲಿ ವೈಶಾಲಿಯೆಂಬ ಹೆಸರಿನ ನಗರದ ಯಾವ ಉಲ್ಲೇಖವೂ ಎಲ್ಲಿಯೂ ಸಿಗುವುದಿಲ್ಲ. ಆದರ ಪೂರ್ವೋಕ್ತ ಐತಿಹಾಸಿಕ ಉಲ್ಲೇಖವಾಗಲಿ ಮತ್ತು ಘಟನೆಗಳಾಗಲಿ ಕೂಡಿ ಬರುವುದಿಲ್ಲ. ವೈಶಾಲಿಯ ಬಗ್ಗೆ ಈಗಂತೂ ಯಾವ ಸಂಶಯವಿಲ್ಲ. ಇನ್ನು 'ಸಿಂಧ್ವಾಖ್ಯವಿಷಯೇ' ಎನ್ನುವುದರ ಬಗ್ಗೆ ನನ್ನ ವಿಚಾರವನ್ನು ಹೇಳಬಹುದಾದರೆ ಸಂಕ್ಷಿಪ್ತವಾಗಿ ಈ ರೀತಿ ವ್ಯಕ್ತಪಡಿಸಬಹುದು : ಪ್ರತಿ ಲಿಪಿಕಾರನ ಪ್ರಮಾದದ ಪರಿಣಾಮ ಒದಗಿರಬಹುದು. 'ಸಿಂಧ್ವಾಢ್ಯವಿಷಯೇ' ಎಂದಿರಬೇಕು ಎನಿಸುತ್ತದೆ. ಆಗ ಇದರ ಅರ್ಥ ನದಿಗಳ ಬಾಹುಲ್ಯದಿಂದಿರತಕ್ಕ ಸ್ಥಳ ಎಂದಾಗುತ್ತದೆ. ಈ

ಪ್ರದೇಶದ ಉಲ್ಲೇಖ 'ಶಂಕರ ದಿಗ್ವಿಜಯ' ಎಂಬ ಗ್ರಂಥದಲ್ಲಿಯೂ ದೊರೆಯು ತ್ತದೆ ಮತ್ತು ಅಲ್ಲಿ ಇದನ್ನು 'ಉದಕದೇಶ' ಎಂದು ಕರೆಯಲಾಗಿದೆ. ತೀರಭುಕ್ತಿ ಇವನ್ನು ಸಾರ್ಥಕಪಡಿಸಿಕೊಂಡಿದೆ. ಸಮಸ್ತ ಪ್ರದೇಶ ನದಿಯ ದಂಡೆಗಳ ಮೇಲೆ ಇದೆ. ಮೇಲೆಯೂ ಈ ತೀರಭುಕ್ತಿ ಸಂಬಂಧದಲ್ಲಿ ಉಲ್ಲೇಖಿಸಲಾಗಿದ್ದು, ಅದರಲ್ಲಿ ಈ ಪ್ರದೇಶವನ್ನು 'ನದೀ ಪಂಚದಶಾಂತರೇ' ಎಂದು ಕರೆಯಲ್ಪಟ್ಟಿದೆ. ಅರ್ಥಾತ್ 15 (ಹದಿನೈದು) ನದಿಗಳನ್ನು ಹೊಂದಿರುವ ಪ್ರದೇಶ ಎಂಬಲ್ಲಿ ನದಿಗಳ ಬಾಹುಲ್ಯತೆ ಕಂಡುಬರುತ್ತದೆ.

ಇಲ್ಲಿ ಬರುವ ಎರಡು ಉದಾಹರಣೆಗಳಿಂದ ಸಿಂಧೂದೇಶ ಎನ್ನುವುದು ಸಿಂಧೂ ಬಹುಲ, ಉದಕದೇಶ ಅಥವಾ ತೀರಭುಕ್ತಿ ಎಂಬ ಅಭಿಪ್ರಾಯವೆ ಹೊರತು ಬೇರೆ ಯಾವ ಅರ್ಥ ಇಲ್ಲಿ ಗೋಚರಿಸುವುದಿಲ್ಲ.

ಈ ವಿಷಯದಲ್ಲಿ ಇನ್ನೂ ಒಂದು ಸಂಗತಿ ಹಾಗೇ ಉಳಿದುಬಿಡುತ್ತದೆ. ಇಲ್ಲಿ ದೀರ್ಘಕಾಲದಿಂದ ಮಹಾವೀರರ ಜನ್ಮ ಬಿಹಾರ ರಾಜ್ಯ ಪಟನಾಜಿಲ್ಲೆಯ ನಲಂದಾ ಹತ್ತಿರದ ಕುಂದಾಪುರವೆಂದು ಭಾವಿಸಲಾಗಿದೆ. ಅಲ್ಲಿ ಒಂದು ವಿಶಾಲ ಮಂದಿರವಿದೆ, ಮತ್ತು ಭಗವನ್ ಮಹಾವೀರರ ಜನ್ಮ ಕಲ್ಯಾಣ ಸ್ಥಾನದ ರೂಪದಲ್ಲಿ ಒಂದು ತೀರ್ಥ ಸ್ಥಾನವಿದೆ. ಈ ಒಂದು ಪವಿತ್ರ ಭಾವನೆಯಿಂದಲೆ ಅಲ್ಲಿ ಸಹಸ್ರಾರು ಯಾತ್ರಿಕರು ತೀರ್ಥ ಯಾತ್ರೆಯನ್ನು ಕೈಗೊಳ್ಳುತ್ತಾರೆ. ಇದೇ ರೀತಿ ಶ್ವೇತಾಂಬರ ಸಂಪ್ರದಾಯದ ಅಭಿ ಪ್ರಾಯದ ಮೂಲಕ ಭಗವನರ ಜನ್ಮಸ್ಥಾನ, ಮುಂಗೇರ ಜಿಲ್ಲೆಯ ಲಚ್ಛುಆಡ ಗ್ರಾಮದ ಸಮೀಪವಿರುವ, ಗಂಗಾನದಿಯ ಉತ್ತರ ಭಾಗದ ವಿದೇಹದಲ್ಲಿರುವ ಬದಲು ದಕ್ಷಿಣಭಾಗದ ಮಗಧ ರಾಜ್ಯದಲ್ಲಿರುವುದು ಕಂಡುಬಂದಿದೆ. ಈ ಕಾರಣದಿಂದಾಗಿ ಎರಡೂ ಸಂಪ್ರದಾಯದಲ್ಲಿ ಪ್ರಾಚೀನತಮಸ್ಪಷ್ಟಗ್ರಂಥ ಉಲ್ಲೇಖಗಳು ಒಂದಕ್ಕೊಂದು ವಿರುದ್ಧವಾಗಿ ಬಂದಿವೆ. ಈ ವಿಷಯಗಳ ಬಗ್ಗೆ ನಿಷ್ಪಕ್ಷಪಾತವಾಗಿ ಶುದ್ಧ ಐತಿಹಾಸಿಕ ದೃಷ್ಟಿಯಿಂದ ವಿಚಾರಮಾಡಿದ ಮತ್ತು ವೈಶಾಲಿ ಹಾಗೂ ಕುಂಡಪುರದ ಬಗ್ಗೆ ನಿಖರ ಮಾಹಿತಿಗಳನ್ನು ಒದಗಿಸಿದ ಯಾಕೋಬಿ ಮುಂತಾದ ವಿದೇಶಿ ವಿದ್ವಾಂಸರು ಇದರ ಬಗ್ಗೆ ಸಂದೇಹ ವ್ಯಕ್ತಪಡಿಸಿದ್ದಾರೆ. ಈಗ ಕರೆಯಲಾಗುತ್ತಿರುವ ಮಹಾವೀರರ ಈ ಎರಡು ಜನ್ಮಸ್ಥಳಗಳನ್ನು ಕುರಿತು ವಿಚಾರಮಾಡಿದಾಗ ಇವುಗಳೇನೂ ಅಷ್ಟು ಪ್ರಾಚೀನ ವಾದುದೆಂದೇನೂ ಕಂಡುಬರುವುದಿಲ್ಲ. ಮಹಾವೀರರ ನಂತರದಲ್ಲಿ ಸುಮಾರು 1200 ವರ್ಷಗಳವರೆವಿಗೂ ವಿದೇಹ-ಮಗಧಗಳಲ್ಲಿ ಜೈನ ಸಂಖ್ಯೆ ಬಹಳಷ್ಟಿತ್ತು, ಹಾಗೂ ಇದು ಜೈನರ ಪ್ರಾಬಲ್ಯಕ್ಕೆ ಒಳಗಾಗಿತ್ತು ಎಂದು ತಿಳಿಯುತ್ತದೆ. 7ನೆ ಶತಮಾನದ ಹರ್ಷವರ್ಧನನ ಕಾಲದಲ್ಲಿ ಚೀನದ ಯಾತ್ರಿಕ ಹುಯನ್‌ತ್ಸಾಂಗ್ ಭಾರತಕ್ಕೆ ಬಂದು ಸಂಪೂರ್ಣ ಬೌದ್ಧ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವ ಯತ್ನಮಾಡಿದ್ದ. ಹಾಗೆಯೇ ವೈಶಾಲಿಯನ್ನು ಸಂದರ್ಶಿಸಿದ್ದ. ಹಾಗೂ ತನ್ನ ಪ್ರವಾಸ ಕಥನದಲ್ಲಿ ಸ್ಪಷ್ಟವಾಗಿ

ಉಲ್ಲೇಖಿಸಿದ್ದಾನೆ ಮತ್ತು ಅಲ್ಲಿ (ವೈಶಾಲಿಯಲ್ಲಿ) ಬೌದ್ಧರಿಗಿಂತ ಜೈನರ ಸಂಖ್ಯೆ ಹೆಚ್ಚೆಂಬುದನ್ನು ಬರೆದಿದ್ದಾನೆ. ಆದರೆ ಇದಾದನಂತರ ಅಲ್ಲಿನ ಸ್ಥಿತಿಗತಿಗಳಲ್ಲಿ ಸಾಕಷ್ಟು ಏರುಪೇರಾಗಿ ಜೈನರ ಸಂಖ್ಯೆ ಕ್ಷೀಣವಾಯಿತು. ಇದಾದ ಹಲವು ಶತಮಾನಗಳ ನಂತರ ಮೊಘಲರ ಕಾಲದಲ್ಲಿ ವ್ಯಾಪಾರಕ್ಕೆಂದು ಜೈನರೆ ಅಲ್ಲಿ ಬಂದು ನೆಲೆಸಿರುವುದನ್ನು ನೋಡುತ್ತೇವೆ. ಜನಶೃತಿ ಹಾಗೂ ಭ್ರಮೆಯಿಂದ ಕುಂದಲಪುರ ಅಥವಾ ಲಚ್ಚುಆಡ ವನ್ನು ಮಹಾವೀರರ ಜನ್ಮಸ್ಥಳವೆಂದು ಕಲ್ಪಿಸಿಕೊಂಡರು. ಇಂದು ಶಾಶ್ವತವಾಗಿ ಈ ಎರಡು ಸ್ಥಳಗಳಲ್ಲೂ ಮಂದಿರಗಳು ನಿರ್ಮಾಣವಾಗಿ, ಭಗವನರ ಮೂರ್ತಿಗಳು ಪ್ರತಿಷ್ಠಾಪನೆಗೊಂಡು ತೀರ್ಥಕ್ಷೇತ್ರವಾಗಿ ಸಾವಿರಾರು ವರ್ಷಗಳಿಂದ ಜೈನರ ಧರ್ಮ ಶ್ರದ್ಧೆ, ವಿಶ್ವಾಸವನ್ನು ಗಳಿಸಿಕೊಂಡುಬಂದಿದೆ. ಆದರೆ ನಾವು ಈ ಹಿಂದೆ ತಿಳಿದಿರುವ ಹಾಗೆ ಮಹಾವೀರರ ವಾಸ್ತವಿಕ ಜನ್ಮಸ್ಥಾನ ವೈಶಾಲಿ ಅಥವಾ ಕುಂಡಲಪುರ ಆಗಿದೆ. ಇದನ್ನು ಭಾರತೀಯ ಹಾಗೂ ವಿದೇಶಿ ವಿದ್ವಾಂಸರು ಸಹ ಏಕಕಂಠವಾಗಿ ಸ್ವೀಕರಿಸಿಯೂ ಇದ್ದಾರೆ. ಇಲ್ಲಿನ ರಾಜ್ಯ ಸರ್ಕಾರವು ಇದನ್ನು ಮಾನ್ಯತೆ ಮಾಡಿದೆ. ಇದರಿಂದ ಈಗ ಜೈನ ಸಮಾಜ ಇದನ್ನು ಉಪೇಕ್ಷಿಸಬಾರದು ಮತ್ತು ತನ್ನೆಲ್ಲ ಶ್ರದ್ಧಾ ಭಕ್ತಿಗಳಿಂದ ಇಲ್ಲಿನ ಐತಿಹಾಸಿಕ ಮಹತ್ವ ಅರಿತು ಗೌರವಶಾಲಿಯನ್ನಾಗಿ ಮಾಡಬೇಕು.

## 9. ಮಹಾವೀರರು ತಪಸ್ಸನ್ನಾಚರಿಸಿದ ಕಲ್ಯಾಣ ಕ್ಷೇತ್ರ

ಭಗವಾನ್ ಮಹಾವೀರರು ತಮ್ಮ ತಪಸ್ಸನ್ನು ಎಲ್ಲಿ ಕೈಗೊಂಡರು ಹಾಗೂ ಆರಂಭಿಸಿದರು ಎನ್ನುವುದಕ್ಕೆ ಈ ಗ್ರಂಥದಲ್ಲಿ (ಪುಷ್ಪದಂತನ ಮಹಾಪುರಾಣದಲ್ಲಿ) (1, 2,) ಈ ರೀತಿ ದೊರೆಯುತ್ತದೆ.

ಚಂದಪ್ಪಹ–ಸಿವಿಯಹಿಂಪಹು ಚಡಿಣ್ಣು ।
ತಹಿಣಾಹ–ಸಂಡವಣಿ ಣವರ ದಿಣ್ಣು ॥
ಮಗ್ಗಸಿರ–ಕಸಣ–ದಸಮೀ–ದಿಣಂತಿ ।
ಸಂಜಾಯಯಿ ತಿಯಸುಜ್ಜವಿ ಮಹಂತಿ ॥
ಪೋಲಿಣಯಿ ಚರಿಯಾವರಣ ಪಂಕಿ ।
ಹತ್ಥುತ್ತರಮಜ್ಝೆ, ಸಿಯಿ ಸಸಂಕಿ ।
ಛಟ್ಠೊವವಾಸು ಕಿಉ ಮಲಹರೇಣ ।
ತವಚರಣು ಲಇಉ ಪರಮೇಸರೇಣ ॥

ಇದೇ ರೀತಿಯಲ್ಲಿ ಸಂಸ್ಕೃತದ ಉತ್ತರಪುರಾಣದಲ್ಲಿ (75, 302-304) ಈ ರೀತಿ ಪ್ರಕಟಗೊಂಡಿದೆ;

ನಾಥಃ (ನಾಥ) ಷಂಡವನಂ ಪ್ರಾಪ್ಯ ಸ್ವಯಾನಾದವರುಹ್ಯಸಃ ।
ಶ್ರೇಷ್ಠ: ಷಷ್ಠೋಪವಾಸೇನ ಸ್ವಪ್ರಭಾ ಪಟಲಾವೃತೇ ॥

ನಿವಿಶ್ಯೋದಂಗ ಮುಖೋ ವೀರೋ ರುಂದ್ರರತ್ನ ಶಿಲಾತಲೇ |
ದಶಮ್ಯಾಂ ಮಾರ್ಗಶೀರ್ಷಸ್ಯ ಕೃಷ್ಣಾಯಾಂ ಶಶಿನಿ ಶ್ರಿತೆ ||
ಹಸ್ತೋತ್ತರ ಕ್ಷಯೊರ್ಮಧ್ಯಂ ಭಾಗಂ ಚಾಪಾಸ್ತಲಕ್ಷ್ಮಣಿ |
ದಿವಸಾವಸಿತಾ ಧೀರಃ ಸಂಯಮಾಭಿಮುಖೋ ಅಭವತ್ ||
ಸೌಧರ್ಮಾಧ್ಯೈಃ ಸುರೈರೇತ್ಯ ಕೃತಾಭಿಷವ ಪೂಜನಃ ||

ಹರಿವಂಶಪುರಾಣದ ಅನುಸಾರವಾಗಿ–

ಆರುಹ್ಯ ಶಿವಿಕಾಂ ದಿವ್ಯಾಮುಹ್ಯಮಾನಾಂ ಸುರೇಶ್ವರೈಃ
ಉತ್ತರಾಫಾಲ್ಗುನೀಷ್ವೇವ ವರ್ತಮಾನೇ ನಿಶಾಕರೇ |
ಕೃಷ್ಣಸ್ಯ ಮಾರ್ಗಶೀರ್ಷಸ್ಯ ದಶಮ್ಯಾಮುಗಮದ್ ವನಮ್ ||
ಅಪನೀಯತನೋಃ ಸರ್ವವಸ್ತ್ರಮಾಲ್ಯವಿಭಷಣಮ್ |
ಪಂಚಮುಷ್ಠಿಭಿರುದ್ಧೃತ್ಯ ಮೂರ್ಧಜಾನಭವನ್ಮುನಿಃ

ಈ ಮೂರು ಅಭಿಪ್ರಾಯಗಳ ಸಾರವಿಷ್ಟು : ನಾಥ, ನಾದ, ನಾಯ ಅಥವಾ ಜ್ಞಾತೃವಂಶೀಯ ಭಗವಾನ್ ಮಹಾವೀರರು ಮಾರ್ಗಶೀರ್ಷ ಕೃಷ್ಣ 10ರ ದಿನ ಷಂಡವನಕ್ಕೆ ತೆರಳಿ ತಪಸ್ಸಿಗೆ ತೊಡಗಿದರು ಮತ್ತು ಅವರು ಮುನಿಗಳಾದರು. ಯಥಾರ್ಥವೇನೆಂದರೆ, ಅರ್ಧಮಾಗಧೀ ಗ್ರಂಥಗಳು, ಹೇಗೆ ಕಲ್ಪಸೂತ್ರಾದಿಗಳಲ್ಲಿ ಇದನ್ನು 'ಣಾಯ–ಸಂಡವನ' ಅರ್ಥಾತ್ ಜ್ಞಾತೃ ಕ್ಷತ್ರಿಯರ ಭಾಗವಾದ ವನವೆಂದು ಕರೆಯಲಾಗಿದೆಯೋ ಹಾಗೆ, ನನ್ನ ಅಭಿಪ್ರಾಯದಂತೆ ಉತ್ತರ ಪುರಾಣದಲ್ಲಿಯೂ ಮೂಲಪಾಠ ನಾಥ ಷಂಡವನ ಮತ್ತು ಅಪಭ್ರಂಶದಲ್ಲಿ ಣಾಹಸಂಡವಣ ಎಂದಿದೆಯೋ, ಅದನ್ನು ಅಜ್ಞಾನವಶದಿಂದಾಗಿ ಲಿಪಿಕಾರರು ಅವರ ದೃಷ್ಟಿಯಿಂದ ಸುಧಾರಣೆ ಮಾಡಿಬಿಟ್ಟಿದ್ದಾರೆ. ಆದ್ದರಿಂದ ಭಗವಾನರ ತಪೋಭೂಮಿ ಜ್ಞಾತೃವಂಶೀಯ ಕ್ಷತ್ರಿಯರ ನಿವಾಸ ವೈಶಾಲೀ-ಕುಂಡಪುರದ ಸಮೀಪವರ್ತೀ ಉಪವನವೆಂದು ಸಿದ್ಧವಾಗುತ್ತದೆ.

## 10 ಭಗವಾನರ ಕೇವಲಜ್ಞಾನ ಕ್ಷೇತ್ರ

ಭಗವಾನ್ ಮಹಾವೀರರಿಗೆ ಕೇವಲಜ್ಞಾನವು ಯಾವಾಗ ಉಂಟಾಯಿತೆಂಬುದರ ಉಲ್ಲೇಖ ಪ್ರಸ್ತುತ ಗ್ರಂಥದಲ್ಲಿ (2-5) ಕೆಳಕಂಡಂತೆ ನಿರೂಪಿತವಾಗಿದೆ:

ಬಾರಹ ಸಂವಚ್ಛರ–ತವ–ಚರಣು
ಕಿಉ ಸುಮ್ಮಇಣಾ ದುಕ್ಕಿಯ–ಹರಣು
ಪೋಸಂತು ಅಹಿಂಸ ಖಂತಿ ಸಸಹಿ |
ಭಯವಂತು ಸಂತು ವಿಹರಂತು ಮಹಿ
ಗಉ ಜಿಪ್ಪಿಯ–ಗಾಮಹು ಅಇ-ಣಿಂಡಿ
ಸುವಿಉಲಿ ರಿಜುಕೂಲಾ-ಣಯಿಹಿ ತಡಿ ||

ಮೋರ-ಕೀರ-ಸಾರಸ-ಸರಿ ಉಜ್ಜಾಣಮ್ಮಿ ಮಣೋಹರಿ
ಸಾಲ-ಮೂಲಿ ರಿಸ-ರಾಣಉ ರಯಣ-ಸಿಲಹಿ ಆಸೀಣಉ

ಛಟ್ಠೋಣುವವಾಸೇಂ ಹಯದುರಿ ಏಂ
ಪರಿಪಾಲಿಯ-ತೇರಹ-ವಿಹ-ಚರಿಏಂ
ವಇಸಾಹ-ಮಾಸಿ ಸಿಯ-ದಸಮಿ ದಿಣಿ
ಅವರಣ್ಹಇ ಜಾಯಇ ಹಿಮಕಿರಣಿ
ಹತ್ಥುತ್ತರ-ಮಜ್ಝ-ಸಮಾಸಿಯ ಇ
ಪಹು ವಡಿವಣ್ಣಉ ಕೇವಲ ಸಿಯ ಇ

ಇದರ ತಾತ್ಪರ್ಯ: ಭಗವಾನ್ ಮಹಾವೀರರು ಹನ್ನೆರಡು ವರ್ಷಗಳ ವರೆಗೆ ತಪಸ್ಸನ್ನು ಮಾಡಿದರು, ಮತ್ತು ಅವರ ಸೊಸೆ ಚಂದನಾಳ ಅಹಿಂಸಾ ಹಾಗೂ ಕ್ಷಮಾಭಾವದ ಪೋಷಣೆ ಮಾಡಿದರು. ಅವರು ವಿಹಾರ ಮಾಡುತ್ತಾ ಜೃಂಭಿಕ ಗ್ರಾಮದ ಅತಿನಿಕಟ ಋಜುಕುಲಾ ನದಿಯ ದಡದಲ್ಲಿನ ವನವನ್ನು ತಲಪಿದರು. ಅಲ್ಲಿ ಅವರು ಒಂದು ಸಾಲವೃಕ್ಷದ ಕೆಳಗೆ ಶಿಲೆಯ ಮೇಲೆ ಧ್ಯಾನಾರೂಢರಾದರು. ಎರಡು ದಿನಗಳ ಉಪವಾಸಮಾಡಿ ವೈಶಾಖ ಶುಕ್ಲ ದಶಮಿಯದಿನ ಅಪರಾಹ್ಣ ಕಾಲದಲ್ಲಿ, ಚಂದ್ರನು ಉತ್ತರಾಷಾಢ ಮತ್ತು ಹಸ್ತ ನಕ್ಷತ್ರಗಳ ಮಧ್ಯದಲ್ಲಿದ್ದಾಗ, ಕೇವಲ ಜ್ಞಾನ ಪಡೆದರು. ಇದೇ ಮಾತು ಉತ್ತರ ಪುರಾಣದಲ್ಲಿಯೂ ಬಂದಿದೆ :

ಭಗವಾನ್ ವರ್ಧಮಾನೋ-ಅಪಿ-ನೀತ್ವಾ ದ್ವಾದಶ ವತ್ಸರಾನ್
ಛದ್ಮಸ್ಥೇನ ಜಗದ್ಬಂಧು ಜೃಂಭಿಕ ಗ್ರಾಮ ಸನ್ನಿಧೌ ।
ಋಜು ಕೂಲಾ ನದೀತೀರೇ ಮನೋಹರ ವನಾಂತರೇ ॥
ಮಹಾ ರತ್ನ ಶಿಲಾಪಟ್ಟೇ ಪ್ರತಿಮಾಯೋಗಮಾವಸನ್
ಸ್ಥಿತ್ವಾ ಷಷ್ಠೋಪವಾಸೇನ ಸೋ-ಅಧಸ್ತಾತ್ಸಾಲಭೂರುಹಃ
ವೈಶಾಖೇ ಮಾಸಿ ಸಜ್ಯೋತ್ಸ್ನ ದಶಮ್ಯಾಮಪರಾಹ್ಣಕೇ ॥
ಹಸ್ತೋತ್ತರಾಂತರಂ ಯಾತೆ ಶಶಿನ್ಯಾರೂಢಂ ಶುದ್ಧಿಕಃ
ಕ್ಷಪಕ ಶ್ರೇಣಿಮಾರುಹ್ಯ ಶುಕ್ಲಧ್ಯಾನೇನ ಸುಸ್ಥಿತಃ ॥
ಘಾತಿ ಕರ್ಮಾಣಿ ನಿರ್ಮೂಲ್ಯ ಪ್ರಾಪ್ಯಾನಂತ ಚತುಷ್ಟಯಮ್
ಪರಮಾತ್ಮಪದಮ್ ಪ್ರಾಪತ್ಪರಮೇಷ್ಠೀ ಸ ಸನ್ಮತಿಃ ॥

ಇದೇ ಸಂಗತಿ ಹರಿವಂಶ ಪುರಾಣದಲ್ಲಿಯೂ ಈ ಪ್ರಕಾರವಾಗಿ ಬಂದಿದೆ (2. 50-52)

ಮನಃ ಪರ್ಯಯ ಪರ್ಯಂತ ಚತುರ್ ಜ್ಞಾನಮಹೇಕ್ಷಣಃ
ತಪೋ ದ್ವಾದಶವರ್ಷಾಣಿ ಚಕಾರ ದ್ವಾದಶಾತ್ಮಕಮ್ ॥
ವಿಹರನ್ನಥ ನಾಥೋಽಸೌ ಗುಣಗ್ರಾಮ-ಪರಿಗ್ರಹಃ ।
ಋಜುಕೂಲಾಪಗಾಕೂಲೇ ಜೃಂಬಿಕ-ಗ್ರಾಮಮೀಯಿವಾನ್ ॥

ತತ್ರಾತ್ರಾತಾಪನಯೋಗಸ್ಥಃ ಸಾಲಾಭ್ಯಾಸ ಶಿಲಾತಲೇ ।
ವೈಶಾಖ ಶುಕ್ಲ ಪಕ್ಷಸ್ಯ ದಶಾಮ್ಯಾಂ ಪಷ್ಠ ಮಾಶ್ರಿತಃ ॥
ಉತ್ತರಾಫಾಲ್ಗುನೀಪ್ರಾಪ್ತೇ ಶುಕ್ಲಧ್ಯಾನೀ ನಿಶಾಕರೇ ।
ನಿಹತ್ಯ ಘಾತಿಸಂಘಾತಂ ಕೇವಲ ಜ್ಞಾನಮಾಪ್ತವಾನ್ ॥

ಈ ರೀತಿಯಲ್ಲಿ ಮಹಾವೀರರು ಕೈವಲ್ಯಜ್ಞಾನ ಕಲ್ಯಾಣ ಪಡೆದದ್ದು ಜೃಂಬಿಕಗ್ರಾಮದ ಸಮೀಪದಲ್ಲಿ, ಋಜಕುಲಾ ತೀರದಲ್ಲಿ ಎಂದು ತಿಳಿಯುತ್ತದೆ. ಈ ಗ್ರಾಮದ ಹೆಸರು ಆಚಾರಾಂಗ ಸೂತ್ರ ಅಥವಾ ಕಲ್ಪಸೂತ್ರದಲ್ಲಿ ಜಂಭಿಯ ಎಂದು ಹಾಗೂ ನದಿಯ ಹೆಸರಾದ ಋಜುವಾಲುಕಾವನ್ನು ಈ ಗ್ರಾಮ ಪಡೆದಿರುವುದನ್ನೂ ಕಾಣುತ್ತೇವೆ. ಇದು ವರೆವಿಗೂ ಈ ಗ್ರಾಮ ಹಾಗೂ ನದಿಯ ಬಗ್ಗೆ ವಿದ್ವಾಂಸರು ಒಮ್ಮತಕ್ಕೆ ಬಂದಿರಲಿಲ್ಲ ಇದು ಬಿಹಾರದಲ್ಲಿರುವ ಕುಯೇಲ, ಕುಏಲ-ಕೂಲಾ ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ನದಿಯೆ ಎನ್ನುವಲ್ಲಿ ಸಂಶಯವಿಲ್ಲ. ಇದರ ಮೇಲೆಯೆ ದೊಡ್ಡ ರೈಲ್ವೆ ಜಂಕ್ಷನ್ ಸಹ ಇದೆ. ಇದರ ಸಮೀಪವಾಗಿ ಜಂಹುಯಿ ನಗರವು ಇದೆ. ಇದನ್ನೇ ಮಹಾವೀರರು ಜ್ಞಾನ ಪಡೆದ ಸ್ಥಳವೆಂದು ಸ್ವೀಕರಿಸಿ ಅಲ್ಲಿ ಇದಕ್ಕೆ ಒಪ್ಪುವ ರೀತಿಯಲ್ಲಿ ಸ್ಮಾರಕ ರಚಿಸಬೇಕಾಗಿದೆ.

## 11. ಮಹಾವೀರರ ಉಪದೇಶದ ಸ್ಥಳ

ಕೇವಲ ಜ್ಞಾನ ಪಡೆದನಂತರ ಮಹಾವೀರರು ರಾಜಗೃಹವನ್ನು ಸೇರಿದರು. ಮತ್ತು ಆ ನಗರದ ಸಮೀಪವಾಗಿ ವಿಪುಲಾಚಲ ಪರ್ವತದ ಮೇಲೆ ಅವರ ಸಮವಸರಣ ಮಾಡಲಾಯಿತು. ಅಲ್ಲಿ ಅವರ ದಿವ್ಯ ಧ್ವನಿ ಮೊಳಗಿತು. ಹಾಗೂ ಆ ಸಮಯವನ್ನು ಶ್ರಾವಣ, ಕೃಷ್ಣಪಕ್ಷ ಪ್ರತಿಪ್ರದಾ ಎಂದು ಕರೆಯಲಾಗಿದೆ. ಇದರ ಅನುಸಾರವಾಗಿ ಭಗವನರ ಪ್ರಥಮ ಉಪದೇಶ ಕೇವಲ ಜ್ಞಾನ ಸಿದ್ಧಿಸಿಕೊಂಡ 66 ದಿನಗಳ ನಂತರ ಆಯಿತು. ಈ ವಿಚಾರ ಹರಿವಂಶ ಪುರಾಣದಲ್ಲಿ (2,61) ಕೆಳಗಿನ ರೀತಿಯಲ್ಲಿರುವುದನ್ನು ಕಾಣುತ್ತೇವೆ;

ಷಟ್‌ಷಷ್ಠಿ ದಿವಸಾನ್ ಭೂಯೋ ಮೌನೇನ ವಿಹರನ್ ವಿಭುಃ ।
ಆಜಗಾಮ ಜಗತ್ ಖ್ಯಾತಂ ಜಿನೋ ರಾಜಗೃಹಂ ಪುರಮ್ ॥
ಆರುರೋಹ ಗಿರಿಂ ತತ್ರ ವಿಪುಲಂ ವಿಪುಲ ಶ್ರಿಯಮ್ ।
ಪ್ರಬೋಧಾರ್ಥಂ ಸ ಲೋಕಾನಾಂ ಭಾನುಮಾನುದಯಂ ಯಥಾ ॥
ಶ್ರಾವಣ ಸ್ಯಾಸಿತೇ ಪಕ್ಷೇ ನಕ್ಷತ್ರೇ ಅಭಿಜಿತೇ ಪ್ರಭುಃ ।
ಪ್ರತಿಪದ್ಯ ಹಿ ಪೂರ್ವಾಹ್ಣೇ ಶಾಸನಾರ್ಥ ಮ್ರುದಾಹರತ್ ॥

ಈ ರೀತಿಯಲ್ಲಿ ಬಿಹಾರ ರಾಜ್ಯದ ರಾಜಗೃಹ ನಗರಕ್ಕೆ ಸಮೀಪವಿರುವ ವಿಪುಲಾಚಲ ಗಿರಿಯು ಪವಿತ್ರವಾಗಿರುವ, ಮಹಾವೀರರು ಸಮವಸರಣ ಹೊಂದಿದ ಕ್ಷೇತ್ರವಾಗಿದೆ.

ಈ ಪರ್ವತದ ಮೇಲೆ ಈ ಮೊದಲೆ ಅನೇಕ ಜೈನ ಮಂದಿರಗಳಿವೆ. ಮತ್ತು ಸುಮಾರು 25-30 ವರ್ಷಗಳು ಹಿಂದೆಯೇ ವೀರ ಶಾಸನ ಸ್ಮಾರಕವು ಸಹ ಸ್ಥಾಪಿತವಾಗಿದೆ. ಅಂದಿನಿಂದಲೆ ಈ ಸ್ಥಳದಲ್ಲಿ ಶ್ರಾವಣ ಕೃಷ್ಣ ಪ್ರತಿಪದದ ದಿನ ಮಹಾವೀರರ ಜಯಂತಿಯನ್ನು ಆಚರಿಸಲಾಗುತ್ತಿದೆ. ಆದರೆ ಐತಿಹಾಸಿಕ ಮಹತ್ವವಿದ್ದರೂ ಈ ಸ್ಥಳ ಹಾಗೂ ಜಯಂತಿಯನ್ನು ಆಚರಿಸುವ ದಿನ ದೇಶವ್ಯಾಪಿಯಾಗಿಲ್ಲ. ಆದರೂ ಈ ಅಂಶವನ್ನು ನಾವು ಗಮನಿಸಬೇಕಾಗಿದೆ. ಇಲ್ಲಿಯೆ ಮಹಾವೀರರು ತಮ್ಮ ಧರ್ಮಶಾಸನವನ್ನು ಪ್ರಾರಂಭಿಸಿದರು. ಮತ್ತು ಈ ಕಾಲದಲ್ಲಿ ಪ್ರಸಿದ್ಧರಾಗಿದ್ದ ವೇದ ಪಂಡಿತನಾದ ಇಂದ್ರಭೂತಿ ಗೌತಮನು ಸಹ ಇಲ್ಲಿಗೆ ಬಂದು ಭಗವನರ ನಾಯಕತ್ವವನ್ನು ಸ್ವೀಕರಿಸುವುದನ್ನು ಹಾಗೂ ಭಗವನರ ಪ್ರಥಮ ಗಣಧರನಾಗುವುದನ್ನು ಕಾಣುತ್ತೇವೆ. ಇಲ್ಲಿಯೆ ಅವನು (ಇಂದ್ರಭೂಮಿ ಗೌತಮ) ಭಗವನರ ದಿವ್ಯ ಧ್ವನಿಯನ್ನು ಅಂಗ ಮತ್ತು ಪೂರ್ವ ರೂಪದಲ್ಲಿ ವಿಭಜಿಸಿ ಅವರ ಉಪದೇಶಗಳನ್ನು ಲಿಪಿಬದ್ಧಗೊಳಿಸಿ ಗ್ರಂಥರೂಪವನ್ನಾಗಿ ಮಾಡುತ್ತಾನೆ. ಇಲ್ಲಿಯೆ ಮಗಧ ರಾಜಶ್ರೇಷ್ಠನಾದ ಬಿಂಬಸಾರನು ಭಗವನರಿಂದ ಉಪದೇಶವನ್ನು ಪಡೆಯುತ್ತಾನೆ. ಮತ್ತು ಗೌತಮ ಗಣಧರನೊಡನೆ ಧರ್ಮ ಚರ್ಚೆಯನ್ನು ನಡೆಸಿ ಜೈನ ಪುರಾಣ ಹಾಗೂ ಕಾವ್ಯಗಳ ರಚನೆಗೆ ಇಂಬುಕೊಡುತ್ತಾನೆ. ಈ ರಾಜಶ್ರೇಷ್ಠನೆ ತನ್ನ ಪುಣ್ಯಕಾರ್ಯಗಳಿಂದ ಮುಂದಿನ ಮಾನವ ಜನ್ಮದಲ್ಲಿಯೂ ಸಹ ಮಹಾಪದ್ಮ ತೀರ್ಥಂಕರನಾಗುತ್ತಾನೆ.

## 12. ಮಹಾವೀರರ ನಿರ್ವಾಣ ಕ್ಷೇತ್ರ

ಋಜುಕೂಲ ನದಿಯ ದಂಡೆಯಲ್ಲಿ ಕೈವಲ್ಯ ಜ್ಞಾನವನ್ನು ಪಡೆದು 'ವಿಪುಲಾಚಲ' ದಲ್ಲಿ ತನ್ನ ದಿವ್ಯಧ್ವನಿಯ ಮೂಲಕ ಜೈನ ಧರ್ಮದ ಉಪದೇಶವನ್ನು ಕೊಟ್ಟು ಮಹಾವೀರರು 30 ವರ್ಷಗಳವರೆವಿಗೂ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ಧರ್ಮ ಪ್ರಚಾರವನ್ನು ಕೈಗೊಂಡರು. ಇವೆಲ್ಲದರ ನಂತರ ಅವರು ಪಾವಾನಗರಕ್ಕೆ ಬಂದು ಅಲ್ಲಿ ಅನೇಕ ಸರೋವರಗಳು ಕೂಡುವೆಡೆ, ವನಪ್ರದೇಶದಲ್ಲಿ ಉನ್ನತ ಶಿಲಾಬಂಡೆಯ ಮೇಲೆ ವಿರಾಜಮಾನರಾದರು. ಎರಡು ದಿನಗಳವರೆವಿಗೂ ವಿಹಾರವನ್ನು ಕೈಗೊಳ್ಳಲಿಲ್ಲ; ಮತ್ತು ಶುಕ್ಲಧ್ಯಾನದಲ್ಲಿ ತಲ್ಲೀನರಾಗಿ ಕಾರ್ತಿಕ ಕೃಷ್ಣ ಚತುರ್ದಶಿಯ ರಾತ್ರಿಯ ಕೊನೆಯ ಘಳಿಗೆಯಲ್ಲಿ ಚಂದ್ರ ಸ್ವಾತಿ ನಕ್ಷತ್ರದಲ್ಲಿದ್ದಾಗ ಅವರು ತಮ್ಮ ಶರೀರವನ್ನು ತ್ಯಜಿಸಿ ಸಿದ್ಧಪದ ಪ್ರಾಪ್ತಿ ಹೊಂದಿದರು. ಪ್ರಸ್ತುತ ಗ್ರಂಥದಲ್ಲಿ (3, 1) ಈ ವಿಚಾರವನ್ನು ಈ ರೀತಿಯಲ್ಲಿ ಉಲ್ಲೇಖಿಸಲಾಗಿದೆ.

ಅಂತ–ತಿತ್ಥಣಾಹು ವಿ ಮಹಿ ವಿಹರಿವಿ ।
ಜಣ–ದುರಿಯಾಇಂ ದುಲಂಘಇಂ ಪಹರಿವಿ ॥
ಪಾವಾಪುರವರು ಪತ್ತಉ ಮಣಹರಿ ।
ಣವ-ತರು-ಪಲ್ಲವಿ ವಣಿ ಬಹು-ಸರವರಿ ॥

ಸಂಠಿಉ–ಪವಿಮಲ–ರಯಣ–ಸಿಲಾಯಲಿ
ರಾಯಸಂಹು ಣಾವಣಿ ಪಂಕಯ ದಲಿ ||
ದೊಣ್ಣಿ ದಿಯಹಂ ಪವಿಹಾಸ ಮುಏಪ್ಪಿಣುಣಿವ್ವತ್ತಿಹ
ಕತ್ತಿ ಇ ತಮ–ಕಸಣಿ ಪಕ್ಟ ಚವುದ್ದಸಿ ವಾಸರಿ
ಸುಕ್ಕ ಝಾಣು ತಿಜ್ಜಉ ಝುಏಪ್ಪಿಣು ||
ಥಿ ಇ ಸಸಹರಿ ದುಹಹರಿ ಸಾಇವಣಿ ಪಚ್ಚಿಮುರಯಣಿಹಿ ಅವಸರಿ |
ರಿಸಿಸಹಸೇಣ ಸಮಉ ರಯಭಿಂದಣು ||
ಸಿದ್ದಉ ಜಿಣು ಸಿದ್ಧತ್ಥಹು ಣಂದಣು |

ಇದೇ ರೀತಿಯ ವೃತ್ತಾಂತ ಉತ್ತರ ಪುರಾಣದಲ್ಲಿ (67, 508–512) ಈ ರೀತಿಯಲ್ಲಿ ಪ್ರಕಟಗೊಂಡಿದೆ;

ಇಹಾಂತ್ಯ–ತೀರ್ಥನಾಥೋಽಪಿ ವಿಹತ್ಯ ವಿಷಯಾನ್ ಬಹುನ್ ||
ಕ್ರಮಾತ್ಪಾವಾಪುರಂ ಪ್ರಾಪ್ಯ ಮನೋಹರ–ವನಾಂತರೇ |
ಬಹುನಾಂ ಸರಸಾಂ ಮಧ್ಯೇ ಮಹಾಮಣಿ–ಶಿಲಾತಲೇ ||
ಸ್ಥಿತ್ವಾ ದಿನದ್ವಯಂ ವೀತವಿ ಹಾರೋವೃದ್ಧ ನಿರ್ಜರಃ ||
ಕೃಷ್ಣ–ಕಾರ್ತಿಕ–ಪಕ್ಷಸ್ಯ ಚತುರ್ದಶ್ಯಾಂ ನಿಶಾತ್ಯಯೇ ||
ಸ್ವಾತಿಯೋಗೇ ತೃತೀಯೇದ್ಧ ಶುಕ್ಲಧ್ಯಾನ ಪರಾಯಣಃ |
ಕೃತ ತ್ರಿಯೋಗ ಸಂರೋಧಃ ಸಮುಚ್ಛಿನ್ನಕ್ರಿಯಂ ಶ್ರಿತಃ ||
ಹತಾ ಘಾತಿ ಚತುಷ್ಕಃ ಸನ್ನ ಶರೀರೋ ಗುಣಾತ್ಮಕಃ |
ಗಂತಾ ಮುನಿಸಹಸ್ರೇಣ ನಿರ್ವಾಣಂ ಸರ್ವ ವಾಂಛಿತಮ್ ||

ಈ ಎಲ್ಲ ಉಲ್ಲೇಖಗಳಿಂದ ಭಗವಾನ್ ಮಹಾವೀರರ ನಿರ್ವಾಣ ಪಾವಾಪುರದ ಸಮೀಪದ ಸರೋವರಗಳು ಇರುವಡೆ ವನದಲ್ಲಿ ಆಯಿತೆನ್ನುವುದು ಸ್ಪಷ್ಟವಾಗುತ್ತದೆ. ವರ್ತಮಾನ ದಲ್ಲಿ ಭಗವನರ ನಿರ್ವಾಣ ಕ್ಷೇತ್ರವನ್ನು ಪಟನಾ ಜಿಲ್ಲೆಯ ವಿಹಾರ ಶರೀಫದ ಬಳಿ ಈ ಸ್ಥಳವೆಂದು ಗುರುತಿಸಲಾಗಿದೆ. ಅಲ್ಲಿ ವಿಶಾಲ ಸರೋವರದ ಮಧ್ಯೆ ಭವ್ಯ ಜಿನ ಮಂದಿರವನ್ನು ನಿರ್ಮಾಣ ಮಾಡಲಾಗಿದೆ. ಈ ತೀರ್ಥಕ್ಷೇತ್ರಕ್ಕೆ ಹೆಚ್ಚಿನ ಮಾನ್ಯತೆ ದೊರೆತಿದೆ. ದಿಗಂಬರ ಹಾಗೂ ಶ್ವೇತಾಂಬರ ಈ ಎರಡು ಸಂಪ್ರದಾಯಗಳು ಸಹ ಏಕ ಕಂಠದಿಂದ ಇದನ್ನು ಮಹಾವೀರರು ನಿರ್ವಾಣ ಹೊಂದಿದ ಸ್ಥಳವೆಂದು ಸ್ವೀಕರಿಸಿದ್ದಾರೆ.

ಆದರೆ ಇತಿಹಾಸಜ್ಞರು ಈ ಸ್ಥಳವನ್ನು ವಾಸ್ತವಿಕ ನಿರ್ವಾಣ ಭೂಮಿಯೆಂದು ಸ್ವೀಕರಿಸಲು ಸಿದ್ಧರಿಲ್ಲ. ಕಲ್ಪಸೂತ್ರದ ಪರಿಶಿಷ್ಟ ಪರ್ವದ ಅನುಸಾರವಾಗಿ ಪಾವಾದಲ್ಲಿ ಮಹಾವೀರರ ನಿರ್ವಾಣವಾಗಿತ್ತು. ಅದು ಮಲ್ಲ ಎಂಬ ಕ್ಷತ್ರಿಯ ರಾಜನ ರಾಜಧಾನಿಯಾಗಿತ್ತು. ಈ ಮಲ್ಲ ವೈಶಾಲಿಯ ವಜ್ಜಿ ಹಾಗೂ ಲಿಚ್ಛವಿ ಸಂಘದ ಸದಸ್ಯನಾಗಿದ್ದ. ಮತ್ತು ಮಗಧ ಸಾಮ್ರಾಜ್ಯಕ್ಕೆ ಸೇರಿದ ಶಕ್ತಿಯುತ ರಾಜ್ಯದೊಂದಿಗೆ

ಈತನ ವೈರವಿತ್ತು. ಗಂಗಾನದಿಯ ದಕ್ಷಿಣವರ್ತಿ ಪ್ರದೇಶ, ಈಗ ಪಾವಾ ಪ್ರದೇಶ ವಿರುವೆಡೆಯಲ್ಲಿ ಅಲ್ಲಿ ಇವನ ರಾಜ್ಯವಿತ್ತು ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಇದಲ್ಲದೆ ಬೌದ್ಧಗ್ರಂಥಗಳಾದ ದೀಘನಿಕಾಯ, ಮಜ್ಝಿಮನಿಕಾಯಗಳಲ್ಲೂ ಸಹ ಈ ವಿಚಾರ ಸ್ಪಷ್ಟವಾಗಿದೆ. ಪಾವಾ, ಶಾಕ್ಯ ಪ್ರದೇಶದಲ್ಲಿದ್ದು, ವೈಶಾಲಿ, ಪಶ್ಚಿಮಭಾಗದ ಮತ್ತು ಕುಶಿನಗರದಿಂದ ಕೇವಲ 10-12 ಮೈಲಿ ದೂರದಲ್ಲಿದೆ. ಶಾಕ್ಯಪ್ರದೇಶದ ಸಾಮಗಾಮದಲ್ಲಿ ಭಗವಾನ್ ಬುದ್ಧರು ನಿವಾಸವಿದ್ದಾಗ ಒಂದು ದಿನ ಪಾವಾದಲ್ಲಿ ಮಹಾವೀರರು ನಿರ್ವಾಣ ಹೊಂದಿದರೆಂಬ ಸುದ್ದಿ ತಲಪುತ್ತದೆ.

ಈ ಸಂಬಂಧದಲ್ಲಿ ಅನೇಕ ಉಲ್ಲೇಖಗಳು ಬೌದ್ಧ ಗ್ರಂಥಗಳಲ್ಲಿ ಬಂದಿವೆ. ಇವುಗಳನ್ನು ಈ ಹಿಂದೆ ವಿಶ್ಲೇಷಿಸಲಾಗಿದೆ. ಈ ಎಲ್ಲ ವಿಷಯಗಳನ್ನು ವಿಚಾರಮಾಡಿ ಚರಿತ್ರಕಾರರು ಈ ನಿರ್ಣಯಕ್ಕೆ ಬಂದಿದ್ದಾರೆ; ಅಂದೆಂದರೆ, ಭಗವಾನ್ ಮಹಾವೀರರು ಪಾವಾ ಸಮೀಪದಲ್ಲಿ ನಿರ್ವಾಣ ಹೊಂದಿದರು. ಈ ಪಾವಾ ಗ್ರಾಮ ಉತ್ತರ ಪ್ರದೇಶದ ದೇವರಿಯಾ ಜಿಲ್ಲೆಯ ಕುಶೀನಗರಕ್ಕೆ ಸಮೀಪವಾಗಿದೆ. ಇದನ್ನೇ ಈಗ ಸಠಿಯಾಂವ (ಫಾಜಿಲ್ ನಗರ) ಎಂದು ಕರೆಯಲಾಗುತ್ತಿದೆ, ಮತ್ತು ಇಲ್ಲಿ ಬಹಳಷ್ಟು ಪ್ರಾಚೀನವಾಗಿರುವ ಭಗ್ನ ಅವಶೇಷಗಳು ದೊರೆಯುತ್ತವೆ. ಐತಿಹಾಸಿಕ ದೃಷ್ಟಿಯಿಂದ ಈ ಸ್ಥಳವನ್ನು ಪರಿಗಣಿಸಿ ಮಹಾವೀರರು ನಿರ್ವಾಣ ಹೊಂದಿದ ಈ ಸ್ಥಳವನ್ನು ಯೋಗ್ಯ ತೀರ್ಥಕ್ಷೇತ್ರದ ರೀತಿಯಲ್ಲಿ ರೂಪಕೊಡಬೇಕಾಗಿದೆ.

## 13. ಮಹಾವೀರರ ಸಮಕಾಲೀನ ಐತಿಹಾಸಿಕ ಪುರುಷರು

### (ಕ) ವೈಶಾಲೀ ನಗರದ ನರೇಶ ಚೇಟಕ*

ಪ್ರಸ್ತುತ ಗ್ರಂಥದ 5ನೆ ಸಂಧಿಯಲ್ಲಿ ಹಾಗೂ ಸಂಸ್ಕೃತದ ಉತ್ತರಪುರಾಣ (ಪರ್ವ 75) ದಲ್ಲಿ ವೈಶಾಲಿಯ ರಾಜ ಚೇಟಕನ ವೃತ್ತಾಂತ ಬಂದಿದೆ. ಅದರಲ್ಲಿ ವಿಖ್ಯಾತ ವಿನೀತ, ಮತ್ತು ಪರಮ ಅರ್ಹತ ಅಥವಾ ಜಿನಧರ್ಮಾವಲಂಬಿ ಎಂದು ಕರೆಯಲಾಗಿದೆ. ಆತನ ರಾಣಿಯ ಹೆಸರು ಸುಭದ್ರಾದೇವಿ. ಆತನಿಗೆ-ಧನದತ್ತ, ಧನಭದ್ರ, ಉಪೇಂದ್ರ, ಸುದತ್ತ, ಸಿಂಹಭದ್ರ, ಕುಂಭೋಜ, ಅಕಂಪನ, ಪತಂಗತ, ಪ್ರಭಂಜನ, ಮತ್ತು ಪ್ರಭಾಸ ಎಂಬ ಹತ್ತು ಜನ ಗಂಡುಮಕ್ಕಳು. ಇದಲ್ಲದೆ 7 ಜನ ಪುತ್ರಿಯರು ಇದ್ದಂತೆ ತಿಳಿಯುತ್ತದೆ. ಇವರಲ್ಲಿ ಹಿರಿಯಳು ಪ್ರಿಯಕಾರಿಣಿ, ಇವಳನ್ನೇ ಕುಂದಪುರದ ರಾಜ ಸಿದ್ಧಾರ್ಥನಿಗೆ ಕೊಟ್ಟು ವಿವಾಹವಾಗಿತ್ತು. ಈ ದಂಪತಿಗಳ ಮಗನೇ 'ಮಹಾವೀರ'. ಈತನ ತಂದೆತಾಯಿಗಳಾಗುವ ಸೌಭಾಗ್ಯ ಇವರಿಗೆ ಒದಗಿಬಂದಿತ್ತು. ಎರಡನೆಯವಳು- ಮೃಗವತೀ. ಇವಳನ್ನು ವತ್ಸದೇಶದ ರಾಜಧಾನಿ ಕೌಶಂಬಿಯ ಮತ್ತು ಚಂದ್ರವಂಶದ ರಾಜ ಶತಾನಿಕನಿಗೆ ಕೊಟ್ಟು ವಿವಾಹವಾಗಿತ್ತು. ಮೂರನೆಯವಳಾದ ಸುಪ್ರಭೆಯನ್ನು

---

* ಕನ್ನಡದ ನೋಂಪಿ ಕಥೆಗಳಲ್ಲಿ ಈತನ ಪ್ರಸ್ತಾಪವಿದೆ.

ದಶಾರ್ಣ ದೇಶದ (ವಿದಿಶಾ ಜಿಲ್ಲೆ) ರಾಜಧಾನಿ ಹೇಮಕಕ್ಷೆಯಲ್ಲಿದ್ದ ದಶರಥನೊಂದಿಗೆ ವಿವಾಹಮಾಡಿಕೊಡಲಾಗಿತ್ತು. ನಾಲ್ಕನೆಯವಳಾದ ಪ್ರಭಾವತಿ ಕಚ್ಛದೇಶದ ರೋರುಕಾ ನಗರದ ರಾಜ ಉದಯನಿಗೆ ರಾಣಿಯಾಗಿದ್ದಳು. ಇವಳು ಅತ್ಯಂತ ಶೀಲವ್ರತಳಾಗಿದ್ದರಿಂದ ಶೀಲವತಿಯೆಂದೇ ಪ್ರಸಿದ್ಧಿ ಹೊಂದಿದ್ದಾಳೆ.

ಚೇಟಕನ ಐದನೆಯ ಮಗಳು ಜ್ಯೇಷ್ಠ ಗಂಧರ್ವದೇಶದ ಮಹಿಪುರದ ರಾಜನಾದ ಸಾತ್ಯಕಿ ಇವಳನ್ನು ವರಿಸಲಿಚ್ಛಿಸುತ್ತಾನೆ. ಆದರೆ ಚೇಟಕರಾಜ ಯಾವುದೋ ಕಾರಣ ದಿಂದಾಗಿ ಇವರ ವಿವಾಹವನ್ನು ಮಾನ್ಯಮಾಡುವುದಿಲ್ಲ, ಉಚಿತ ಎಂದು ಭಾವಿಸುವು ದಿಲ್ಲ. ಇದರಿಂದಾಗಿ ಕ್ರೋಧಗೊಂಡ ಸಾತ್ಯಕಿಯು ಚೇಟಕನ ರಾಜ್ಯದ ಮೇಲೆ ಯುದ್ಧ ಹೂಡುತ್ತಾನೆ. ಆದರೆ ಯುದ್ಧದಲ್ಲಿ ಸಾತ್ಯಕಿಯು ಸೋತು ಲಜ್ಜಿತನಾಗಿ ದಮವರ ಎಂಬ ಜೈನ ಮುನಿಗಳಿಂದ ಮುನಿದೀಕ್ಷೆಯನ್ನು ಪಡೆಯುತ್ತಾನೆ. ಜ್ಯೇಷ್ಠ ಹಾಗೂ ಆರನೆಯವಳಾದ 'ಚೇಲನಾಳ' ಚಿತ್ರವನ್ನು ನೋಡಿ ಮುಗ್ಧನಾದ ಮಗಧರಾಜ ಶ್ರೇಣಿಕ ಅವರನ್ನು ಪಡೆಯಲು ಚೇಟಕರಾಜನನ್ನು ಯಾಚಿಸುತ್ತಾನೆ ಆದರೆ ಈ ರಾಜನ ವಯಸ್ಸು ಅಧಿಕವಾಗಿದೆ ಎಂಬ ಕಾರಣದಿಂದ ತನ್ನ ಮಕ್ಕಳ ಮದುವೆಗೆ ಒಪ್ಪುವುದಿಲ್ಲ. ಇದರಿಂದಾಗಿ ರಾಜ ಶ್ರೇಣಿಕನು ತುಂಬಾ ದುಃಖಿತನಾಗುತ್ತಾನೆ. ಇದರ ಚರ್ಚೆಯನ್ನು ಅವನ ಮಂತ್ರಿಗಳು ಹಿರಿಯ ಮಗನಾದ ರಾಜಕುಮಾರ ಅಭಯಕುಮಾರನೊಂದಿಗೆ ಮಾಡುತ್ತಾರೆ. ಅಭಯಕುಮಾರ ಒಬ್ಬ ವ್ಯಾಪಾರಿಯ ವೇಷವನ್ನು ಧರಿಸಿ ವೈಶಾಲಿಯ ರಾಜಭವನವನ್ನು ಪ್ರವೇಶಿಸುತ್ತಾನೆ. ಅಲ್ಲಿ ಇಬ್ಬರು ಕನ್ಯೆಯರನ್ನೂ ಸಂಧಿಸಿ ಅವರಿಗೆ ತನ್ನ ರಾಜ ಶ್ರೇಣಿಕನ ಚಿತ್ರಪಟವನ್ನು ತೋರಿಸಿ ಮೋಹಿತರಾಗುವಂತೆ ಮಾಡುತ್ತಾನೆ. ಅವನು ಗುಪ್ತದ್ವಾರದ ಮೂಲಕ, ಸುರಂಗ ಮಾರ್ಗವಾಗಿ ಅವರನ್ನು ಅಪಹರಿಸುವ ಪ್ರಯತ್ನ ನಡೆಸುತ್ತಾನೆ. ಚೇಲನಾಳು ತನ್ನ ಒಡವೆಗಳನ್ನು ತರುವಂತೆ ಜ್ಯೇಷ್ಠಳನ್ನು ಕಳುಹಿಸುತ್ತಾಳೆ. ಅನಂತರ ಸ್ವಯಂ ತಾನೊಬ್ಬಳೇ ಅಭಯಕುಮಾರನೊಂದಿಗೆ ಹೊರಟುಬಂದು ರಾಜಗೃಹ ತಲುಪುತ್ತಾಳೆ. ಅಲ್ಲಿ ಅವಳ ವಿವಾಹ ಶ್ರೇಣಿಕ ರಾಜ ನೊಂದಿಗೆ ಜರಗುತ್ತದೆ. ಜ್ಯೇಷ್ಠೆಯು ತನ್ನ ತಂಗಿಯು ತನಗೆ ವಂಚಿಸಿ ತನ್ನನ್ನು ಹಿಂದೆ ಬಿಟ್ಟು ಹೋದಳೆಂಬ ಅಂಶ ತಿಳಿದು ಜೀವನದಲ್ಲಿ ವಿರಕ್ತಿ ಹೊಂದುತ್ತಾಳೆ. ಕೊನೆಗೆ ಒಬ್ಬ ಆರ್ಯಿಕೆಯ ಹತ್ತಿರ ಹೋಗಿ ಜಿನದೀಕ್ಷೆಯನ್ನು ಪಡೆಯುತ್ತಾಳೆ.

ಇನ್ನು ಚೇಟಕನ ಏಳನೆಯ ಮಗಳ ಹೆಸರು ಚಂದನಾ. ಒಮ್ಮೆ ಇವಳು ತನ ಪರಿವಾರದೊಂದಿಗೆ ಉಪವನದಲ್ಲಿ ವಿಹರಿಸುತ್ತಿರಲು ಮನೋವೇಗನೆಂಬ ವಿದ್ಯಾಧರ ಇವಳನ್ನು ಕಂಡು ಮೋಹಿತನಾಗಿ ಮರೆಯಲ್ಲಿದ್ದು ಸಮಯನೋಡಿ ಅಪಹರಿಸುತ್ತಾನೆ. ಆದರೆ ತನ್ನ ಪತ್ನಿ ಮನೋವೇಗೆಯ ಭಯದಿಂದಾಗಿ ಚಿಂತಿತನಾಗಿ ಅವನು ಚಂದ ನಳನ್ನು ಇರಾವತಿ ನದಿಯ ದಕ್ಷಿಣ ದಡದಲ್ಲಿರುವ ಭೂತರಮಣವೆಂಬ ವನದಲ್ಲಿ ಬಿಟ್ಟು ಹೋಗುತ್ತಾನೆ. ಅಲ್ಲಿ ಅವಳ ಪರಿಚಯ ಶ್ಯಾಮಾಂಕನೆಂಬ ಭಿಲ್ಲನೊಂದಿಗೆ ಆಗು

ತ್ತದೆ. ಅವನು ಅವಳನ್ನು ಗೌರವಿಸಿ ತಮ್ಮ ಭಿಲ್ಲರಾಜನಾದ ಸಿಂಹನ ಬಳಿಗೆ ಕರೆದೊಯ್ಯುತ್ತಾನೆ. ಆ ಭಿಲ್ಲರಾಜ ಅವಳನ್ನು ಕೌಶಾಂಬಿಯ ಪ್ರಸಿದ್ಧ ವ್ಯಾಪಾರಿ ಸೇಠ್ ಋಷಭಸೇನನ ಕರ್ಮಚಾರಿಯಾದ ಮಿತ್ರವೀರನಿಗೆ ತಲುಪಿಸುತ್ತಾನೆ. ಅವನು ಅವಳನ್ನು ಅಲ್ಲಿಂದ ತನ್ನ ಒಡೆಯನ ಬಳಿಗೆ ಕರೆದೊಯ್ಯುತ್ತಾನೆ. ಸೇಠನ ಪತ್ನಿ ಅವಳನ್ನು ಈರ್ಷ್ಯೆಯಿಂದ ತನ್ನ ದಾಸಿಯನ್ನಾಗಿ ಮಾಡಿಕೊಳ್ಳುತ್ತಾಳೆ. ಇಂತಹ ಪರಿಸ್ಥಿತಿಯಲ್ಲಿ ಒಂದು ದಿನ ಆ ಊರಿಗೆ ಮಹಾವೀರರ ಆಗಮನವಾಗುತ್ತದೆ. ಆಗ ಚಂದನೆಯು ತುಂಬು ಭಕ್ತಿಯಿಂದ ಆಹಾರ ನೀಡುತ್ತಾಳೆ. ಈ ಒಂದು ಘಟನೆಯಿಂದಾಗಿ ಕೌಶಾಂಬಿಯಲ್ಲಿ ಚಂದನಳ ಖ್ಯಾತಿ ನಾಲ್ಕು ದಿಕ್ಕುಗಳಿಗೂ ಹಬ್ಬುತ್ತದೆ. ಮತ್ತು ಅವಳ ಅಕ್ಕ ರಾಣಿ ಮೃಗಾವತಿಗೆ ಈ ವಿಚಾರ ತಿಳಿಯುತ್ತದೆ. ಅವಳು ತನ್ನ ಮಗ ರಾಜಕುಮಾರ ಉದಯನೊಂದಿಗೆ ಸೇಠನ ಮನೆಗೆ ಬರುತ್ತಾಳೆ. ಮತ್ತು ಚಂದನೆಯನ್ನು ತನ್ನ ಮನೆಗೆ ಕರೆದೊಯ್ಯುತ್ತಾಳೆ. ಅಲ್ಲಿಂದ ಮುಂದೆ ಚಂದನೆ ವೈರಾಗ್ಯ ಭಾವದಿಂದ ಮಹಾವೀರ ಭಗವನರ ಬಳಿಗೆ ಶರಣು ಹೋಗಿ ದೀಕ್ಷೆಯನ್ನು ಪಡೆಯುತ್ತಾಳೆ. ಮತ್ತು ಕೊನೆಯಲ್ಲಿ ಅವಳೆ ಭಗವನರ ಆರ್ಯೆಯರ ಸಂಘದ ಮುಖ್ಯಸ್ಥಳಾಗುತ್ತಾಳೆ.

ವೈಶಾಲಿ ರಾಜನಾದ ಚೇಟಕನ ಹಾಗೂ ಅವನ ಪರಿವಾರದ ಬಗ್ಗೆ ಇಷ್ಟೆಲ್ಲ ವಿಚಾರಗಳು ಜೈನ ಪುರಾಣಗಳಲ್ಲಿ ಸವಿಸ್ತಾರ ವರ್ಣನೆಗಳೊಂದಿಗೆ ದೊರೆಯುತ್ತವೆ. ಇದರಿಂದಾಗಿ ಒಂದಂಶವಂತೂ ಸ್ಪಷ್ಟಗೊಳ್ಳುತ್ತದೆ. ಅದೆಂದರೆ; ವೈಶಾಲಿಯ ರಾಜ ಚೇಟಕನು ಮಹಾವೀರರ ಅಜ್ಜನಾಗಿದ್ದ, ಮಗಧರಾಜ ಶ್ರೇಣಿಕ ಮತ್ತು ಕೌಶಾಂಬಿಯ ರಾಜ ಶತಾನೀಕ ಅವನ ತಾಯಿಯ ಒಡಹುಟ್ಟಿದ ಸಹೋದರಿಯರಿಗೆ ಪತಿಗಳಾಗಿದ್ದರು, ಹಾಗೂ ಕೌಶಾಂಬಿಯ ರಾಜ ಶತಾನೀಕನ ಮಗ ಇವನ ತಾಯಿಕಡೆಯ ದಾಯಾದಿಗಳಾಗಿದ್ದರು.

## (ಖ) ಮಗಧರಾಜ ಶ್ರೇಣಿಕ ಬಿಂಬಸಾರ *

ಮಗಧದೇಶದ ರಾಜ ಶ್ರೇಣಿಕನೊಂದಿಗೆ ಮಹಾವೀರರ ಮೈತ್ರಿ ಸಂಬಂಧ ಬಹಳ ಧೀರ್ಘ ಕಾಲದ್ದು, ಹಾಗೂ ಘನಿಷ್ಠವಾದದ್ದೆಂದು ತಿಳಿದುಬರುತ್ತದೆ. ಬಹಳಷ್ಟು ಜೈನಪುರಾಣ ಪರಂಪರೆಯೆಲ್ಲವೂ ಶ್ರೇಣಿಕನ ಪ್ರಶ್ನೆಯೊಂದಿಗೆ ಹಾಗೂ ಮಹಾವೀರರ ಅಥವಾ ಅವರ ಪ್ರಮುಖ ಗಣಧರನಾದ ಇಂದ್ರಭೂತಿಯ ಉತ್ತರದೊಂದಿಗೆ ಪ್ರಾರಂಭವಾಗುತ್ತದೆ. ಇದರ ಬಹಳಷ್ಟು ವೃತ್ತಾಂತ ಈ ಪ್ರಸ್ತುತ ಗ್ರಂಥದ ಸಂಧಿ 6 ರಿಂದ ಸಂಧಿ 11ರ ವರೆಗಿನ ಅಧ್ಯಾಯಗಳಲ್ಲಿ ದೊರೆಯುತ್ತದೆ. ಈ ರಾಜನ ಐತಿಹಾಸಿಕತೆಯ ಬಗ್ಗೆ ಯಾವ ಸಂದೇಹವೂ ಇಲ್ಲ. ಜೈನಗ್ರಂಥಗಳಲ್ಲದೆ ಬೌದ್ಧ ಸಾಹಿತ್ಯ

* ಈತನ ಬಗ್ಗೆ ವಡ್ಡಾರಾಧನೆಯಲ್ಲೂ ನೋಂಪಿ ಕತೆಗಳಲ್ಲೂ ಸಾಕಷ್ಟು ವಿವರಗಳಿವೆಯಲ್ಲದೆ ಜಿನದೇವಣ್ಣನೆಂಬ ಕವಿ (1444) ಶ್ರೇಣಿಕ ಚರಿತೆಯೆಂಬ ಸಾಂಗತ್ಯಕಾವ್ಯವನ್ನು ರಚಿಸಿದ್ದಾನೆ.

ದಲ್ಲಿಯೂ ಹಾಗೂ ವೈದಿಕ ಪರಂಪರೆಯ ಪುರಾಣಗಳಲ್ಲಿಯೂ ಸಹ ಇದರ ವೃತ್ತಾಂತ ಅಥವಾ ಉಲ್ಲೇಖ ದೊರೆಯುತ್ತದೆ. ದಿಗಂಬರ ಜೈನ ಪರಂಪರೆಯಲ್ಲಿ ಇದರ ಉಲ್ಲೇಖ ಕೇವಲ ಶ್ರೇಣಿಕ ಎಂಬ ಹೆಸರಿಂದಷ್ಟೆ ದೊರೆಯುತ್ತದೆ. ಆದರೆ ಇವನಿಗೆ ಭಿಂಭಾ ಅರ್ಥಾತ್ ಭೇರಿ ಭಾರಿಸುವ ಅಭಿರುಚಿಯೂ ಸಹ ಇತ್ತು. (1 ಹಾಗೂ 7ನೆಯ ಸಂಧಿಯನ್ನು ಪರಿಶೀಲಿಸಬಹುದು) ಮತ್ತು ಈ ಕಾರಣದಿಂದಾಗಿ ಇವನಿಗೆ ಭಿಂಭಿಸಾರ ಅಥವಾ ಭಿಂಭ ಸಾರ ಎಂಬುದಾಗಿಯೂ ಪ್ರಸಿದ್ಧಿ ಹೊಂದಿದಂತೆಯೂ ತಿಳಿಯುತ್ತದೆ. ಶ್ವೇತಾಂಬರ ಗ್ರಂಥಗಳಲ್ಲಿ ಹೆಚ್ಚಾಗಿ ಈ ಹೆಸರಿನಿಂದಲೇ ಇವನನ್ನು ಸಂಬೋಧಿಸಲಾಗಿದೆ. ಈ ಶಬ್ದದ ಅಪಭ್ರಂಶ ರೂಪ ಬಿಂಬಸಾರ ಅಥವಾ ಬಂಬಸಾರ ಇದ್ದಂತೆ ತಿಳಿಯುತ್ತದೆ. ಬೌದ್ಧ ಸಾಹಿತ್ಯದಲ್ಲಿ ಶ್ರೇಣಿಕ ಶಬ್ದದೊಂದಿಗೆ ಹಾಗೂ ಬೇರೆಯಾಗಿಯೂ ಈ ಹೆಸರನ್ನು ಬಳಸಿರುವುದನ್ನು ಕಾಣುತ್ತೇವೆ. ಬೌದ್ಧ ಗ್ರಂಥ ಉದಾನ ಅಟ್ಠಕಥಾ 104ರ ಅನು ಸಾರವಾಗಿ ಬಿಂಬ ಸುವರ್ಣದ ಒಂದು ಹೆಸರಾಗಿದೆ ಮತ್ತು ರಾಜನ ಶರೀರ ಸ್ವರ್ಣದ ರೀತಿ ಯಲ್ಲಿ ಬೆಳಗುತ್ತಿದ್ದರಿಂದ ಅವನಿಗೆ ಬಿಂಬಸಾರನೆಂದು ಹೆಸರು ಬಂದಂತೆ ತಿಳಿಯುತ್ತದೆ. ಒಂದು ಟಿಬ್ಬೆಟ್ ಪರಂಪರೆಯ ಪ್ರಕಾರ ರಾಜನ ತಾಯಿಯ ಹೆಸರು ಬಿಂಬಾ ಯೆಂದಿದ್ದು ಅದೇ ಮಗನಿಗೂ ಅನ್ವಯವಾಗಿ ಬಿಂಬಸಾರ ಎಂದಾಗಿದೆ. ಆದರೆ ಈ ಎಲ್ಲ ಉತ್ಪತ್ತಿಗಳು ಉಕ್ತ ಹೆಸರಿನಿಂದ ಕಲ್ಪಿತವಾಗಿವೆ. ಶ್ರೇಣಿಕ ಎಂಬ ಹೆಸರು ಸಹ ಅನೇಕ ರೀತಿಯಲ್ಲಿ ವ್ಯುತ್ಪತ್ತಿ ಮಾಡಲ್ಪಟ್ಟಿದೆ. ಹೇಮಚಂದ್ರನಿಂದ ರಚಿತವಾಗಿರುವ 'ಅಭಿಧಾನ ಚಿಂತಾಮಣಿ' ಯಲ್ಲಿ ಶ್ರೇಣೀ ಕಾರಯತಿ ಶ್ರೇಣಿಕೊ ಮಗಧೇಶ್ವರಃ ಈ ರೀತಿಯಲ್ಲಿ ಯಾರು ಶ್ರೇಣಿಯನ್ನು ಸ್ಥಾಪಿಸಿದ್ದಾರೊ ಅವರುಗಳನ್ನು ಶ್ರೇಣಿಕರೆಂದು ಕರೆಯುತ್ತಿದ್ದರೆಂದು—ಈ ವ್ಯುತ್ಪತ್ತಿ ತಿಳಿಯಪಡಿಸುತ್ತದೆ. ಬೌದ್ಧ ಪರಂಪರೆಯ ಒಂದು ವಿನಯಪಿಟಕಾ ಪ್ರತಿಯಲ್ಲಿ ಬಿಂಬಸಾರನನ್ನು ಆತನ ತಂದೆ ಹದಿನೆಂಟು ಶ್ರೇಣಿಗಳಿಗೆ ಒಡೆಯನನ್ನಾಗಿ ಮಾಡಿದ್ದನೆಂದೂ, ಈ ಕಾರಣದಿಂದಾಗಿ ಅವನನ್ನು ಶ್ರೇಣಿಕನೆಂದು ಕರೆಯುತ್ತಿದ್ದರೆಂದೂ ಹೇಳಲ್ಪಟ್ಟಿದೆ. ಅರ್ಧಮಾಗಧಿ ಜಂಬೂದ್ವೀಪ ಪಣ್ಣತ್ತಿಯಲ್ಲಿ 9 ನಾರುವರು ಮತ್ತು 9 ಕಾರುವರು ಎಂದು ಈ ರೀತಿಯಾಗಿ ಹದಿನೆಂಟು ಶ್ರೇಣಿಗಳ ಹೆಸರಿನ ಪಟ್ಟಿಯನ್ನು ಮಾಡಲಾಗಿದೆ. ಕುಂಬಾರ, ಪಟವಾ, ಸ್ವರ್ಣಕಾರ, (ಸುವರ್ಣ ಕಾರ–ಅಕ್ಕಸಾಲಿ) ಸೂತಕಾರ, (ಅಡಿಗೆಯವನು–ಬಡಗಿ) ಗಂಧರ್ವ, (ಸಂಗೀತಕಾರ) ಕಾಷವಗ್ಗ(ಕ್ಷೌರಿಕ)ಮಾಲಾಕಾರ,(ಹೂವಾಡಿಗ)ಕಚ್ಛಕಾರ(ತರಕಾರಿಯವನು)ಮತ್ತು ತಂಬೋಲಿಯ (ವೀಳೆಯದೆಲೆಯವನು) ಹಾಗೆಯೇ ಒಂಭತ್ತು ಕಾರುಗಳು; ಚರ್ಮ ಕಾರ (ಮೋಚಿ) ಯಂತ್ರ ಪೀಡಕ, (ಸಾಣಿಕ) ಗಂಛೀಯ, (ಬಟ್ಟೆಮಾರಾಟಗ) ಛಿಂಪೀ, (ಶಿಲ್ಪಕಾರ) ಕಂಸಾರ, (ಲೋಹಿ) ಸೇವಕ, (ಸೀವಗ) ಗ್ವಾಲ, (ಗೋವಾ ಡಿಗ) ಭಿಲ್ಲ, (ಅರಣ್ಯಾಧಿಕಾರಿ) ಮತ್ತು ಧೀವರ (ಮೀಂಗುಲಿಗ) ಎಂಬುದಾಗಿದೆ. ಪ್ರಾಕೃತ ಗ್ರಂಥಗಳಲ್ಲಿ ದೊರೆಯಬಹುದಾದ ಸೆನೀಯ ಶಬ್ದ ಏನಿದೆಯೊ ಅದರ ಅಭಿ

ಪ್ರಾಯ ಸೈನಿಕ ಅಥವಾ ಸೇನಾಪತಿಯೆಂದಿರ ಬೇಕು. ಅದರ ಸಂಸ್ಕೃತ ರೂಪಾಂತರವೇ ಭ್ರಮೆಯಿಂದಾಗಿ ಶ್ರೇಣಿಕ ಎಂದಾಗಿರಬಹುದು.

ಪ್ರಸ್ತುತ ಗ್ರಂಥದ ಅನುಸಾರವಾಗಿ ಮಗಧ ದೇಶ, ರಾಜಗೃಹ ನಗರದ ರಾಜ ಪ್ರಶ್ರೇಣಿಕ ಅಥವಾ ಉಪಶ್ರೇಣಿಕನ ರಾಣಿ ಚಿಲಾತದೇವಿಯಿಂದ ಚಿಲಾತಪುತ್ರ ಅಥವಾ ಕಿರಾತಪುತ್ರ ಎಂಬ ಹೆಸರಿನ ಕುಮಾರ ಹುಟ್ಟುತ್ತಾನೆ.* ಅವನು ಉಜ್ಜನಿಯ ರಾಜ ಪ್ರದ್ಯೋತನನ್ನು ಮೋಸದಿಂದ ಬಂಧಿಸಿ ತನ್ನ ತಂದೆಯ ಮುಂದೆ ತಂದು ನಿಲ್ಲಿಸುತ್ತಾನೆ. ಈ ಹಿಂದೆ ಉದ್ಯೋತನ ವಿರುದ್ಧವಾಗಿ ರಾಜ ಔದಾಯನನ್ನು ಕಳುಹಿಸಿರುತ್ತಾನೆ. ಉದ್ಯೋತ ಆಗ ಅವನನ್ನು ಸೋಲಿಸಿ ಬಂಧಿಯನ್ನಾಗಿ ಮಾಡಿಕೊಂಡಿರುತ್ತಾನೆ. ಚಿಲಾತಪುತ್ರ ಈ ಕಾರ್ಯದಿಂದಾಗಿ ಹರ್ಷಿತಗೊಂಡು ಅವನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿ ರಾಜ್ಯಾಭಿಷೇಕಗೊಳಿಸುತ್ತಾನೆ. ಆದರೆ ಅವನು ರಾಜಕೀಯ ಕ್ಷೇತ್ರದಲ್ಲಿ ಚತುರನಾಗದೆ ವಿಫಲತೆಹೊಂದಿ ಅನೀತಿ ಮಾರ್ಗವನ್ನು ಹಿಡಿಯುತ್ತಾನೆ. ಇದರಿಂದಾಗಿ ಮಂತ್ರಿಗಳು ಹಾಗೂ ಸಾಮಂತರು ನಿರ್ವಾಸಿತ ರಾಜಕುಮಾರ ಶ್ರೇಣಿಕನನ್ನು ಕಾಂಚಿಪುರದಿಂದ ಕರೆಸುತ್ತಾರೆ. ಶ್ರೇಣಿಕ ಬಂದು ಕಿರಾತಪುತ್ರನನ್ನು ಸೋಲಿಸಿ ರಾಜ್ಯದಿಂದ ಹೊರದೂಡುತ್ತಾನೆ. ಚಿಲಾತಪುತ್ರ ಕಾಡಿಗೆ ಹೋಗಿ ನೆಲಸಿ ಢಕಾಯಿತರ ದರೋಡೆಕೋರ ಗುಂಪಿನ ನಾಯಕನಾಗುತ್ತಾನೆ ಮತ್ತು ಹಿಂತಿರುಗಿ ಬಂದು ಶ್ರೇಣಿಕನಿಗೆ ಸೋತುಹೋತ್ತಾನೆ. ಕೊನೆಗೆ ಚಿಲಾತಪುತ್ರ ವಿರಕ್ತನಾಗಿ ಮುನಿ ದೀಕ್ಷೆಯನ್ನು ಪಡೆಯುತ್ತಾನೆ. ಇದೇ ಅವಸ್ಥೆಯಲ್ಲಿ ಅವನು ಪ್ರಾಣಿಗೆ ಸಿಕ್ಕಿ ಆಹಾರವಾಗಿ ಸ್ವರ್ಗಸ್ಥನಾಗುತ್ತಾನೆ.

ಶ್ರೇಣಿಕನ ಜನ್ಮ ಉಪಶ್ರೇಣಿಕನ ಎರಡನೆಯ ರಾಣಿ ಸುಪ್ರಭಾದೇವಿಯಿಂದ ಆಯಿತು. ಅವನು ತುಂಬಾ ವಿಲಕ್ಷಣ ವ್ಯಕ್ತಿಯಾಗಿದ್ದ. ರಾಜ್ಯಪಟ್ಟಕ್ಕೆ ರಾಜಕುಮಾರರಿಗಾಗಿ ಏರ್ಪಡಿಸಿದ ಪರೀಕ್ಷೆಗಳಲ್ಲಿ ಶ್ರೇಣಿಕನೆ ತೇರ್ಗಡೆಯಾಗಿ ಬರುತ್ತಾನೆ. ಇದರಿಂದಾಗಿ ರಾಜಕುಮಾರರಲ್ಲಿ ವೈಮನಸ್ಯ ಬರುತ್ತದೆಯೆಂಬ ಕಾರಣದಿಂದಾಗಿ ರಾಜನುಶ್ರೇಣಿಕನನ್ನೆ ರಾಜ್ಯದಿಂದ ನಿರ್ವಾಸಿತನನ್ನಾಗಿ ಮಾಡಿದನು. ಮೊದಲೇನೋ ಶ್ರೇಣಿಕ ನಂದಗ್ರಾಮವನ್ನು ತಲುಪಿದನಾದರೂ ಅಲ್ಲಿಂದ ಪರಿಭ್ರಮಣ ಮಾಡುತ್ತ ತನ್ನ ಬುದ್ಧಿ ಹಾಗೂ ಸಾಹಸಗಳ ಚಮತ್ಕಾರಗಳನ್ನು ಪ್ರದರ್ಶಿಸುತ್ತ ಕಾಂಚಿಪುರವನ್ನು ತಲುಪುತ್ತಾನೆ. ಅಲ್ಲಿ, ಮಗಧದಲ್ಲಿ ರಾಜ ಚಿಲಾತಪುತ್ರನ ಅನ್ಯಾಯದಿಂದ ಕ್ಷುದ್ರರಾದ ಮಂತ್ರಿಗಳು, ಶ್ರೇಣಿಕನನ್ನು ಆಮಂತ್ರಿಸಿ ಅವನನ್ನು ಮಗಧದ ರಾಜನನ್ನಾಗಿ ಮಾಡುತ್ತಾರೆ.

---

* ವಡ್ಡಾರಾಧನೆಯಲ್ಲಿ ಈ ಕಥೆಯಿದೆ.

ಒಂದು ದಿನ ರಾಜ ತನ್ನ ರಾಜಧಾನಿಗೆ ಸಮೀಪದಲ್ಲಿದ್ದ ಕಾಡಿಗೆ ಬೇಟೆಗಾಗಿ ಹೊರಟ. ಅಲ್ಲಿ ಅವನು ಒಬ್ಬ ಮುನಿಯನ್ನು ಕಂಡು, ಅದನ್ನು ಒಂದು ಅಪಶಕುನವೆಂದು ಭಾವಿಸಿದ ಹಾಗೂ ಅದರಿಂದ ಕ್ರೋಧಗೊಂಡು ಬೇಟೆ ನಾಯಿಗಳನ್ನು ಬಿಡುತ್ತಾನೆ. ಆದರೆ ಮುನಿಗಳ ಪ್ರಭಾವದಿಂದಾಗಿ ನಾಯಿಗಳು ಸಹ ಶಾಂತವಾಗಿಬಿಡುತ್ತವೆ, ಮತ್ತು ರಾಜನ ಬಾಣಗಳು ಸಹ ಪುಷ್ಪದ ರೀತಿಯಲ್ಲಿ ಕೋಮಲವಾಗಿ ಹರಿದಾಡುತ್ತವೆ.

ಆಗ ರಾಜ ತನ್ನ ಕೋಪವನ್ನು ಹೊರದೂಡಲು ಒಂದು ಮೃತಸರ್ಪವನ್ನು ತೆಗೆದು ಮುನಿಯ ಕೊರಳಿಗೆ ಹಾರವನ್ನಾಗಿ ಹಾಕುತ್ತಾನೆ. ಈ ಘೋರ ಕೃತ್ಯದಿಂದಾಗಿ ಶ್ರೇಣಿಕನಿಗೆ ಏಳನೆಯ ನರಕವು ಆಯು-ಬಂಧವು ಪ್ರಾಪ್ತವಾಗುತ್ತದೆ. ಇಷ್ಟೆಲ್ಲ ಉಪಸರ್ಗ ಹೊಂದಿದ ಮೇಲೆಯೂ ಮುನಿಗೆ ಯಾವ ರಾಗದ್ವೇಷವು ಉತ್ಪನ್ನವಾಗದಿರುವುದನ್ನು ನೋಡಿ ಅವನ ಮನೋಗತ ಭಾವನೆಗಳಲ್ಲಿ ಪರಿವರ್ತನೆ ಕಂಡುಬರುತ್ತದೆ. ರಾಜನ ಮನಸ್ಸು ಶಾಂತ ಪರಿಸ್ಥಿತಿಗೆ ಬಂದಿರುವುದನ್ನು ಮನಗಂಡು ಮುನಿಗಳು, ತಮ್ಮ ಶಾಂತ ಮೃದು ಮಧುರ ವಾಣಿಯಿಂದ ಅವನಿಗೆ ಆಶೀರ್ವದಿಸಿ ಉಪದೇಶವನ್ನು ಕೊಡುತ್ತಾರೆ. ಕೇವಲ ಇಷ್ಟು ಮಾತ್ರದಿಂದಲೆ ರಾಜ ಶ್ರೇಣಿಕನ ಮಿಥ್ಯಾತ್ವ ಭಾವ ದೂರವಾಗಿ ಅವನಿಗೆ ಕ್ಷಾಯಿಕ ಸಮ್ಯಕ್ತ್ವ ಪ್ರಾಪ್ತವಾಗುತ್ತದೆ. ಅವನು ಮುನಿರಾಜನ ಚರಣಗಳಿಗೆ ವಂದಿಸಿ ಹಿಂತಿರುಗುತ್ತಾನೆ.

ಒಂದು ದಿನ ರಾಜ ಶ್ರೇಣಿಕನಿಗೆ ವಿಪುಲಾಚಲಪರ್ವತಕ್ಕೆ ಭಗವಾನ್ ಮಹಾವೀರರು ಬಂದಿರುವ ವಿಚಾರ ತಿಳಿಯುತ್ತದೆ. ಅಲ್ಲಿಗೆ ರಾಜ ಬಂದು ಭಕ್ತಿಯಿಂದ ಹೋಗಿ ದರ್ಶನ ಲಾಭ ಪಡೆದು ಸ್ತುತಿಸುತ್ತಾನೆ. ಈ ಧರ್ಮಭಾವನೆಯ ಪ್ರಭಾವದಿಂದಾಗಿ ಅವನಿಗೆ ಸಮ್ಯಕ್ತ್ವ ಪರಿಪಕ್ವವಾಗಿ ಸಪ್ತಮ ನರಕದಿಂದ ಮುಕ್ತಿ ದೊರೆತು ಪ್ರಥಮ ನರಕ ಮಾತ್ರವೇ ಉಳಿಯುತ್ತದೆ ಮತ್ತು ತೀರ್ಥಂಕರ ನಾಮಕರ್ಮ ಬಂಧವು ಪ್ರಾಪ್ತವಾಗುತ್ತದೆ. ಈ ಸಂಬಂಧದಲ್ಲಿ ಶ್ರೇಣಿಕನು ಗೌತಮ ಗಣಧರನನ್ನು ಈ ರೀತಿ ಪ್ರಶ್ನಿಸುತ್ತಾನೆ. 'ಒಂದು ವೇಳೆ ನನ್ನ ಮನಸ್ಸು ಜೈನಧರ್ಮದ ಕಡೆ ಒಲಿದಿದ್ದರೂ ವ್ರತಧಾರಣೆಯನ್ನು ಸ್ವೀಕರಿಸಲು ಏಕೆ ಒಪ್ಪುತ್ತಿಲ್ಲ? ಇದಕ್ಕೆ ಗಣಧರನ ಉತ್ತರ; ಮೊದಲು ನೀನು ಭೋಗಾಸಕ್ತಿಯ ಬಗ್ಗೆ ಅತ್ಯಂತ ಅಭಿರುಚಿಯುಳ್ಳವನಾಗಿದ್ದೆ. ಹಾಗೂ ಗಾಢ ಮಿಥ್ಯಾತ್ವ ನಿನ್ನಲ್ಲಿಯೂ ಇತ್ತು. ನೀನೂ ದುಶ್ಚರಿತ್ರ ಕಾರ್ಯಗಳನ್ನು ಕೈಗೊಂಡಿದ್ದೆ ಹಾಗೂ ಆರಂಭ ಸಹ ಮಾಡಿದ್ದೆ. ಇದರಿಂದ ಉಂಟಾದ ತೀವ್ರತರ ಪಾಪ ನಿನ್ನನ್ನು ಬಂಧಿಸಿತು. ಅದರಿಂದ ನಿನ್ನ ನರಕದ ಆಯಸ್ಸು ಬಂಧಿಸಲ್ಪಟ್ಟಿತ್ತು.

ದೇವಯುಗವನ್ನು ಬಿಟ್ಟು ಬೇರೆ ಯಾವುದೇ ಆಯಸ್ಸನ್ನು ಯಾರಾದರೂ ಹೊಂದಿದ್ದರೆ ಅವರಿಗೆ ವ್ರತಗ್ರಹಣ ಮಾಡುವ ಯೋಗ್ಯತೆ ಇರುವುದಿಲ್ಲ. ಆದರೆ ಅಂತಹ ಜೀವ ಸಮ್ಯಗ್ ದರ್ಶನವನ್ನು ಹೊಂದಲು ಅರ್ಹವಾಗಿರುತ್ತದೆ. ಈ ಕಾರಣ

ದಿಂದಲೆ ನಿನ್ನಲ್ಲಿ ಸಮ್ಯಕ್ತ್ವ ಉಂಟಾಗಿದೆ ಮತ್ತು ವ್ರತಧಾರಣೆ ಮಾಡಲು ಸಾಧ್ಯವಾಗಿಲ್ಲ.

ಸರ್ವನಿಧಾಯ ತಚ್ಚಿತ್ತೇ ಶ್ರದ್ಧಾ ಭೂನ್ಮಹತೀಮತೇ ।
ಜೈನೇ ಕುತಸ್ತಥಾಪಿ ಸ್ಯಾನ್ನ ಮೇವ್ರತ ಪರಿಗ್ರಹಃ ॥
ಇತ್ಯನು ಶ್ರೇಣಿಕ ಪ್ರಶ್ನಾದವಾದೀದ್ ಗಣನಾಯಕಃ ।
ಭೋಗ–ಸಂಜನನಾದ್ವಾಢ–ಮಿಥ್ಯಾತ್ವಾನುಭವೋದಯಾತ್ ॥
ದುಶ್ಚರಿತ್ರಾನ್ಮಹಾರಂಭಾತ್ಸಂಚಿತೈನಾಂ ನಿಕಾಚಿತಮ್ ।
ನಾರಕಂ ಬದ್ಧವಾನಾಯುಸ್ತ್ವಂ ಪ್ರಾಗೇವಾತ್ರ ಜನ್ಮನಿ ॥
ಬದ್ಧದೇವಾಯುಷೋನ್ಯಾಯುರ್ನಾಂಗೀ ಸ್ವೀಕುರುತೇ ವ್ರತಂ ।
ಶ್ರದ್ಧಾನಂ ತು ಸಮಾಧತ್ತೇ ತಸ್ಮಾತ್ತ್ವಂ ನಾಗ್ರಹೀರ್ವ್ರತಂ ॥
(ಉತ್ತರಪುರಾಣ 74, 433–33)

ಭಗವಾನ್ ಮಹಾವೀರರು ನಿರ್ವಾಣ ಹೊಂದಿದ ಮೇಲೆ ಚತುರ್ಥಕಾಲದ ಅವಧಿಗೆ ಕೇವಲ ಮೂರುವರ್ಷ, ಎಂಟು ತಿಂಗಳು, ಹದಿನೈದು ದಿನಗಳು ಬಾಕಿ ಇರುವಾಗ ನಿನ್ನ ಮೃತ್ಯು ಸಂಭವಿಸುತ್ತದೆಯೆಂಬುದನ್ನು ಗೌತಮಗಣಧರನು ರಾಜ ಶ್ರೇಣಿಕನಿಗೆ ತಿಳಿಸುತ್ತಾನೆ. ರಾಜ ಶ್ರೇಣಿಕನ್ನು ಸಮ್ಯಕ್ತ್ವದಲ್ಲಿ ಎಷ್ಟು ದೃಢನಾಗಿದ್ದನೆಂದರೆ ಸುರೇಂದ್ರನು ಸಹ ಅವನನ್ನು ಬಹುತರವಾಗಿ ಪ್ರಶಂಸಿಸುತ್ತಾನೆ. ಆದರೆ ಇದರಿಂದ ತೃಪ್ತನಾಗದ ಒಬ್ಬ–ದೇವತೆ ಇವನನ್ನು ಪರೀಕ್ಷಿಸಲು ಬರುತ್ತಾನೆ. ಒಂದು ದಿನ ರಾಜ ಯಾವುದೊ ಕಾರ್ಯಾರ್ಥದ ಮೇಲೆ ಹೋಗುತ್ತಿರಲು ಆಗ ಈ ದೇವತೆಯು ಮುನಿವೇಷ ಧರಿಸಿಕೊಂಡು ಬಲೆಯನ್ನು ಬೀಸಿ ಮೀನು ಹಿಡಿಯುವ ಯತ್ನ ಮಾಡುತ್ತಾನೆ. ಆಗ ರಾಜನು ಮುನಿಗಳನ್ನು ಕಂಡು ವಂದಿಸಿ ನಿಮ್ಮ ಪಾದ ಕಮಲಗಳಲ್ಲಿ ಈ ಸೇವಕ ಉಪಸ್ಥಿತನಿದ್ದಾನೆ ಎಂದು ಬಿನ್ನವಿಸಿಕೊಂಡು ಏಕೆ ಈ ಅಧರ್ಮಕಾರ್ಯ ಕೈಗೊಂಡಿದ್ದೀರಿ ಎಂದು ಪ್ರಶ್ನಿಸುತ್ತಾನೆ. ಹಾಗೂ ಒಂದು ವೇಳೆ ನಿಮಗೆ ಮೀನಿನ ಆವಶ್ಯಕತೆಯಿದ್ದಲ್ಲಿ ನಾನು ಅವುಗಳನ್ನು ಹಿಡಿದುಕೊಡುತ್ತೇನೆ ಎನ್ನುತ್ತಾನೆ. ಆಗ ಆ ದೇವ "ಹಾಗೇನಿಲ್ಲ, ಸಾಕು. ಇಷ್ಟು ಹೆಚ್ಚಿನ ಮೀನು ಹಿಡಿಯುವ ಅಗತ್ಯ ನನಗೀಗ ಇಲ್ಲ" ಎಂದು ಹೋಗುತ್ತಾನೆ. ಈ ವಿಷಯ ನಗರದಲೆಲ್ಲಾ ಹರಡಿ ಎಲ್ಲರೂ ಜೈನಧರ್ಮವನ್ನು ನಿಂದಿಸುವ ಯತ್ನಮಾಡುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ರಾಜ ತನ್ನದೇ ಆದ ಒಂದು ದೃಷ್ಟಾಂತವನ್ನು ತನ್ನ ಸಭೆಗೆ ತೋರಿಸಿಕೊಡುತ್ತಾನೆ. ಅದೇನೆಂದರೆ, ಒಮ್ಮೆ ರಾಜ ತನ್ನ ಸಭೆಯ ರಾಜಪುತ್ರರನ್ನೆಲ್ಲ ಕರೆಸಿ ಅವರಿಗೆ ತನ್ನ ಜೀವನ ವೃತ್ತಾಂತದ ಪ್ರತಿಗಳನ್ನು ರಾಜಮುದ್ರೆಯಿಂದ ಅಲಂಕೃತಗೊಳಿಸಿ ಹಾಗೂ ಅದರ ಜೊತೆಯಲ್ಲಿಯೇ ಅವುಗಳನ್ನು ಮಲಿನಗೊಳಿಸಿ ಎಲ್ಲರಿಗೂ ಹಂಚುತ್ತಾನೆ. ಅವರೆಲ್ಲರೂ ಅದನ್ನು ಶಿರಸಾ ವಹಿಸಿ ಸ್ವೀಕರಿಸುತ್ತಾರೆ. ರಾಜ ಅದಕ್ಕೆ ಕಾರಣ ಕೇಳಿದಾಗ ಅವರುಗಳು "ಸಚೇತನ ಜೀವ ಮಲೀನ ಶರೀರದಿಂದ ಲಿಪ್ತವಾಗಿದ್ದರೂ ಸಹ ಅದು ವಂದನೀಯ

ವಾಗಿರುತ್ತದೆ. ಅದೇ ರೀತಿಯಲ್ಲಿ ತಮ್ಮ ಈ ಪತ್ರ ಮಲೀನಗೊಳಿಸಲ್ಪಟ್ಟಿದ್ದರೂ ಅದು ನಮಗೆ ಪೂಜ್ಯನೀಯವಾಗಿರುತ್ತದೆ" ಎನ್ನುತ್ತಾರೆ. ಆಗ ಇವರ ಮಾತುಗಳನ್ನು ಕೇಳಿದ ರಾಜನು ಇದನ್ನೇ ಆಧಾರವಾಗಿಟ್ಟುಕೊಂಡು, ಮುನಿಗಳಿಂದ ಆದ ಹಗರಣಕ್ಕೆ ಸಂಬಂಧಿಸಿದ ಹಾಗೆ ಈ ರೀತಿ ಉತ್ತರಿಸುತ್ತಾನೆ "ಧರ್ಮಮುದ್ರೆಯನ್ನು ಧರಿಸಿರುವ ಮುನಿಗಳು ಸಹ ತಪ್ಪನ್ನು ಮಾಡಿದರೆ, ಅವರನ್ನು ವಿನಯಪೂರ್ವಕವಾಗಿ ಭಕ್ತಿಯಿಂದ ಕಾಣಬೇಕೇ ಹೊರತು ದ್ವೇಷ ಅಸೂಯೆಯಿಂದಲ್ಲ". ರಾಜನ ನಡವಳಿಕೆಯ ಈ ಒಂದು ದೃಷ್ಟಾಂತವನ್ನು ಕಂಡ ಆ ದೇವತೆ ಪ್ರಸನ್ನನಾಗಿ, ರಾಜನಿಗೆ ಉತ್ತಮ ಹಾರವೊಂದನ್ನು ಅನುಗ್ರಹಿಸಿ ಸ್ವರ್ಗಕ್ಕೆ ತೆರಳುತ್ತಾನೆ. ಈ ಒಂದು ಕಥೆ, ಶ್ರೇಣಿಕ ರಾಜ ಜೈನ ಧರ್ಮ ಸ್ವೀಕರಿಸಿದ ನಂತರ ಆತನಲ್ಲಿ ಶ್ರದ್ಧೆ ಹೆಚ್ಚು ಹೆಚ್ಚಾಗಿ ಬೆಳೆಯಿತು ಎನ್ನುವುದಕ್ಕೆ ಸಾಕ್ಷೀಭೂತವಾಗಿದೆ.

### (ಗ) ಶ್ರೇಣಿಕಸುತ ಅಭಯಕುಮಾರ*

ಶ್ರೇಣಿಕ ರಾಜಕುಮಾರನಾಗಿದ್ದ ಸಮಯದಲ್ಲಿ ಮತ್ತು ರಾಜ್ಯದ ನಿರ್ವಾಸಿತನಾಗಿ ಚಿಲಾತಪುತ್ರನ ರಾಜ್ಯಭಾರ ಕಾಲದಲ್ಲಿ ಕಾಂಚೀಪುರದಲ್ಲಿ ವಾಸಿಸುತ್ತಿದ್ದಾಗ ಬ್ರಾಹ್ಮಣ ಕನ್ಯೆ ಅಭಯಮತಿಯೊಂದಿಗೆ ವಿವಾಹವಾಗುತ್ತದೆ. ಈ ದಂಪತಿಗಳಿಂದ ಅಭಯ ಕುಮಾರನ ಜನನವಾಗುತ್ತದೆ. ಈತ ಅತ್ಯಂತ ವಿಲಕ್ಷಣ ಬುದ್ಧಿಯುಳ್ಳವ. ಈತನೆ ತನ್ನ ಚತುರ ಬುದ್ಧಿಯಿಂದ ತಂದೆಯ ಮನೋಭಿಲಾಷೆಯನ್ನು ಅರಿತು ಚೇಲನಾದೇವಿಯನ್ನು ವಿವಾಹ ಮಾಡುತ್ತಾನೆ. ಇವನು ಶ್ರೇಣಿಕನೊಂದಿಗೆ ಮಹಾವೀರರ ಸಮವಸರಣಕ್ಕೆ ಹೋಗುತ್ತಾನೆ. ಇವನು ಕೇವಲ ಧೃಡ ಸಮ್ಯಕ್ತ್ವ ಹೊಂದಿರುವನಷ್ಟೇ ಅಲ್ಲ, ಧರ್ಮವನ್ನು ಚೆನ್ನಾಗಿ ಅರಿತವನೂ ಆಗಿರುತ್ತಾನೆ. ಸ್ವಯಂ ರಾಜಶ್ರೇಣಿಕನೆ ಇವನಿಂದ ಧರ್ಮ ಬೋಧೆಯನ್ನು ಕೆಲವು ಸಂದರ್ಭಗಳಲ್ಲಿ ಪಡೆಯುತ್ತಾನೆ. ಕೊನೆಯಲ್ಲಿ ಅಭಯಕುಮಾರನೂ ಮುನಿದೀಕ್ಷೆಯನ್ನು ಪಡೆದು ಮೋಕ್ಷಗಾಮಿಯಾಗುತ್ತಾನೆ. (ಉತ್ತರ ಪುರಾಣ 74, 526-27 ಇತ್ಯಾದಿ)

### (ಘ) ಶ್ರೇಣಿಕಸುತೆ ವಾರಿಷೇಣ

ಈ ಮೊದಲೇ ಹೇಳಿದಂತೆ ರಾಜ ಶ್ರೇಣಿಕನ ಮದುವೆ ಚೇಲನಾದೇವಿಯೊಂದಿಗೆ ಮುಪ್ಪಿನಲ್ಲಿ, ಅದೂ ಅವನ ಮಗ ಅಭಯಕುಮಾರನ ಪ್ರಯತ್ನದಿಂದಾಗಿ ಜರುಗುತ್ತದೆ. ಈ ಚೇಲನಾದೇವಿಯೂ ವಾರಿಷೇಣ ಎಂಬ ಮಗನಿಗೆ ಜನ್ಮವೀಯುತ್ತಾಳೆ. ಅವನು ಬಾಲ್ಯಾವಸ್ಥೆಯಿಂದಲೇ ಧಾರ್ಮಿಕ ಪ್ರವೃತ್ತಿಯುಳ್ಳವನಾಗುತ್ತಾನೆ ಮತ್ತು ಉತ್ತಮ ಶ್ರಾವಕರ ರೀತಿಯಲ್ಲಿ ನಿಯಮಾನುಸಾರವಾಗಿ ಸ್ಮಶಾನಕ್ಕೆ ಹೋಗಿ

---

* ಈತನ ಬಗ್ಗೆ ಪಡ್ಡಾರಾಧನೆಯ ಕತೆಯಲ್ಲಿ ಪ್ರಸ್ತಾಪ ಬಂದಿದೆ.

ಪ್ರತಿಮಾಯೋಗವನ್ನು ಮಾಡುತ್ತಿದ್ದನು. ಒಮ್ಮೆ ವಿದ್ಯುಚ್ಚರನೆಂಬ ಅಂಜನಸಿದ್ಧ ಚೋರನು ತನ್ನ ಪ್ರೇಯಸಿ ಗಣಿಕಾಸುಂದರಿಯನ್ನು ಪ್ರಸನ್ನಪಡಿಸಲು ರಾಜಭವನಕ್ಕೆ ನುಗ್ಗಿ ಚೇಲನದೇವಿಯ ಹಾರವನ್ನು ಅಪಹರಿಸುತ್ತಾನೆ. ಆದರೆ ಅದನ್ನು ಅವನು ತನ್ನ ಪ್ರಿಯತಮೆಯ ಬಳಿಗೆ ತೆಗೆದುಕೊಂಡು ಹೋಗಿ ಕೊಡಲು ಆಗುವುದಿಲ್ಲ. ರಾಜಭಟರು ಚಂದ್ರಹಾಸ ಹಾರದ ಹೊಳಪನ್ನು ಅನುಸರಿಸಿ ಅವನನ್ನು ಹಿಂಬಾಲಿಸುತ್ತಾರೆ. ಈ ವಿಷಯವನ್ನು ತಿಳಿದು ಕಳ್ಳ ಸ್ಮಶಾನದಲ್ಲಿ ಧ್ಯಾನಾರೂಢನಾಗಿದ್ದ ವಾರಿಷೇಣ ಕುಮಾರನ ಬಳಿ ತಂದು ಬಿಸುಟು ತಲೆಮರೆಸಿಕೊಳ್ಳುತ್ತಾನೆ. ರಾಜಭಟರು ಹಾರದ ಸೂಚನೆಯನ್ನು ರಾಜನಿಗೆ ತಲುಪಿಸುತ್ತಾರೆ. ರಾಜನು ವಾರಿಷೇಣನನ್ನು ಕಳ್ಳನೆಂದು ಭ್ರಮಿಸಿ ಕ್ರೋಧವಶದಿಂದ ಮರಣ ದಂಡನೆಯನ್ನು ವಿಧಿಸುತ್ತಾನೆ. ಆದರೆ ವಾರಿಷೇಣನ ಧರ್ಮ–ಪ್ರಭಾವದಿಂದ ಅವನ ಮೇಲೆ ರಾಜಭಟರ ಅಸ್ತ್ರ ಶಸ್ತ್ರಗಳು ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಇವನ ಈ ದಿವ್ಯ ಪ್ರಭಾವವನ್ನು ಮನಗಂಡ ರಾಜನು ಅವನನ್ನು ಅರಮನೆಗೆ ಕರೆದೊಯ್ಯುವ ಯತ್ನ ನಡೆಸುತ್ತಾನೆ. ಆದರೆ ಇದನ್ನು ಅವನು ನಿರಾಕರಿಸಿ ಮಹಾವ್ರತಿಯಾಗಿ ಪಲಾಸಖೇಡ ಎಂಬ ಗ್ರಾಮಕ್ಕೆ ಭಿಕ್ಷೆಯ ನಿಮಿತ್ತವಾಗಿ ಹೋಗಿ ತನ್ನ ಒಬ್ಬ ಬಾಲ್ಯ ಸ್ನೇಹಿತನನ್ನೂ ಸಹ ಮುನಿಯನ್ನಾಗಿ ಮಾಡುತ್ತಾನೆ. ಒಮ್ಮೆ ಆತನಿಗೆಮನಸ್ಸು ಚಂಚಲಚಿತ್ತತೆಯಿಂದ ಕದಡಿ ಹೆಂಡತಿಯ ಕಡೆ ಹರಿದಾಡಲು ವಾರಿಷೇಣ ಅವನನ್ನು, ತನ್ನ ತಾಯಿ ಚೇಲನಾದೇವಿಯ ಮಹಲಿಗೆ (ಅಂತಃಪುರಕ್ಕೆ) ಕರೆದೊಯ್ದು ಅಲ್ಲಿ ತನ್ನ ನಿರಾಸಕ್ತ ಭಾವನೆಯ ಮೂಲಕ, ಅವನನ್ನು ಪುನಃ ಮುನಿ ವ್ರತದಲ್ಲಿ ದೃಢತೆಯಿಂದಿರುವಂತೆ ಮಾಡುತ್ತಾನೆ.

### (ಆ) ಶ್ರೇಣಿಕಸುತೆ_ಗಜಕುಮಾರ *

ಈ ಶ್ರೇಣಿಕ ರಾಜನಿಗೆ ಧನಶ್ರೀ ಎಂಬ ಮತ್ತೊಬ್ಬ ಹೆಂಡತಿಯಿರುತ್ತಾಳೆ. ಅವಳಿಗೆ ಐದು ತಿಂಗಳು ತುಂಬಿರುವಾಗ ವಿಚಿತ್ರ ಬಯಕೆ ಉಂಟಾಗುತ್ತದೆ; ಆಕಾಶ ಮೇಘಾಚ್ಛಾದಿತವಾಗಿ, ಮಂದ ಮಂದವಾಗಿ ಮಳೆ ಬರುತ್ತಿರುವಂತೆ ತನ್ನ ಪತಿಯೊಡಗೂಡಿ ಆನೆಯ ಮೇಲೆ ಸವಾರಿ ಹೊರಟು ಸಕಲ ಪರಿವಾರದೊಂದಿಗೆ ವನಕ್ಕೆ ಪ್ರವೇಶಿಸಿ ಕ್ರೀಡಿಸಬೇಕೆಂಬ ಬಯಕೆ. ಆದರೆ ಆ ಸಮಯದಲ್ಲಿ ಮಳೆಗೆ ತಕ್ಕ ವಾತಾವರಣವಿಲ್ಲದಿದ್ದರೂ ಸಹ. ಅಭಯಕುಮಾರ ತನ್ನ ಒಬ್ಬ ವಿದ್ಯಾಧರ ಸ್ನೇಹಿತನ ನೆರವನ್ನು ಪಡೆದು ತನ್ನ ಮಲತಾಯಿಯ ಬಯಕೆಯನ್ನು ಪೂರೈಸುತ್ತಾನೆ. ಮುಂದೆ ಎಲ್ಲವೂ ಸುಸೂತ್ರವಾಗಿ ನಡೆದು ಧನಶ್ರೀ ಗಜಕುಮಾರನೆಂಬ ಮಗನಿಗೆ ಜನ್ಮ ವೀಯುತ್ತಾಳೆ. ಬಾಲ್ಯ ಕಳೆದು ಯೌವನದಲ್ಲಿ ಕಾಲಿಟ್ಟ ಸಮಯದಲ್ಲಿ ಒಂದು ದಿನ ಅವನು ಮಹಾವೀರನಿಗೆ ಶರಣಾಗಿ, ಧರ್ಮೋಪದೇಶವನ್ನು ಪಡೆದು ದೀಕ್ಷೆ

* ಈತನ ಕಥೆಯೂ ಕನ್ನಡ ವಡ್ಡಾರಾಧನೆಯಲ್ಲಿ ಇದೆ.

ಯನ್ನು ಹೊಂದುತ್ತಾನೆ. ಒಮ್ಮೆ ಗಜಕುಮಾರ ಮುನಿ ಸಂಚರಿಸುತ್ತಾ ಕಳಿಂಗ ದೇಶವನ್ನು ತಲುಪುತ್ತಾನೆ. ಅಲ್ಲಿ ಆ ದೇಶದ ರಾಜಧಾನಿಯಾದ ದಂತಿಪುರದ ಪಶ್ಚಿಮ ದಿಕ್ಕಿನಲ್ಲಿ ಹೋಗಿ ಒಂದು ಹೆಬ್ಬಂಡೆಯ ಮೇಲೆ ಕುಳಿತು ಆತಾಪನಯೋಗ ಪ್ರಾರಂಭಿಸುತ್ತಾನೆ. ಅಲ್ಲಿನ ರಾಜನಿಗೆ ಈ ತಪಸ್ಸಿನ ಪರಿಜ್ಞಾನ ಇಲ್ಲವಾಗಿ ತನ್ನ ಮಂತ್ರಿಯನ್ನು ಕೇಳಲು, ಆ ಬುದ್ಧದಾಸನೆಂಬ ಮಂತ್ರಿ ಜೈನ ವಿರೋಧಿಯಾಗಿದ್ದರಿಂದ 'ಆತ ತನಗೆ ಬಂದಿರುವ ವಾತ ರೋಗದಿಂದ ಮುಕ್ತನಾಗಲು ಈ ರೀತಿಯನ್ನು ನಡೆಸಿದ್ದಾನೆ' ಎಂದು ಉತ್ತರವೀಯುತ್ತಾನೆ. ಕರುಣೆಯಿಂದ ರಾಜ 'ಆತನನ್ನು ಆ ರೋಗದಿಂದ ಪಾರುಮಾಡಲು ನಮ್ಮಿಂದೇನಾದರೂ ಸಾಧ್ಯವೇ' ಎಂದು ವಿಚಾರಿಸಲಾಗಿ ಆ ವ್ಯಕ್ತಿ ನಗರಕ್ಕೆ ಭಿಕ್ಷೆ ಹೊರಟ ಸಂದರ್ಭದಲ್ಲಿ ಈ ಬಂಡೆಯನ್ನು ಚೆನ್ನಾಗಿ ಕಾಯಿಸಿದಲ್ಲಿ ಮತ್ತೆ ಬಂದು ಕುಳಿತಾಗ ಕುಳಿತ ವ್ಯಕ್ತಿಯ ಪ್ರಭಂಜನವಾಯುವು ಉಪಶಾಂತವಾಗಿ ಮುಕ್ತನಾಗುತ್ತಾನೆ ಎಂದು ಉತ್ತರವೀಯುತ್ತಾನೆ, ಮಂತ್ರಿ. ಇದನ್ನು ಆಲಿಸಿದ ರಾಜ ತನ್ನ ಆಜ್ಞೆಯಿಂದ ಹಾಗೆಯೇ ಮಾಡಲು, ಭಿಕ್ಷೆಯಿಂದ ಮರಳಿದ ಗಜಕುಮಾರನು ಬಂಡೆಯನ್ನೇರಿ ಕುಳಿತುಕೊಳ್ಳಲು, ಆ ಬಂಡೆಯ ತಾಪದಿಂದಾಗಿ ಉಪಸರ್ಗವನ್ನು ಸಹಿಸಿ ಮೋಕ್ಷಗಾಮಿಯಾಗುತ್ತಾನೆ. ಮುಂದೆ ಅಲ್ಲಿಗೆ ದೇವನ ಆಗಮಾನವಾಗಿ ಮಂತ್ರಿ ರಾಜ ಹಾಗೂ ಸಹಸ್ರಾರು ಜನರು ಜೈನ ಧರ್ಮ ದೀಕ್ಷೆಯನ್ನು ಪಡೆಯುತ್ತಾರೆ.

### (ಚ) ಕೌಶಾಂಬಿಯ ರಾಜ ಶತಾನೀಕ ಅಥವಾ ಉದಯನ ಹಾಗೂ ಉಜ್ಜಯನಿಯ ರಾಜ ಚಂಡಪ್ರದ್ಯೋತ

ಚಂದನಳ ಪ್ರಸಂಗದಲ್ಲಿ ಹೇಳಲ್ಪಟ್ಟಿರುವಂತೆ ವೈಶಾಲಿ ರಾಜ ಚೇಟಕನ ಏಳು ಜನ ಪುತ್ರಿಯರಲ್ಲಿ ಒಬ್ಬಳಾದ ಮೃಗಾವತಿ ಎನ್ನುವವಳು ಸೋಮವಂಶದ ರಾಜನಾದ ಶತಾನೀಕನನ್ನು ವಿವಾಹವಾಗಿದ್ದಳು. ಇದರ ರಾಜಧಾನಿ ಇಲಾಹಾಬಾದಿಗೆ 35 ಮೈಲಿ ದಕ್ಷಿಣ-ಪಶ್ಚಿಮ ದಿಕ್ಕಿಗೆ ಈಗ ಕೋಸಲ ಎಂಬ ಗ್ರಾಮವಿರುವೆಡೆಯಲ್ಲಿ ಇತ್ತೆಂದು ತಿಳಿಯುತ್ತದೆ. ಈ ಕೌಶಾಂಬಿಗೆ ಒಮ್ಮೆ ಮಹಾವೀರರು ಬಂದಿದ್ದಾಗ ಚಂದನ ಆಹಾರವೀಯುತ್ತಾಳೆ. ಆಗ ರಾಣಿಯಾಗಿದ್ದ ಮೃಗಾವತಿ ಬಂದು ತನ್ನ ಹತಭಾಗಿನಿಯನ್ನು ಅಭಿನಂದಿಸುತ್ತಾಳೆ. ಈಕೆಯ ಪತಿ ಶತಾನೀಕ. ಇವನ ಮಗ ಉದಯ. ಇವನ ವಿವಾಹ ಉಜ್ಜಯನಿಯ ರಾಜನಾದ ಚಂಡ ಪ್ರದ್ಯೋತನ ಮಗಳಾದ ವಾಸವದತ್ತೆಯೊಡನೆ ಆಗುತ್ತದೆ. ಬೌದ್ಧ ಸಾಹಿತ್ಯದ ಪರಂಪರೆಯ ಅನುಗುಣವಾಗಿ ಉದಯನನ ಮತ್ತು ಬುದ್ಧನ ಜನ್ಮ ಒಂದೇ ದಿನದಲ್ಲಿ ಆಯಿತೆಂದು ತಿಳಿಯುತ್ತದೆ. ಸದೃಢ ಜೈನ ಪರಂಪರೆಯನುಗುಣವಾಗಿ ಪ್ರದ್ಯೋತನ ಮರಣದ ನಂತರ ಅವನ ಮಗ ಪಾಲಕನು ರಾಜ್ಯಾಭಿಷೇಕ ಹೊಂದಿದ ರಾತ್ರಿಯಲ್ಲಿ ಮಹಾವೀರರ ನಿರ್ವಾಣ ಹೊಂದುತ್ತಾನೆ. ಈ ರೀತಿಯಾಗಿ ಈ ಉಲ್ಲೇಖಗಳು ಇಬ್ಬರು ಮಹಾಪುರುಷರುಗಳ ಬಗ್ಗೆ

ಸಮಸಾಮಯಿಕತ್ವ ಹಾಗೂ ತಾತ್ಕಾಲಿಕ ರಾಜನೈತಿಕ ಸ್ಥಿತಿಗಳ ಬಗ್ಗೆ ಸಾಕಷ್ಟು ಬೆಳಕನ್ನು ಬೀರುತ್ತವೆ.

## 14. ಮಹಾವೀರರ ಜೀವನ ಚರಿತ್ರೆ ವಿಷಯಕ್ಕೆ ಸಂಬಂಧಿಸಿದ ಹಾಗೆ ಸಾಹಿತ್ಯದ ವಿಕಾಸ

### (ಅ) ಪ್ರಾಕೃತದಲ್ಲಿ ಮಹಾವೀರ–ಸಾಹಿತ್ಯ

ಭಗವಾನ್ ಮಹಾವೀರ ನಿರ್ವಾಣ ಸನ್ ಇ. 557 ವರ್ಷ ಪೂರ್ವದಲ್ಲಿ ಆಯಿತು, ಮತ್ತು ಅಂದಿನಿಂದಲೇ ಅವರ ಜೀವನ ಚರಿತ್ರೆಗೆ ಸಂಬಂಧಿಸಿದ ಹಾಗೆ ವಿಷಯ ಸಂಗ್ರಹಿಸುವ, ಕಲೆಹಾಕುವ ಕಾರ್ಯ ಆರಂಭವಾಯಿತು. ಇಂದ್ರ ಭೂತಿ ಗೌತಮನು ಭಗವನರ ಮುಖ್ಯ ಶಿಷ್ಯನಾಗಿದ್ದ. 'ಧವಲ' ಗ್ರಂಥ ಕರ್ತೃವಾದ ವೀರಸೇನನ ಪ್ರಕಾರ ಇವನು ನಾಲ್ಕು ವೇದಗಳನ್ನು ಆರು ಅಂಗಗಳನ್ನು ಅರಿತ, ಶೀಲದಿಂದ ಕೂಡಿದ, ಉತ್ತಮ ಬ್ರಾಹ್ಮಣನಾಗಿದ್ದನು. ಇಂತಹ ಉತ್ತಮ ಪಂಡಿತನಾದ ಗೌತಮನಿಗೆ ತನ್ನ ಗುರುಗಳ ಜೀವನ ಹಾಗೂ ಉಪದೇಶಗಳನ್ನು ಸಂಗ್ರಹಿಸುವ ಕಾರ್ಯ ಸಹಜ ಸ್ವಾಭಾವಿಕವಾಗಿಯೇ ಬಂದಿತ್ತು. ಅವನು ಮಹಾವೀರರ ಬಗ್ಗೆ ತನಗೆ ತಿಳಿದ ಎಲ್ಲ ವಿಚಾರಗಳನ್ನು ಹನ್ನೆರಡು ಸಂಕಲನದ ರೂಪದಲ್ಲಿ ಹೊರತಂದನು. ಇದನ್ನೇ 'ದ್ವಾದಶ ಗಣಿಪಿಟಕ ಎಂಬುದಾಗಿ ಸಹ ಕರೆಯಲಾಗುತ್ತದೆ. ಇದರ ಹನ್ನೆರಡನೆಯ ಅಂಗ ದೃಷ್ಟಿವಾದದಲ್ಲಿ ಒಂದು ಅಧಿಕಾರ ಪ್ರಥಮಾನುಯೋಗ ಸಹ ಆಗಿತ್ತು. ಇದರಲ್ಲಿ ಸಮಸ್ತ ತೀರ್ಥಂಕರರು ಚಕ್ರವರ್ತಿಗಳು ಮುಂತಾದ ಮಹಾಪುರುಷರ ವಂಶಾವಳಿಯನ್ನು ಪೌರಾಣಿಕ ವಿವರಣೆಯೊಂದಿಗೆ ಸಂಗ್ರಹಿಸಲಾಗಿದೆ. ಅದರಲ್ಲಿ ಮಹಾವೀರ ತೀರ್ಥಂಕರರ ಮತ್ತು ಅವರ ನಾಥ ಅಥವಾ ಜ್ಞಾತೃವಂಶದ ಇತಿಹಾಸವು ಸಹ ಸಮ್ಮಿಲಿತಗೊಂಡಿದೆ.

ನಮ್ಮ ದೌರ್ಭಾಗ್ಯದಿಂದಾಗಿ ಗೌತಮನ ಮೂಲಕ ಸಂಗ್ರಹಿತವಾದ ಆ ಸಾಹಿತ್ಯ ಇಂದು ಅನುಪಲಬ್ಧವಾಗಿದೆ. ಆದರೆ ಆದರ ಒಂದು ಸಂಕ್ಷಿಪ್ತ ವಿವರಣೆ ಉಪಲಬ್ಧವಾಗಿರುವ ಅರ್ಧಮಾಗಧಿ ಸಾಹಿತ್ಯದಲ್ಲಿ ಹರಡಿಕೊಂಡಿರುವುದನ್ನು ಕಾಣುತ್ತೇವೆ. ಸಮವಾಯಾಂಗವೆಂಬ ನಾಲ್ಕನೆಯ ಅಂಗದಲ್ಲಿ ಇಪ್ಪತ್ನಾಲ್ಕು ತೀರ್ಥಂಕರರ ತಂದೆ, ತಾಯಿ, ಜನ್ಮ, ಪ್ರವ್ರಜ್ಯ ಸ್ಥಾನ, ಶಿಷ್ಯವರ್ಗ, ಆಹಾರ–ದಾತ ಮುಂತಾದವರ ಪರಿಚಯ ಮಾಡಿಕೊಡಲಾಗಿದೆ. ಪ್ರಥಮ ಶ್ರುತಾಂಗ ಆಚಾರಾಂಗದಲ್ಲಿ ಮಹಾವೀರರ ತಪಸ್ಸಿನ ಬಗ್ಗೆ ತುಂಬಾ ಮಾರ್ಮಿಕ ವರ್ಣನೆ ದೊರಕುತ್ತದೆ. ಐದನೆಯ ಶ್ರುತಾಂಗ ವ್ಯಾಖ್ಯಾ ಪ್ರಜ್ಞಾಪ್ತಿಯಲ್ಲಿ ಮಹಾವೀರ ಹಾಗೂ ಗೌತಮರಿಗೆ ನಡೆದ ಸಾವಿರಾರು ಪ್ರಶ್ನೋತ್ತರ ಸಂಭಾಷಣೆಯಲ್ಲಿ ಮಹಾವೀರರ ಜೀವನದ ಬಗ್ಗೆ ಹಾಗೂ ತತ್ಕಾಲಿಕ ಅನ್ಯ ಘಟನೆಗಳ ಬಗ್ಗೆ ಅನೇಕ ಸುಳಿವುಗಳು ದೊರೆಯುತ್ತವೆ. ಅವರ

ಸಮಯದಲ್ಲಿ ಪಾರ್ಶ್ವಪತ್ಯರ ಅರ್ಥಾತ್ ಪಾರ್ಶ್ವನಾಥರ ಅನುಯಾಯಿಗಳ ಪ್ರಾಬಲ್ಯ ವಿತ್ತು. ಹಾಗೂ ಆಜೀವಕ ಸಂಪ್ರದಾಯದ ಸಂಸ್ಥಾಪಕ ಮಂಖಲಿ-ಘೋಶಾಲ ರವರು ಇವರ ಸಮಕಾಲೀನರಾಗಿದ್ದರು. ಅದೇ ಸಮಯದಲ್ಲಿ ಮಗಧ ಮತ್ತು ವೈಶಾಲಿ ರಾಜ್ಯಗಳ ನಡುವೆ ವೈಮನಸ್ಯ ಉಂಟಾಗಿ ಯುದ್ಧಗಳು ನಡೆದಿದ್ದವು. ಹಾಗೂ ಅದರಲ್ಲಿ ಮಹಾಶೀಲಾ-ಕಂಟಕ ಹಾಗೂ ರಥ-ಮುಸಲ ಎಂಬ ಹೆಸರಿನ ಯಂತ್ರ ಚಾಲಿತ ಶಸ್ತ್ರಾಸ್ತ್ರಗಳನ್ನು ಬಳಸಲಾಗಿತ್ತು. ಏಳನೆಯ ಅಂಗವಾದ ಉಪಾಸಕಾಧ್ಯಯನದಲ್ಲಿ ಮಹಾವೀರರ-ಜೀವನಕ್ಕೆ ಸಂಬಂಧಿಸಿದ ಹಾಗೆ ವೈಶಾಲಿ ಜ್ಞಾತೃ-ಷಂಡವನ ಕೊಲ್ಲಾಗ ಸನ್ನಿವೇಶ ಕರ್ಮಾರಗ್ರಾಮ, ವಾಣಿಜ್ಯಗ್ರಾಮ, ಮೊದಲಾದ ಸ್ಥಳಗಳ ಉಲ್ಲೇಖ ದೊರೆಯುತ್ತವೆ.

ಇದರಿಂದ ಅವರ ಸ್ಥಳ ನಿರ್ಣಯಿಸುವಲ್ಲಿ ಸಹಾಯವಾಗುತ್ತದೆ. ಒಂಬತ್ತನೆಯ ಶ್ರುತಾಂಗ ಅನುತ್ತರೌಪಪಾತಿಕದಲ್ಲಿ ತೀರ್ಥಂಕರರ (ಸಮ-ಸಾಮಾಯಿಕ) ಸಮ ಕಾಲೀನನಾಗಿದ್ದ ಮಗಧ ರಾಜ ಶ್ರೇಣಿಕನ ರಾಣಿಯರಾದ ಚೇಲನ, ಧಾರಿಣೀ ಮತ್ತು ನಂದಾ ಇವರ ಉಲ್ಲೇಖ, ದೀಕ್ಷೆ ಹೊಂದಿದ ಇಪ್ಪತ್ಮೂರು ರಾಜಕುಮಾರರ ಉಲ್ಲೇಖಗಳು ದೊರೆಯುತ್ತವೆ.

ಮೂಲಸೂತ್ರ ಉತ್ತರಾಧ್ಯಯನ ಮತ್ತು ದಶಾವೈಕಾಲಿಕದಲ್ಲಿ ಮಹಾವೀರರ ಮೂಲ ದಾರ್ಶನಿಕ, ನೈತಿಕ, ಮತ್ತು ಆಚಾರಕ್ಕೆ ಸಂಬಂಧಿಸಿದ ವಿಚಾರಗಳು, ವಿಸ್ತಾರವಾದ ಪರಿಚಯ ನಮಗೆ ದೊರೆಯುತ್ತದೆ. ಕಲ್ಪಸೂತ್ರದಲ್ಲಿ ಮಹಾವೀರರ ಜೀವನದ ವ್ಯವಸ್ಥಿತ ರೂಪ ಸಿಗುತ್ತದೆ. ಈ ಎಲ್ಲವೂ ಅರ್ಧಮಾಗಧಿ ಭಾಷೆಯಲ್ಲಿವೆ.

ಶೌರಸೇನಿ ಪ್ರಾಕೃತದಲ್ಲಿ ಯತಿವೃಷಭನಿಂದ ರಚಿತವಾದ ತಿಲೋಯ ಪಣ್ಣತ್ತಿ (ತ್ರಿಲೋಕ ಪ್ರಜ್ಞಪ್ತಿ) ಗ್ರಂಥ ಬಹಳ ಮಹತ್ವವುಳ್ಳದ್ದಾಗಿದೆ. ಕಾರಣ ಅದರಲ್ಲಿನ ಪ್ರಾಕೃತ ಕಥೆಗಳಲ್ಲಿ ನಮಗೆ ತೀರ್ಥಂಕರರ ಹಾಗೂ ಅನ್ಯ ಶಲಾಕಾಪುರುಷರ ಚರಿತ್ರೆಯ ನಾಮಾವಳಿ ಸಿಗುತ್ತವೆ. ಇದರಲ್ಲಿ ಮಹಾವೀರರ ಜೀವನಕ್ಕೆ ಸಂಬಂಧಿಸಿ ದಂತೆ ಸಮಾಪ್ತಿಯು ಸಂಕ್ಷೇಪವಾಗಿ ನೆನಪಿನಲ್ಲಿಡಬಹುದಾದ ಯೋಗ್ಯ ರೀತಿಯಲ್ಲಿ ದೊರೆಯುತ್ತದೆ. (ಸೋಲಾಪುರ 1952)

ಈ ದೊರೆತ ನಾಮಾವಳಿಯ ಆಧಾರದ ಮೇಲೆ ಮಹಾರಾಷ್ಟ್ರೀ ಪ್ರಾಕೃತ ಮಹಾಕಾವ್ಯ ಪಉಮಚರಿಊದಲ್ಲೂ, ರಾಮಚರಿತ್ರೆಯ ಪೀಠಿಕೆಯ ರೂಪದಲ್ಲಿ ಮಹಾವೀರರ ಸಂಕ್ಷಿಪ್ತ ಜೀವನ ಚರಿತ್ರೆ ನಿರೂಪಿಸಲ್ಪಟ್ಟಿದೆ. (ಭಾವನಗರ 1914 ಸಂಘದಾಸ ಮತ್ತು ಧರ್ಮದಾಸಗಣಿ ಕೃತ ವಾಸುದೇವ-ಹಿಂಡೀ (4-5 ಶತಕ) ಪ್ರಾಕೃತ ಕಥಾ ಸಾಹಿತ್ಯವು ಬಹಳ ಮಹತ್ವವುಳ್ಳದ್ದಾಗಿದೆ. ಇದರಲ್ಲೂ ಸಹ ಅನೇಕ ತೀರ್ಥಂಕರರ ಜೀವನ ಚರಿತ್ರೆಗಳು ಪ್ರಸಂಗಾನುಸಾರವಾಗಿ ಬಂದಿದೆ. ಹಾಗೂ ಇದರಲ್ಲಿ ವರ್ಧಮಾನರ ಕಥೆಯೂ ಸೇರಿದೆ. (ಭಾವನಗರ 1931-32) ಶೀಲಾಂಕ

ರಿಂದ ರಚಿತವಾಗಿರುವ ಚಉಪನ್ನ-ಮಹಾಪುರಿಸ-ಚರಿಯಂ (ವಿ. ಸಂ. 925) ದಲ್ಲೂ ಸಹ ಮಹಾವೀರರ ಜೀವನ ಚರಿತ್ರೆ ಪ್ರಾಕೃತ ಗದ್ಯರೂಪದಲ್ಲಿ ವರ್ಣಿಸಲ್ಪಟ್ಟಿದೆ. (ವಾರಣಾಸಿ 1961)

ಭದ್ರೇಶ್ವರರಿಂದ ರಚಿತವಾಗಿರುವ ಕಹಾವಲಿಯಲ್ಲಿಯೂ ಸಹ (12ನೆ ಶ.) ಎಲ್ಲ ಅರವತ್ತು ಮೂರು ಜನ ಮಹಾಪುರುಷರ (ತ್ರಿಷಷ್ಠಿ ಶಲಾಕಾ ಪುರುಷರ) ಚರಿತ್ರೆ ಸರಳ ಪ್ರಾಕೃತ ಗದ್ಯದಲ್ಲಿ ವರ್ಣಿತವಾಗಿದೆ.

ಪೂರ್ಣರೂಪದಲ್ಲಿ, ಸ್ವತಂತ್ರವಾಗಿ ಪ್ರಬಂಧನ ರೂಪದಲ್ಲಿ ಮಹಾವೀರರ ಚರಿತ್ರೆ ಗುಣಚಂದ್ರಸೂರಿ ಕೃತವಾದ ಮಹಾವೀರ ಚರಿಯಂನಲ್ಲಿ ಪ್ರಕಟವಾಗಿದೆ. (ವಿ.ಸಂ. 1139) ಇದರಲ್ಲಿ ಎಂಟು ಪ್ರಸ್ತಾವನೆ ಭಾಗಗಳಿವೆ. ಮೊದಲ ನಾಲ್ಕರಲ್ಲಿ ಮಹಾವೀರರ ಮರೀಚಿ ಮುಂತಾದ ಪೂರ್ವಭವಗಳ ಸವಿಸ್ತಾರವಾದ ವರ್ಣನೆ ದೊರಕುತ್ತದೆ (ಬೊಂಬಾಯಿ 1939). ಗುಣಚಂದ್ರನ ಸಮಕಾಲೀನದವನೇ ಆದ ದೇವೇಂದ್ರ (ಅಪರನಾಮ ಸೋಮಚಂದ್ರ) ಸೂರಿಯೂ ಸಹ ಮಹಾವೀರ ಚರಿಯಂ ಅನ್ನು ಪೂರ್ಣ ಪ್ರಾಕೃತ ಪದ್ಯರೂಪದಲ್ಲಿ ರಚಿಸಿರುತ್ತಾನೆ. (ವಿ. ಸಂ. 1141) ಇದರಲ್ಲಿ ಮರೀಚಿಯಿಂದ ಹಿಡಿದು ಮಹಾವೀರರವರೆವಿಗೂ ಇಪ್ಪತ್ತಾರು ಭವಗಳ ವರ್ಣನೆಯಿದೆ. ಇದರ ಪದ್ಯಗಳ ಒಟ್ಟು ಸಂಖ್ಯೆ ಸುಮಾರು 2400 ಆಗುತ್ತದೆ. (ಭಾವಾನಗರ ವಿ.ಸಂ. 1973). ಇದರ ಸ್ವಲ್ಪಕಾಲದ ಹಿಂದೆ ಸುಮಾರು 1168 ರ ಹೊತ್ತಿನಲ್ಲಿ ದೇವಭದ್ರ ಗಣಿಯರು ಸಹ 'ಮಹಾವೀರ ಚರಿಯಂ'ನ ರಚನೆಯನ್ನು ಮಾಡಿರುತ್ತಾನೆ.-(ಅಹಮದಾಬಾದ್, 1945)

## (ಜ) ಸಂಸ್ಕೃತದಲ್ಲಿ ಮಹಾವೀರ ಸಾಹಿತ್ಯ

ತತ್ವಾರ್ಥ ಸೂತ್ರವೆ ಮುಂತಾದ ಸೈದ್ಧಾಂತಿಕ ರಚನೆಗಳನ್ನು ಬಿಟ್ಟಲ್ಲಿ ಜೈನ ಸಾಹಿತ್ಯ ಸೃಜನೆಯಲ್ಲಿ ಸಂಸ್ಕೃತ ಭಾಷೆಯ ಉಪಯೋಗ ಬಹಳ ಹಿಂದೆಯೇ ಆಗಿದೆ. [ಸಿದ್ಧಸೇನ ದಿವಾಕರ ತನ್ನ ಐದು ಸ್ತುತಿಗಳನ್ನು ಭಗವಾನ್ ಮಹಾವೀರರನ್ನು ಉದ್ದೇಶಿಸಿಯೆ ರಚಿಸಿದ್ದನೆಂದು ನಾವು ಭಾವಿಸುತ್ತೇವೆ. ಆರಂಭಕಾಲದ ಕಾವ್ಯ ಶೈಲಿಯಲ್ಲಿ ಲಿಖಿತವಾಗಿರುವ ಜಟಿಲ ಅಥವಾ ಜಟಾಚಾರ್ಯನ ವರಾಂಗ ಚರಿತ್ರೆ ಹಾಗೂ ರವಿಷೇಣನ ಪದ್ಮಪುರಾಣ (ಇ.ಸಂ. 676)ದ ಕಥೆ, ಸಂಸ್ಕೃತ ಜೈನ ಸಾಹಿತ್ಯವಿತ್ತೆಂಬುದಕ್ಕೆ ನಿರ್ದೇಶಿಸಬಹುದಾಗಿದೆ. ಈ ಎರಡು ರಚನೆಗಳು ಕುವಲಯ ಮಾಲ ರಚನೆಗಿಂತ ಬಹಳಷ್ಟು ಹಿಂದಿನವುಗಳಾಗಿವೆ.] ತೀರ್ಥಂಕರರ ಜೀವನ ಚರಿತ್ರೆಯ ಮೇಲೆ ಮಹಾಪುರಾಣವೆಂಬ ಹೆಸರಿನಲ್ಲಿ ಸರ್ವಾಂಗ ಸಂಪೂರ್ಣ ರಚನೆ ಜಿನಸೇನ, ಅವನ ಶಿಷ್ಯ ಗುಣಭದ್ರನ ಮೂಲಕ ಸುಮಾರು ಶಕ. ಸಂ. 820ರ ಹೊತ್ತಿಗೆ ಮುಗಿದಿತ್ತು. ಇದರ ಪ್ರಥಮ 47 ಪರ್ವಗಳು ಆದಿಪುರಾಣಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ.

ಅದರಲ್ಲಿ ಪ್ರಥಮ ತೀರ್ಥಂಕರ ಋಷಭದೇವ ಮತ್ತು ಅವನ ಮಗ ಪ್ರಥಮ ಚಕ್ರವರ್ತಿ ಭರತನ ಜೀವನ ಚರಿತ್ರೆ ವರ್ಣಿಸಲ್ಪಟ್ಟಿದೆ. 48 ರಿಂದ 76ರ ವರೆಗಿನ ಪರ್ವಗಳನ್ನು ಉತ್ತರ ಪುರಾಣ ಎಂದು ಕರೆಯಲಾಗಿದೆ. ಇದರ ಪೂರ್ಣ ರಚನೆ ಗುಣಭದ್ರನಿಂದಾಗಿದೆ. ಮತ್ತು ಅದರಲ್ಲಿ ಉಳಿದ ಇಪ್ಪತ್ತುಮೂರು ತೀರ್ಥಂಕರರು ಹಾಗೂ ಅನ್ಯಶಲಾಕಾ ಪುರುಷರ ಜೀವನ ವೃತ್ತಾಂತವಿದೆ. ತೀರ್ಥಂಕರ ಮಹಾವೀರರ ಜನ್ಮ ವೃತ್ತಾಂತ ಕೊನೆಯ ಮೂರು ಸರ್ಗ (74 ರಿಂದ 76) ಗಳಲ್ಲಿ ಸುಂದರ ಪದ್ಯ ರೂಪದಲ್ಲಿ ವರ್ಣಿತವಾಗಿದೆ. ಒಟ್ಟು ಪದ್ಯಗಳ ಸಂಖ್ಯೆ 549+691+578=1818 (ವಾರಣಾಸಿ 1945). ಸುಮಾರು 275 ವರ್ಷಗಳ ನಂತರದಲ್ಲಿ ಇದೇ ರೀತಿಯಲ್ಲಿ ತ್ರಿಷಷ್ಠಿ ಶಲಾಕಾಪುರುಷರ ಚರಿತ್ರೆಗಳ ರಚನೆಯನ್ನು ಹೇಮಚಂದ್ರಾಚಾರ್ಯನು ಹತ್ತು ಪರ್ವಗಳಲ್ಲಿ ಮಾಡಿರುವುದನ್ನು ಕಾಣುತ್ತೇವೆ. ಅದರಲ್ಲಿ ಕೊನೆಯ ಸರ್ಗ ಮಹಾವೀರನಿಗೆ ಸಂಬಂಧಪಟ್ಟದ್ದಾಗಿರುತ್ತದೆ. (ಭಾವನಗರ 1913) ಮೇರುತುಂಗನಿಂದ ಮಹಾಪುರುಷರ ಚರಿತ್ರೆ ಟೀಕೆಯ ಸಹಿತ ರಚಿಸಲ್ಪಟ್ಟಿದೆ. ಒಟ್ಟು ಐದು (5) ಸರ್ಗಗಳಿಂದ ಕೂಡಿದ್ದು—ಋಷಭ, ಶಾಂತಿ, ನೇಮಿ, ಪಾರ್ಶ್ವ ಮತ್ತು ಮಹಾವೀರರ ಚರಿತ್ರೆ ಕ್ರಮವಾಗಿ ವರ್ಣಿತವಾಗಿದೆ. ಈ ರಚನೆಯ ಕಾಲ ಸುಮಾರು ಕ್ರಿ. ಶ. 1300 ಇರಬಹುದು. ಕಾವ್ಯದ ದೃಷ್ಟಿಯಿಂದ ಶಕ ಸಂ. 910ರಲ್ಲಿ ಅಸಗನಿಂದ ರಚಿತವಾಗಿರಬಹುದಾದ 18 ಸರ್ಗಗಳಿಂದ ಕೂಡಿದ ವರ್ಧಮಾನ ಚರಿತ್ರೆ ಉಲ್ಲೇಖನೀಯವಾಗಿದೆ. (ಸೋಲಾಪುರ 1931). ಆದರೆ ಇಲ್ಲಿಯೂ ಸಹ ಪ್ರಥಮ (16) ಹದಿನಾರು ಸರ್ಗಗಳಲ್ಲಿ ಮಹಾವೀರರ ಪೂರ್ವ ಭವಗಳ ವರ್ಣನೆಯು ಇದೆ. ಮತ್ತು ಅವನ ಜೀವನ ವೃತ್ತಾಂತ ಕೊನೆಯ ಎರಡು ಸರ್ಗಗಳಲ್ಲಿ ದೊರೆಯುತ್ತವೆ. ಸಕಲ ಕೀರ್ತಿ ಎಂಬುವರಿಂದ ರಚಿಸಲ್ಪಟ್ಟಿರುವ ವರ್ಧಮಾನ ಚರಿತ್ರೆಯೊಂದು (19) ಹತ್ತೊಂಬತ್ತು ಸರ್ಗಗಳಿಂದ ಕೂಡಿದ್ದು, ಆದರ ರಚನೆ ವಿ. ಸಂ. 1518ರಲ್ಲಿ ಆಗಿದೆ. ಪದ್ಮನಂದಿ, ಕೇಶವ ಮತ್ತು ವಾಣೀವಲ್ಲಭ ಮುಂತಾದವರಿಂದಾಗಿ ಸಂಸ್ಕೃತದಲ್ಲಿ ಮಹಾವೀರರ ಚರಿತ್ರೆ ರಚಿತವಾಗಿದ್ದು ಅವುಗಳ ಉಲ್ಲೇಖ ನಮಗೆ ದೊರೆಯುತ್ತವೆ.

### (a)–ಮಹಾವೀರರ ಜೀವನಕ್ಕೆ ಸಂಬಂಧಿಸಿದ ಅಪಭ್ರಂಶ ಸಾಹಿತ್ಯ

ಈ ಭಾಷೆಯಲ್ಲಿ ಸಮಸ್ತತೀರ್ಥಂಕರರ ಮತ್ತು ಅನ್ಯಶಲಾಕಾಪುರುಷರ ಚರಿತೆಯು ಒಳಗೊಂಡಿರತಕ್ಕ, ಶ್ರೇಷ್ಠ ಕಾವ್ಯ ಗುಣಸಂಪನ್ನವಾದ ರಚನೆಯೆಂದರೆ ಪುಷ್ಪದಂತನ ಮಹಾ ಪುರಾಣ (ಶಕ. ಸಂ. 887). ಇದರಲ್ಲಿ ಒಟ್ಟು 102 ಸಂಧಿಗಳಿವೆ ಹಾಗೂ ಮಹಾವೀರರ ಜೀವನ ಚರಿತ್ರೆ 95 ಸಂಧಿಯಿಂದ ಆರಂಭವಾಗಿ ಕೊನೆಯವರೆವಿಗೂ ವರ್ಣಿತವಾಗಿದೆ. (ಬೊಂಬಾಯಿ 1941). ಸ್ವತಂತ್ರ ರೂಪದಿಂದ ಈ ಚರಿತ್ರೆ ಕವಿ ಶ್ರೀಧರನಿಂದ ರಚಿಸಲ್ಪಟ್ಟಿತ್ತು. ಅವನ ಇನ್ನೊಂದು ರಚನೆಯಾದ 'ಪಾಸಣಾಹ' ಚರಿತ್ರೆಯನ್ನು ಮುಗಿಸಿದ ಕಾಲ ವಿ.ಸಂ. 1189 ರಲ್ಲಿದ್ದಿರಬಹುದೆಂದು ಉಲ್ಲೇಖಿತ

ವಾಗಿದೆ. ಅಂದರೆ ಈ ಪ್ರಸ್ತುತ ಗ್ರಂಥದ (ವೀರಜಿಣಿಂದ ಚರಿಉ) ಕಾಲವನ್ನು ಇದರಿಂದಲೆ ನಿಶ್ಚಯಿಸಬಹುದಾಗಿದೆ. ಶ್ರೀಧರನ ಅಪಭ್ರಂಶ ರಚನೆಯೂ ಸಹ ಈ ಕಾರಣದಿಂದಲೆ ವಿಶೇಷತೆಯನ್ನು ಪಡೆದಿದೆ. ಇದರಲ್ಲಿ ಈತ ತನ್ನನ್ನು ಹರಿಯಾಣ ನಿವಾಸಿ ಎಂದು ಕರೆದುಕೊಂಡಿದ್ದಾನೆ. ಹರಿಯಾಣ 'ಆಭೀರ ಕಾಣಾವ್' ಎನ್ನುವುದರ ಅಪಭ್ರಂಶ ರೂಪ. ಇದರಿಂದ ಸಾಹುಕಾರ ಅಥವಾ ಧನಿಕರ ಮನೆತನದ ಭೂಮಿ ಎಂದು ಅರ್ಥ ಬರುತ್ತದೆ. ಕಾವ್ಯಾದರ್ಶ ಬರೆದ ದಂಡಿ ಆಭೀರರು ಬಳಸುವ ಮಾತಿನಿಂದ, ಅಪಭ್ರಂಶದ ಕಾವ್ಯದ ಶೈಲಿಯು ವಿಕಾಸಿತವಾಯಿತು ಎನ್ನುತ್ತಾನೆ. ಒಟ್ಟಿನಲ್ಲಿ 5 – 6 ನೇ ಶತಮಾನದಿಂದ ಹಿಡಿದು 12ನೇ ಶತಮಾನದವರೆವಿಗೂ ಹರಿಯಾಣದಲ್ಲಿ ಅಪಭ್ರಂಶ ರಚನೆಯ ಪರಂಪರೆ ಬಳಕೆಯಲ್ಲಿತ್ತು ಎನ್ನಬಹುದು. ಶೋಧನೆಗಳಿಂದ ಈ ಪ್ರದೇಶದ ಕವಿಗಳ ಅನ್ಯರಚನೆಗಳನ್ನು ಪತ್ತೆಹಚ್ಚಬಹುದು ಹಾಗೂ ಅವುಗಳ ಆಧಾರದಿಂದ ಆ ಕ್ಷೇತ್ರದ ಭಾಷೆಯ ತುಲನಾತ್ಮಕ ಅಧ್ಯಯನ, ಭಾಷಾಶಾಸ್ತ್ರ ಹಾಗೂ ಐತಿಹಾಸಿಕ ದೃಷ್ಟಿಯಿಂದ ತುಂಬಾ ಮಹತ್ವವುಳ್ಳದ್ದಾಗಿದೆ.

ವಿಕ್ರಮ ಸಂವತ್ಸರ 1500ರ ಹೊತ್ತಿನಲ್ಲಿ ಗ್ವಾಲಿಯರಿನ ತೋಮರ ರಾಜ ಡುಂಗರಸಿಂಹ ಮತ್ತು ಅವನ ಮಗ ಕೀರ್ತಿಸಿಂಹನ ರಾಜ್ಯಕಾಲದಲ್ಲಿ ಕವಿವರ ಯಧುರ ತನ್ನ ಅನೇಕ ರಚನೆಗಳಿಂದ ಅಪಭ್ರಂಶ ಸಾಹಿತ್ಯವನ್ನು ಸಂಪನ್ನಗೊಳಿಸುತ್ತಾನೆ. ಅವನಿಂದ ರಚಿಸಲ್ಪಟ್ಟ ಸಮ್ಮಇ-ಚರಿಉ ಹತ್ತು ಸಂಧಿಗಳಲ್ಲಿ ಪೂರ್ಣವಾಗಿದೆ. ನರಸೇನನಿಂದ ರಚಿಸಲ್ಪಟ್ಟ 'ವಡ್ಡಮಾಣ-ಕಹಾ'ದ ರಚನೆಯ ಕಾಲ ಸರಿಯಾಗಿ ತಿಳಿಯದು. ಆದರೆ ಇದೇ ಕವಿಯ ಇನ್ನೊಂದು ರಚನೆಯಾದ 'ಸಿರಿವಾಲ-ಚರಿಉ' ಗ್ರಂಥದ ಹಸ್ತಲಿಖಿತ ಪ್ರತಿಯೊಂದು ವಿಕ್ರಮ ಸಂವತ್ಸರ 1512ರ ಸಮಯದ್ದೆಂದು ತಿಳಿಯುತ್ತದೆ. ಅಂದರೆ ನರಸೇನನ ಕಾಲ ಇದಕ್ಕಿಂತ ಹಿಂದಿನ ಹಲ್ಲದೆಂದು ತಿಳಿಯುತ್ತದೆ. ಜಯಮಿತ್ರನಿಂದ ರಚಿಸಲ್ಪಟ್ಟಿರುವ ವಡ್ಡಮಾಣ ಕವ್ವ ಎಂಬ ಗ್ರಂಥದ ಒಂದು ಹಸ್ತಲಿಖಿತ ಪ್ರತಿ ವಿ.ಸಂ. 1545ರಲ್ಲಿ ದೊರೆಯುತ್ತದೆ. ಗ್ರಂಥದ ಕೊನೆಯಲ್ಲಿ ಪದ್ಮನಂದಿ ಮುನಿಯ ಉಲ್ಲೇಖ ದೊರಕುತ್ತದೆ. ಇದರಿಂದ ವಿ.ಸಂ. 1385–1450ರಲ್ಲಿದ್ದ ಪ್ರಭಾಚಂದ್ರಭಟ್ಟಾರಕರು ಇವರ ಶಿಷ್ಯರಿರಬಹುದೆಂದು ಅನುಮಾನ ಪಡಬಹುದಾಗಿದೆ. ಕವಿ ತನ್ನ ರಚನೆಯನ್ನು 'ಹೋಮುಲಿವಂ-ಕಣ್ಣಾಭರಣ' ಎಂದು ಕರೆದುಕೊಂಡಿದ್ದಾನೆ. ಹಾಗೂ ಹರಿಇಂದು (ಹರಿಶ್ಚಂದ್ರ) ಕವಿಯನ್ನು ತನ್ನ ಗುರುವೆಂದು ತಿಳಿಸಿದ್ದಾನೆ.

## (b)–ಮಹಾವೀರರ ಜೀವನಕ್ಕೆ ಸಂಬಂಧಿಸಿರುವ ಕನ್ನಡ ಸಾಹಿತ್ಯ

ಸಂಸ್ಕೃತದಲ್ಲಿ ಅಸಗ ಬರೆದ ವರ್ಧಮಾನ ಪುರಾಣದಿಂದ ಅನೇಕ ಕನ್ನಡ ಕವಿಗಳು ಸ್ಫೂರ್ತಿಯನ್ನು ಪಡೆದಿದ್ದಾರೆ. ಅಸಗ ಎಂಬ ಹೆಸರು ಆಗಾಗ್ಗೆ ಅಗಸ ಎಂದು ವರ್ಣಪಲ್ಲಟವಾಗಿ ಬಳಕೆಯಾಗುವುದುಂಟು. ಅಗಸ ಶಬ್ದಕ್ಕೆ ಕನ್ನಡದಲ್ಲಿ ಬಟ್ಟೆ ಒಗೆ

ಯುವವನೆಂಬ ಅರ್ಥವಿದೆ. ಆದರೆ ಅಸಗ ಕವಿಯ ಹೆಸರು ರಜಕನಿಗೆ ಸಂಬಂಧಿಸಿದ್ದಲ್ಲ. ಅದರ ಮೂಲ ರೂಪ ಅಸಂಗ ಎಂದು. ಅಸಂಗ ಅಸಗ ಆಗಿದೆ. ಇತ್ತೀಚಿಗೆ ಎರಡನೇ ನಾಗವರ್ಮ ಬರೆದ ವೀರವರ್ಧಮಾನ ಪುರಾಣದ ಒಂದು ಹಸ್ತಪ್ರತಿ ಸಿಕ್ಕಿ ಪ್ರಕಟಗೊಂಡಿದೆ. ಇದರಲ್ಲಿ (16) ಹದಿನಾರು ಸರ್ಗಗಳಿವೆ. ಮತ್ತು ಇದರಲ್ಲಿ ಮಹಾವೀರರ ಪೂರ್ವ ಭವಗಳು ಹಾಗೂ ಪ್ರಸ್ತುತ ಘಟನೆಗಳ ವರ್ಣನೆಯಿದೆ. ಇದೊಂದು ಚಂಪೂ ಕಾವ್ಯ. ಮತ್ತು ಇದರಲ್ಲಿ ಅನೇಕ ಸಂಸ್ಕೃತ ವೃತ್ತಗಳ ಉಪಯೋಗವಾಗಿದೆ. ಇದರ ಕಾಲ ಸುಮಾರು ಕ್ರಿ. ಶ. 1042. ಇದಕ್ಕೂ ಮೊದಲು (ಸು. 978) ರಚಿತವಾದ ಚಾವುಂಡರಾಯ ಪುರಾಣದಲ್ಲೂ ವರ್ಧಮಾನ ಮಹಾವೀರರ ಪುರಾಣವಿದೆ. ಇದರ ಒಂದು ವಿಶಿಷ್ಟತೆಯೆಂದರೆ ಸಂಸ್ಕೃತದಲ್ಲಿ ರಚಿತವಾಗಿದ್ದು ಈಗ ಅನುಪಲಬ್ಧವಾಗಿರುವ ಕವಿಪರಮೇಶ್ವರ (ಕವಿಪರಮೇಷ್ಠಿ) ಕೃತಿಯಿಂದ ಪದ್ಯಗಳನ್ನು ಉದಾಹರಿಸಿರುವುದು. ಇದಾದನಂತರ ಕರ್ಣಪಾರ್ಯ ಕವಿ (೧೧೫೦) ವೀರೇಶ ಚರಿತೆಯನ್ನು ರಚಿಸಿದ್ದು, ಅದು ಇದುತನಕ ನಮಗೆ ದೊರೆತಿಲ್ಲದಿರುವುದು ಶೋಚನೀಯ. ಆಚಣ್ಣ ಎಂಬುವನು ವರ್ಧಮಾನಪುರಾಣವನ್ನು ಬರೆದಿದ್ದಾನೆ, ಇದಕ್ಕೆ ಸಮಾನ ಸೂಚಕವಾದ ಇನ್ನೊಂದು ಹೆಸರೆಂದರೆ ವಾಣೀವಲ್ಲಭ. ಇದೂ ಸಹ ಚಂಪೂ ಕಾವ್ಯವಾಗಿದ್ದು ಇದರ ರಚನೆಯೂ ಸಂಸ್ಕೃತ ಕಾವ್ಯ ಶೈಲಿಯಲ್ಲಿ ಆಗಿದೆ. ಇದರಲ್ಲಿಯೂ ಸಹ 16 ಸರ್ಗಗಳಿವೆ. ಕವಿ ಇದರಲ್ಲಿ ಕೆಲವು ಅಲಂಕಾರಗಳನ್ನು ಬಳಸಿರುವುದನ್ನು ಕಾಣುತ್ತೇವೆ. ಇದರ ಕಾಲವೂ ಕ್ರಿ.ಶ. ಸುಮಾರು 1195. ಕ್ರಿ. ಶ. ೧೫೦೦ರ ಸುಮಾರಿನಲ್ಲಿ ರಚಿತವಾಗಿರುವ ಏಚಿರಾಜನ ವರ್ಧಮಾನಚರಿತೆ ಸಿಕ್ಕಿಲ್ಲ. ಕ್ರಿ. ಶ. 1527ರಲ್ಲಿ ಪದ್ಮಕವಿ ಎಂಬುವನು ಜನಭಾಷೆಯಲ್ಲಿ ವರ್ಧಮಾನ ಚರಿತ್ರೆಯನ್ನು ಬರೆದಿದ್ದಾನೆ, ಸಾಂಗತ್ಯದಲ್ಲಿದೆ. ಹಾಗೂ ಹನ್ನೆರಡು ಸಂಧಿಗಳಿವೆ (ಸಂಪಾದಕರು : ಬಿ. ಎಸ್. ಸಣ್ಣಯ್ಯ, ಭಾರತೀಯ ಜ್ಞಾನಪೀಠ, 1975) ಇತ್ತೀಚಿಗೆ ಜಿನಸೇನ ದೇಶವ್ರತಿಯೆಂಬ ಕವಿ ಸಾಂಗತ್ಯದಲ್ಲಿ ರಚಿಸಿರುವ 21 ಸಂಧಿಗಳ 3782 ಪದ್ಯಗಳ ಕೃತಿ ಬೆಳಕಿಗೆ ಬಂದಿದೆ.

### (c) ಬೌದ್ಧ ತ್ರಿಪಿಟಕ–ಪಾಲಿ ಸಾಹಿತ್ಯಗಳಲ್ಲಿ ಮಹಾವೀರರು

ಜೈನ ಆಗಮ ಗ್ರಂಥಗಳಲ್ಲಿ ಬುದ್ಧನ ಬಗ್ಗೆ ಯಾವ ಸ್ಪಷ್ಟ ಉಲ್ಲೇಖಗಳೂ ಸಿಗುವುದಿಲ್ಲ. ಆದರೆ ಬೌದ್ಧ ತ್ರಿಪಿಟಕಗಳಲ್ಲಿ 'ನಿಗ್ಗಂಠನಾಥಪುತ್ರ' (ನಿರ್ಗ್ರಂಥ ಜ್ಞಾತೃಪುತ್ರ) ಎಂಬ ಹೆಸರಿನಲ್ಲಿ ಮಹಾವೀರರ ಹಾಗೂ ಅವರ ಉಪದೇಶ ಮುಂತಾದ ಅನೇಕ ವಿಚಾರಗಳನ್ನು ಪಡೆಯುತ್ತೇವೆ. ಈಗ ನೂರುವರ್ಷಗಳ ಹಿಂದೆ ಲಂಡನ್ನಿನಲ್ಲಿ ಪಾಲಿ ಟೆಕ್ಸ್ಟ ಸೊಸೈಟಿ (Pali text Society) ಯಿಂದ Sacred books of the East ಎಂಬ ಮಾಲಿಕೆಯಲ್ಲಿ ಜೈನ ಹಾಗೂ ಬೌದ್ಧ ಗ್ರಂಥಗಳ ಆಗಮ ಮುಂತಾದುವು ಪ್ರಕಟಗೊಂಡಾಗ ಈ ವಿಚಾರ ಬೆಳಕಿಗೆ ಬಂದಿತು. ಡಾ॥ ಹರ್ಮನ್‌ಯಾಕೋಬಿ (Dr. Harmon Yakobi) ಅವರು ಆಚಾರಾಂಗ, ಕಲ್ಪಸೂತ್ರ, ಸೂತ್ರ ಕೃತಾಂಗ

ಉತ್ತರಾಧ್ಯಯನ ಸೂತ್ರಗಳನ್ನು ಅನುವಾದಿಸಿದ್ದಾರೆ. ಮತ್ತು ಅವುಗಳ ಪ್ರಸ್ತಾವನೆಯಲ್ಲಿ ನಿಗ್ಗಂಠನಾಥಪುತ್ತನ ವಿಚಾರಗಳನ್ನು ಉಲ್ಲೇಖಿಸಿದ್ದಾರೆ. (ಸಿ. ಬು. ಕ್ರ. 22-45) ಇದಾದ ನಂತರ ಪಾಲಿಯಲ್ಲಿ ಈರೀತಿ ಬರುವ ಉಲ್ಲೇಖಗಳನ್ನು ತಿಳಿಯುವ ಕಾರ್ಯ ಹೆಚ್ಚಾಗಿ ನಡೆಯುತ್ತಾ ಹೋಯಿತು. ಕೊನೆಗೆ ನಾಗರಾಜ ಮುನಿ ಎಂಬುವವರು 'ಆಗಮ ಔರ್ ತ್ರಿಪಿಟಕ : ಏಕ್ ಅಧ್ಯಯನ್' ಎಂಬ ಗ್ರಂಥದಲ್ಲಿ (ಕಲ್ಕತ್ತ 1969) ಪಾಲಿಯಲ್ಲಿ ಕಂಡುಬಂದಿರುವ 42 ದೃಷ್ಟಾಂತಗಳನ್ನು ಸಂಕಲನ ರೂಪದಲ್ಲಿ ಕೊಟ್ಟಿದ್ದಾರೆ. ಇದರಿಂದ ನಿಸ್ಸಂಶಯವಾಗಿ ಈ ಇಬ್ಬರು ಮಹಾಪುರುಷರು ಸಮಕಾಲೀನರಾಗಿದ್ದರು ಎಂಬುದು ನಿರ್ವಿವಾದವಾಗುತ್ತದೆ. ಹಾಗೂ ಅದರಲ್ಲಿ ಮಹಾವೀರರು ಬುದ್ಧನಿಗಿಂತ ಹಿರಿಯನಾಗಿದ್ದರು ಮತ್ತು ಅವರ ನಿರ್ವಾಣವು ಸಹ ಬುದ್ಧನಿಗಿಂತ ಹಿಂದೆಯೇ ಆಯಿತೆಂದು. ಲೇಖಕರು ಪೂರ್ಣವಾಗಿ ಶೋಧಿಸಿ ನಿರ್ವಾಣಕಾಲವನ್ನು ಕ್ರಿ. ಪೂ. 527 ಎಂದು ಪ್ರಮಾಣಿಕವಾಗಿ ತೋರಿಸಿದ್ದಾರೆ.

## ಡಾ|| ಹೀರಾಲಾಲ್‌ಜಿಯವರ ಪರಿಶ್ರಮ

ಅಪಭ್ರಂಶ ಮೂಲಗಳಿಂದ ಮಹಾವೀರರ ಜೀವನ ಚರಿತ್ರೆಯನ್ನು ಸಂಕಲನ ಮಾಡಲು ಭಾರತೀಯ ಜ್ಞಾನಪೀಠದ ಅಧಿಕಾರ ವರ್ಗದವರು ದಿವಂಗತ ಡಾ|| ಹೀರಾಲಾಲ್‌ಜಿಯವರಿಗಿಂತ ಉತ್ತಮರಾದ ವಿದ್ವಾಂಸರನ್ನು ಕುರಿತು ಯೋಚಿಸುವುದು ಶಕ್ಯವಿಲ್ಲದ ಮಾತು. ಅಪಭ್ರಂಶ ವ್ಯಾಸಂಗವನ್ನು ಸಂಪನ್ನಗೊಳಿಸಿರುವ ಇತರ ವಿದ್ವಾಂಸರಿಗೆ ನಮ್ಮ ಗೌರವವಿದೆ. ಆದರೂ ಯಾವ ಉತ್‌ಪ್ರೇಕ್ಷೆಯೂ ಇಲ್ಲದೆ, ಡಾ|| ಹೀರಾಲಾಲ್‌ಜಿಯವರು ಅಪಭ್ರಂಶ ವ್ಯಾಸಂಗಕ್ಕೆ ಅನ್ಯಾದೃಶ ಹಾಗೂ ಶಾಶ್ವತ ಮೌಲ್ಯದ ಸೇವೆಯನ್ನು ಸಲ್ಲಿಸಿದ್ದಾರೆಂದು ಹೇಳಬಹುದು.

ಅಪಭ್ರಂಶ ಅಭ್ಯಾಸದ ಸಲುವಾಗಿ ಡಾ|| ಹೀರಾಲಾಲ್‌ಜಿಯವರ ಸೇವೆಯನ್ನು ಯಾವುದಾದರೂ ಕೃತಿಗೆ ಸರಿಗಟ್ಟುವುದಾದರೆ ಅದು ಅವರದೇ ಕೃತಿಕಾರ್ಯವಾದ ಧವಳಾದ ಸಂಪಾದನ ಕೆಲಸ. ಧವಳಾದ ಹದಿನಾರು ಸಂಪುಟಗಳು ಜೈನ ಸಿದ್ಧಾಂತದಲ್ಲಿ ಡಾ|| ಹೀರಾಲಾಲ್‌ಜಿಯವರಿಗಿದ್ದ ಅಪ್ರತಿಹತವಾದ ತಲಸ್ಪರ್ಶಿಯಾದ ಪಾಂಡಿತ್ಯಕ್ಕೆ ಎಣೆಯಿಲ್ಲದ ಅದ್ಭುತ ಸಾಕ್ಷಿಯಾಗಿದೆ. ಈ ಕೃತಿಮಾಲೆ ಅವರ ನಿರಂತರ ಶ್ರಮವನ್ನು ಹಾಗೂ ಒಂದು ಉತ್ತಮ ಕಾರ್ಯಕ್ಕೆ ನಿಸ್ವಾರ್ಥ ದೃಷ್ಟಿಯಿಂದ ತಮ್ಮನ್ನೇ ಮುಡುಪಾಗಿರಿಸಿಕೊಂಡ ನಿಷ್ಠೆಯನ್ನು ಚೆನ್ನಾಗಿ ಕನ್ನಡಿಸುತ್ತದೆ. ಕಾರಂಜ ಭಂಡಾರಗಳ ವಿವರಣೆಯಲ್ಲಿ (ಸಂಸ್ಕೃತ ಮತ್ತು ಪ್ರಾಕೃತ ಹಸ್ತಪ್ರತಿಗಳು, ಬೀರಾರಿನ ಕೇಂದ್ರ ಪ್ರದೇಶಗಳಲ್ಲಿ, ಆರ್. ಬಿ. ಹೀರಾಲಾಲ್, ನಾಗಪುರ 1926) ಅವರು ಅಪಭ್ರಂಶ ಸಾಹಿತ್ಯದ ಒಂದು ಶ್ರೀಮಂತ ಭಂಡಾರವನ್ನೇ ಬೆಳಕಿಗೆ ತಂದರು. ವಾಸ್ತವವಾಗಿ ಇದು ಅಪಭ್ರಂಶದ ವ್ಯಾಸಂಗದಲ್ಲಿ ಒಂದು ಹೊಸ ಅಧ್ಯಾಯವನ್ನೇ ಉದ್ಘಾಟಿಸಿತು.

ಒಂದು ಕಡೆ: ಡಾ॥ ಹೀರಾಲಾಲ್‌ಜಿಯವರು ಅಪಭ್ರಂಶ ಸಾಹಿತ್ಯದಲ್ಲಿನ ಸಂಶೋಧನೆಗಳ ಪರಿಶೀಲನೆಯಲ್ಲಿ ಕಾರ್ಯಮಗ್ನರಾದರು, ಮತ್ತು ಇಂಗ್ಲೀಷ್ ಮತ್ತು ಹಿಂದಿಯಲ್ಲಿ ಅನೇಕ ಪತ್ರಿಕೆಗಳಿಗೆ ಬರೆದ ತಮ್ಮ ಬರವಣಿಗೆಯಿಂದ ಇದರೊಡನೆ ವಿದ್ವಾಂಸರು ಪರಿಚಯ ಹೊಂದುವಂತೆ ಅನುಸರಿಸಿದರು. ಉದಾ: ಅಪಭ್ರಂಶ ಸಾಹಿತ್ಯ, ಅಲಹಾಬಾದು ವಿಶ್ವವಿದ್ಯಾಲಯ ಪತ್ರಿಕೆ 1, 157-88 ಅಲಹಾಬಾದು 1925, ಅಪಭ್ರಂಶ ಸಾಹಿತ್ಯದಲ್ಲಿ ಇತ್ತೀಚೆಗೆ ದೊರೆತ ಕೆಲವು ಸಂಗತಿಗಳು, ನಾಗಪುರ ವಿಶ್ವವಿದ್ಯಾನಿಲಯ ಪತ್ರಿಕೆ, 8, 81-92, ನಾಗಪುರ 1942. ಅಪಭ್ರಂಶ ಭಾಷಾ ಔರ್ ಸಾಹಿತ್ಯ, ನಾಗರೀ ಪ್ರಚಾರಿಣೀ ಪತ್ರಿಕಾ, 50, 3-11, 100-121, ವಾರಣಾಸಿ 1945.

ಇನ್ನೊಂದು ಕಡೆ: ಡಾ॥ ಹೀರಾಲಾಲ್‌ಜಿಯವರು ಅಪಭ್ರಂಶ ಕಾವ್ಯಗಳ ಪ್ರಕಟನೆಗೆ ತಮ್ಮ ಕೈಲಾದುದನ್ನು ಶಕ್ತಿಮೀರಿ ನಡೆಸಿದರು. ಈ ಪ್ರಕಟನ ಕಾರ್ಯದಲ್ಲಿ ಅವರು ಹಿರಿಯ ಶ್ರೇಷ್ಠ ವಿದ್ವಾಂಸರಾದ ದಿ॥ ಪಂಡಿತ ನಾತೂರಾಮ್‌ಪ್ರೇಮಿ ಮತ್ತು ಡಾ॥ ಪಿ.ಎಲ್. ವೈದ್ಯ ಮೊದಲಾದವರನ್ನು ಕಾರ್ಯ ಪ್ರವೃತ್ತರನ್ನಾಗಿ ಮಾಡಿದರು. ಪುಷ್ಪದಂತ ಕವಿ ಅಪಭ್ರಂಶಸಾಹಿತ್ಯದಲ್ಲಿ ಉತ್ತಮ ಲೇಖಕನೆಂದು ಪ್ರಸಿದ್ಧನಾಗಿದ್ದಾನೆ. ಆತನ ಕೃತಿಗಳು, ಅವುಗಳಲ್ಲಿನ ಭಾಷೆ ಹಾಗೂ ಕಾವ್ಯತ್ವದ ಮಹತ್ವದಿಂದಾಗಿ ಸಹಜವಾಗಿಯೇ ಪ್ರಥಮ ಗಮನಕ್ಕೆ ಅರ್ಹವಾದುವು. ಡಾ॥ ಪಿ. ಎಲ್. ವೈದ್ಯರು 1931 ರಲ್ಲಿ ಜಸಹರಚರಿಉ ಕಾವ್ಯದ ಸಂಪಾದನೆ ಮಾಡಿ, ಅದನ್ನು ಪೀಠಿಕೆ ಮೊದಲಾದವುಗಳೊಡನೆ ಪ್ರಕಟಿಸಿದರು. ಈ ಸಂಪಾದಿತ ಕೃತಿ ಭಾರತದಲ್ಲಿನ ಉಳಿದ ಅಪಭ್ರಂಶ ಕೃತಿಗಳ ಸಂಪಾದನ ಕಾರ್ಯಕ್ಕೆ ಒಂದು ಮಾದರಿಯಾಗಿ ನಿಂತಿತು.

ಡಾ॥ ಹೀರಾಲಾಲಜಿಯವರು ನಾಯಕುಮಾರ ಚರಿಉ ಕಾವ್ಯವನ್ನು ಪ್ರಾಕೃತ ಭಾಷೆಯ ವಿಶ್ಲೇಷಣೆ ಮೊದಲಾದುವನ್ನು ಒಳಗೊಂಡ ವಿಸ್ತಾರವಾದ ಪ್ರಸ್ತಾವನೆಯೊಡನೆ 1932ರಲ್ಲಿ ಪ್ರಕಟಿಸಿದರು. ದಿ॥ ಪಂ॥ ಪ್ರೇಮಿಜಿಯವರ ಪ್ರಯತ್ನ ಶೀಲ ಚೈತನ್ಯದ ಪರಿಣಾಮದಿಂದಾಗಿ ಮಾಣಿಕಚಂದ್ರ ಡಿ. ಜೆ. ಗ್ರಂಥಮಾಲಾದ ವತಿಯಿಂದ "ಮಹಾಪುರಾಣು ಮಹಾಕಾವ್ಯ" ಮೂರು ಸಂಪುಟಗಳಲ್ಲಿ ಡಾ॥ ಪಿ. ಎಲ್. ವೈದ್ಯರಿಂದ ಸಮರ್ಥವಾದ ರೀತಿಯಲ್ಲಿ ಸಂಪಾದಿತವಾಗಿ ಪ್ರಕಟವಾಯಿತು. (ಬೊಂಬಾಯಿ 1937-41)

ತಮ್ಮ ಸುದೀರ್ಘ ಕಾರ್ಯ ಪ್ರವೃತ್ತ ಜೀವನದಲ್ಲಿ ಅಧ್ಯಾಪಕರಾಗಿ, ಧವಳಾದ ಸಂಪಾದಕರಾಗಿ, ವಿದ್ಯಾರ್ಥಿನಿಲಯದ ಮೇಲ್ವಿಚಾರಕರಾಗಿ, ಒಂದು ಕಾಲೇಜಿನ ಪ್ರಿನ್ಸಿಪಾಲರಾಗಿ, ಸಂಶೋಧನ ಸಹಾಯ ಸಂಸ್ಥೆಯ ನಿರ್ದೇಶಕರಾಗಿ, ವಿಶ್ವವಿದ್ಯಾನಿಲಯದ ಬಹುಮುಖವಾದ ಕಾರ್ಯಗೌರವದ ಪ್ರಾಧ್ಯಾಪಕರಾಗಿ, ಕೆಲವು ಗ್ರಂಥ

ಮಾಲೆಗಳ ಪ್ರಧಾನ ಸಂಪಾದಕರಾಗಿ–ಹೀಗೆ ಹಲವು ಪೂರ್ವನಿಯೋಜಿತ ಕೆಲಸಗಳ ಒತ್ತಡದಲ್ಲಿ ನಿರತರಾಗಿದ್ದರೂ ಡಾ॥ ಹೀರಾಲಾಲಜಿಯವರು ಮಾತ್ರ ತಮ್ಮ ನಿರಂತರ ಆಸಕ್ತಿಯನ್ನು ಅಪಭ್ರಂಶ ವಿಚಾರದಲ್ಲಿ ಕಡೆಗಾಲದವರೆಗೂ ಕಾಪಾಡಿಕೊಂಡಿದ್ದರು.

ಡಾ॥ ಹೀರಾಲಾಲಜಿಯವರು ಅನೇಕ ಅಪಭ್ರಂಶ ಕೃತಿಗಳನ್ನು ಮೊದಲ ಬಾರಿಗೆ ಸಂಪಾದಿಸಿದರು. ಕೆಳಗೆ ಹೆಸರಿಸಿರುವ ಕೃತಿಗಳು ಅವರು ಸಂಪಾದಕರಾಗಿ ಪ್ರಕಟಿಸಿದವು: ಮುನ್ನುಡಿ, ವಿಮರ್ಶೆ, ಹಿಂದಿಯಲ್ಲಿ ವಿವರವಾದ ಸಾರಾಂಶ ಅಥವಾ ಅನುವಾದ, ಇವು ಎಲ್ಲ ಕೃತಿಗಳಿಗೂ ಇದ್ದೇ ಇವೆ;

1. ಸಾವಯ ಧಮ್ಮದೋಹಾ, ಹಿಂದಿ ಅನುವಾದದೊಡನೆ, ಕಾರಂಜ 1932.
2. ಣಾಯಕುಮಾರ ಚರಿಉ, ಪ್ರಸ್ತಾವನೆ ಇ. ಕಾರಂಜ 1932.
   ಪರಿಷ್ಕೃತ II ಮುದ್ರಣ, ಪೂರ್ಣ ಹಿಂದಿ ಅನುವಾದದೊಡನೆ, ಜ್ಞಾನಪೀಠ ಪ್ರಕಾಶನ, ವಾರಣಾಶಿ, 1972.
3. ಪಾಹುಡದೋಹಾ, ಹಿಂದಿ ಅನುವಾದದೊಡನೆ, ಕಾರಂಜ 1933
4. ಕರಕಂಡ ಚರಿಉ, ಕಾರಂಜ 1932
   ಪರಿಷ್ಕೃತ II ಮುದ್ರಣ, ಹಿಂದಿ ಭಾಷಾಂತರದೊಡನೆ, ಜ್ಞಾನಪೀಠ ಪ್ರಕಾಶನ, ವಾರಣಾಸಿ 1962.
5. ಮಯಣ ಪರಾಜಯ ಚರಿಉ, ಹಿಂದಿ ಭಾಷಾಂತರ, ಜ್ಞಾನಪೀಠ ಪ್ರಕಾಶನ, ವಾರಣಾಸಿ 1962.
6. ಸುಗಂಧ—ದಶಮೀ ಕಥಾ, ಹಿಂದಿ ಭಾಷಾಂತರ, ಜ್ಞಾನಪೀಠ ಪ್ರಕಾಶನ, 1966.
7. ಶ್ರೀ ಚಂದ್ರನ ಕಹಾಕೋಸು, ವಿವರವಾದ ವಿಶ್ಲೇಷಣೆ ಹಿಂದಿಯಲ್ಲಿ, ಪ್ರಾಕೃತ ಗ್ರಂಥಸಂಸ್ಥೆ, ವಾರಣಾಸಿ, 1969.
8. ನಯ ನಂದಿಯ ಸುದಂಸಣ ಚರಿಉ, ಹಿಂದಿ ಅನುವಾದ, ವೈಶಾಲಿ 1970.
9. ಜಸಹರ ಚರಿಉ, ಪರಿಷ್ಕೃತ ಮುದ್ರಣ, ಹಿಂದಿ ಅನುವಾದ, ವಾರಣಾಸಿ, 1972.
10. ವೀರಜಿಣಿಂದ ಚರಿಉ—ಇದು ಇಲ್ಲಿ ಈಗ ಪ್ರಕಟವಾಗುತ್ತಿರುವ ಕೃತಿ.

ನನ್ನ ಪ್ರಾರ್ಥನೆಯ ಮೇರೆಗೆ ಡಾ॥ ಹೀರಾಲಾಲ್‌ಜಿಯವರು ಕಹಾಕೊಸು ಕೃತಿಯನ್ನು ಏಕೈಕ ಹಸ್ತಪ್ರತಿಯ ಆಧಾರದಿಂದ ಸಂಪಾದಿಸಿಕೊಟ್ಟರು. ಆ ರೀತಿ ಮಾಡಿ ಆ ಗ್ರಂಥವನ್ನು ಮರೆಯಾಗಿ ಹೋಗದಂತೆ ಉಳಿಸಿಕೊಟ್ಟರು. ಎಷ್ಟೇ

ಅನಾರೋಗ್ಯವಿದ್ದಾಗ್ಯೂ ಅವರು ನನ್ನ ಒತ್ತಡಕ್ಕೆ ಕೃಪೆಯಿಟ್ಟು ಮಣಿದು ಹಿಂದಿ ಅನುವಾದದೊಡನೆ ಜಸಹರಚರಿಉ ಕೃತಿಯನ್ನು, ಅದರ ಮೊದಲ ಸಂಪಾದಕ ಡಾ|| ವೈದ್ಯರಿಗೂ ಸಂತೃಪ್ತಿಯಾಗುವಷ್ಟರ ಮಟ್ಟಿಗೆ ಮುಗಿಸಿಕೊಟ್ಟರು.

ಈ ಪ್ರಕೃತ ಪುಸ್ತಕವಾದ ವೀರಜಿಣಿಂದ ಚರಿಉ ಸಂಕಲಿತವಾಗಿರುವ ವಿಧಾನವೇ ಅಪಭ್ರಂಶ ಸಾಹಿತ್ಯದ ಮೇಲೆ ಡಾ|| ಹೀರಾಲಾಲಜಿಯವರಿಗಿದ್ದ ಪರಿಪಕ್ವ ಪ್ರಭುತ್ವವನ್ನು ಬಿಂಬಿಸುತ್ತದೆ. ಹಿಂದಿಯಲ್ಲಿ ಅವರು ಬರೆದಿರುವ ಪೀಠಿಕೆಯಂತೂ ಘನ ಸಂಶೋಧನೆಯ ಒಂದು ನಿದರ್ಶನವಾಗಿದೆ. ವೈಶಾಲಿ ಸಂಸ್ಥೆಯ ಸ್ಥಾಪಕ-ನಿರ್ದೇಶಕರಾಗಿ ಅವರು ವೈಶಾಲಿಯಲ್ಲಿ ಅಯ್ದು ವರ್ಷಕಾಲ ಇದ್ದರು. ಹಿಂದೊಮ್ಮೆ ಭಗವಾನ್ ಮಹಾವೀರರ ಇರುವಿಕೆಯಿಂದಾಗಿ ಪವಿತ್ರವಾಗಿರುವ ಪ್ರದೇಶದಲ್ಲಿ ಸುತ್ತಾಡುವ ಹಲವು ಸಂದರ್ಭಗಳು ಅವರಿಗಿದ್ದುವು.

ಕೆಲವು ವರ್ಷಗಳ ಹಿಂದೆ ನಾನು ಹೋದಾಗ ಡಾ|| ಹೀರಾಲಾಲಜಿಯವರು ಅಹಲ್ಯ ನೆಲದ ಭಾಗವನ್ನೂ, ಮಹಾವೀರರ ಸ್ಮಾರಕವನ್ನೂ ನನಗೆ ಅದೆಷ್ಟು ಉತ್ಸಾಹದಿಂದ ತೋರಿಸಿದರೆಂಬುದು ಈಗಲೂ ನೆನಪಿದೆ. ಆ ಪ್ರದೇಶದ ಬಗ್ಗೆ ಅವರಿಗಿದ್ದ ನೇರ ನಿಕಟ ಕೇವಲ ಪರಿಚಯ ಜ್ಞಾನದಿಂದ ಅವರು ಅನೇಕ ಸಂವಾದಗಳನ್ನೂ ಮತ್ತು ಅವರ ಕೆಲವು ತೀರ್ಮಾನಗಳನ್ನೂ ಮುಂದಿಟ್ಟಿದ್ದಾರೆ. ಈ ಅಭಿಪ್ರಾಯಗಳನ್ನು ನಾವು ಅತ್ಯಂತ ವಿಶ್ವಾಸದಿಂದ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಅವು ಅಗತ್ಯ ಆಧಾರಗಳಿಂದ ಪ್ರತಿಪಾದಿತವಾಗಿವೆ, ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಪರಿಣತ ಪಂಡಿತರೊಬ್ಬರ ಸೌಜನ್ಯಲಿಪ್ತ ಮಾತು ಆಗಿವೆ. ಅವರ ಸಂಶೋಧನೆಗಳು ಭಗವಾನ್ ಮಹಾವೀರ ಮತ್ತು ಅವರ ಜೀವಿತ ಕಾಲದ ಬಗ್ಗೆ ಸರಿಯಾದ ತಿಳುವಳಿಕೆಗೆ ದಾರಿ ಮಾಡಿಕೊಡುವ ವಿಚಾರದಲ್ಲಿ ನನಗೆ ಅನುಮಾನವೇ ಇಲ್ಲ.

ಡಾ|| ಹೀರಾಲಾಲಜಿಯವರು ಮತ್ತು ನಾನು ಮೂರ್ತಿದೇವಿ ಗ್ರಂಥಮಾಲಾದ ಪ್ರಧಾನ ಸಂಪಾದಕರಾಗಿ ಹಲವು ವರ್ಷಕಾಲ ಒಟ್ಟಿಗೆ ದುಡಿದೆವು. ಅವರಲ್ಲಿ ನನಗೊಬ್ಬ ಸಹಕಾರಿ ಸಹೋದ್ಯೋಗಿ ಹಾಗೂ ಸುಯೋಗ್ಯ ಸ್ನೇಹಿತರನ್ನು ಕಂಡುಕೊಂಡಿದ್ದೆ. ವಾಸ್ತವವಾಗಿ ನನ್ನ ಪಾಲಿಗೆ ಅವರೊಬ್ಬ ಕಲ್ಯಾಣ ಮಿತ್ರರಾಗಿದ್ದರು. ಇದರ ಜೊತೆ ಅನೇಕ ಸಾಹಿತ್ಯಕ ಯೋಜನೆಗಳಲ್ಲಿ ಅವರೊಡನೆ ಕಾರ್ಯನಿರತರಾಗುವುದು ಒಂದು ಸದವಕಾಶ.

ಈ ಹೊತ್ತಗೆಯ ಪ್ರಧಾನ ಸಂಪಾದಕೀಯದಲ್ಲಿ ಅವರ ಹಿಂದಿ ಪೀಠಿಕೆಯನ್ನು ಸಾಕಷ್ಟು ಅಳವಡಿಸಿರುವುದಕ್ಕೆ ಅವರಿತ್ತ ಸಲಹೆಯೇ ಕಾರಣ. ವ್ಯಸನದ ಸಂಗತಿಯೆಂದರೆ ಈ ಪ್ರಧಾನ ಸಂಪಾದಕೀಯವನ್ನು, ಅವರು ಸಾಮಾನ್ಯವಾಗಿ ನೋಡಿ ಸಲಹೆಗಳನ್ನು ಕೊಡುತ್ತಿದ್ದಂತೆ, ಆಮೂಲಾಗ್ರ ಅವಲೋಕಿಸಲು ಉಳಿಯಲಿಲ್ಲವೆಂಬುದು. ಹಿಂದಿ ಪೀಠಿಕೆಯಲ್ಲಿ, ಸಂಸ್ಕೃತ ಮತ್ತು ಕನ್ನಡದಲ್ಲಿ ಮಹಾವೀರರ

ಜೀವನ ಚರಿತ್ರೆಗಳು ಎಂಬ ಭಾಗದಲ್ಲಿ ಒಂದೆರಡು ಪ್ಯಾರಾಗಳನ್ನು ಮಾತ್ರ ಸೇರಿಸಿದ್ದೇವೆ.

ಭಾರತೀಯ ಜ್ಞಾನಪೀಠದ ಅಧಿಕಾರ ವರ್ಗದವರಿಗೆ, ಅದರಲ್ಲಿಯೂ ಆದರ ಪಾಜ್ಞ ಅಧ್ಯಕ್ಷಿಣಿ ಶ್ರೀಮತಿ ರಮಾದೇವಿ ಜೈನ್' ಅವರಿಗೆ, ಮತ್ತು ಈ ಸಂಸ್ಥೆಯ ಉದಾರ ಪೋಷಕ ಶ್ರೀಮಾನ್ ಸಾಹು ಶಾಂತಿ ಪ್ರಸಾದಜಿಯವರಿಗೆ, ಭಗವಾನ್ ಮಹಾವೀರರ ಹೆಸರಿನಲ್ಲಿ 2500 ನೆಯ ನಿರ್ವಾಣ ಉತ್ಸವವನ್ನು ನಡೆಸುವ ಸುಸಮಯದ ಸ್ಮರಣೆಗಾಗಿ ಈ ಹೊತ್ತಿಗೆಯ ಪ್ರಕಟನೆಯನ್ನು ವ್ಯವಸ್ಥೆ ಮಾಡಿದುದಕ್ಕಾಗಿ ನಾವು ಕೃತಜ್ಞರು. ಶ್ರೀ ಲಕ್ಷ್ಮೀಚಂದಜಿ ಜೈನರಿಗೂ ನಮ್ಮ ಕೃತಜ್ಞತೆಗಳು ಸಲ್ಲಬೇಕು. ಅವರು ಅತ್ಯುತ್ಸಾಹಭರಿತರಾಗಿ ಜ್ಞಾನ ಪೀಠದವರು ತೆಗೆದುಕೊಂಡಿರುವ ಪ್ರಕಟನ ಯೋಜನೆಯನ್ನು ಕಾರ್ಯರೂಪಕ್ಕೆ ಇಳಿಸುತ್ತಿದ್ದಾರೆ.

ಅಡಿ ಟಿಪ್ಪಣಿಗಳು :—

1. ಋಗ್ವೇದ 10, 102, 6 ; 10, 136 ; 10, 166 ; 2, 33. ಭಾಗವತ ಪುರಾಣ 4, 6 ; ವಿಷ್ಣು ಪುರಾಣ 3, 18 ಇತ್ಯಾದಿ.

ವೃಷಭ, ಕೇಶಿ, ಮತ್ತು ವಾತರಶನ ದಿಗಂಬರ-ಮುನಿಗಳ ಉಲ್ಲೇಖ ನಮ್ಮ ವಿಶೇಷ ಗಮನಕ್ಕೆ ಅರ್ಹವಾಗಿದೆ.

2. ಸಮವಾಯಾಂಗ ಸೂತ್ರ 246. ಕಲ್ಪಸೂತ್ರ, ಹೇಮಚಂದ್ರನ ತ್ರಿಷಷ್ಟಿ ಶಲಕಾಪುರುಷ ಚರಿತ.
ತಿಲೋಯಪಣ್ಣತ್ತಿ, ಮಹಾಧಿಕಾರ 4.
ಜಿನಸೇನರ ಆದಿಪುರಾಣ ; ಗುಣಭದ್ರರ ಉತ್ತರ ಪುರಾಣ, ಪುಷ್ಪದಂತನ ಮಹಾಪುರಾಣ (ಅಪಭ್ರಂಶ)

3. ಭಾಗವತ ಪುರಾಣ 5, 4, 9 ; 11, 2
ಅಗ್ನಿ ಪುರಾಣ 107, 11,–12
ಬ್ರಹ್ಮಾಂಡ ಪುರಾಣ 14, 5, 62
ಲಿಂಗಪುರಾಣ 1, 47, 23
ಸ್ಕಂದ ಪುರಾಣ ಕುಮಾರಖಂಡ 37, 57
ಮಾರ್ಕಂಡೇಯ ಪುರಾಣ 50, 41

ಈ ಮೂಲಗಳಲ್ಲಿ ಋಷಭನ ಮಗ ಭರತನಿಂದ ಈ ದೇಶಕ್ಕೆ ಭಾರತವರ್ಷ (ಭರತವರ್ಷ) ಎಂಬ ಹೆಸರು ಬಂದಿತೆಂಬುದನ್ನು ಸ್ಪಷ್ಟವಾಗಿ ಹೇಳಿದೆ.

4. ಮಹಾಪುರಾಣ (ಸಂಸ್ಕೃತ) ಪರ್ವ 74
ಮಹಾಪುರಾಣು (ಅಪಭ್ರಂಶ) ಸಂಧಿ 95

5. ಮಹಾಪುರಾಣ (ಸಂಸ್ಕೃತ) ಪರ್ವ 76

6. ಮಹಾಪುರಾಣ (ಸಂಸ್ಕೃತ) 74, 288–95
ಮಹಾಪುರಾಣು (ಅಪಭ್ರಂಶ) 96, 10, 10–15
ಭಾಗವತ ಪುರಾಣಂ, ದಶಮಸ್ಕಂದ

7. ಸಮವಾಯಾಂಗ ಸೂತ್ರ 211–227. ಷಟ್ಖಂಡಾಗಮ 1, 2, 2,
ಟೀಕಾ, ಭಾಗ, 1, ಪುಟ 96.
ವಿಂಟರ್‌ನಿಟ್ಸ್, ಭಾರತೀಯ ಸಾಹಿತ್ಯ ಚರಿತ್ರೆ, 11 ಜೈನ ಸಾಹಿತ್ಯ
ಕಪಾಡಿಯ ಜೈನಧರ್ಮ ಪರಂಪರೆಯ ಸಾಹಿತ್ಯ ಚರಿತ್ರೆ
ಜಗದೀಶಚಂದ್ರ, ಪ್ರಾಕೃತ ಸಾಹಿತ್ಯಕ ಇತಿಹಾಸ, ಪುಟ 33

ಡಾ॥ ಹೀರಾಲಾಲ್ ಜೈನ್, ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ ಕನ್ನಡ ಅನುವಾದ, ಮಿರ್ಜಿ ಅಣ್ಣಾರಾಯ.

ನೇಮಿಚಂದ್ರಶಾಸ್ತ್ರಿ, ಪ್ರಾಕೃತಭಾಷಾ ಔರ್ ಸಾಹಿತ್ಯಕಾ ಆಲೋಚನಾತ್ಮಕ ಇತಿಹಾಸ, ಪುಟ 157.

8. ಮಹಾವೀರ ಮತ್ತು ಬುದ್ಧನ ನಿರ್ವಾಣ ತೇದಿಯ ಆಧಾರ ಮತ್ತು
ಚರ್ಚೆಗೆ ನೋಡಿ;
ವಿಂಟರ್‌ನಿಟ್ಸ್, ಭಾರತೀಯ ಸಾಹಿತ್ಯ ಚರಿತ್ರೆ, 11, ಅನುಬಂಧ 11
ಬುದ್ಧನ ನಿರ್ವಾಣ, ಅನುಬಂಧ IV ಮಹಾವೀರನ ನಿರ್ವಾಣ.

ಮುನಿನಾಗರಾಜ, ಆಗಮ ಔರ್ ತ್ರಿಪಿಟಕ-ಏಕ್ ಅನುಶೀಲನ ಪುಟ 47-128.

9. ಹೊ ಎರ್ನೆಲ್, ಉಪಾಸಕದಶ, ಪೀಠಿಕೆ ಮತ್ತು ಟಿಪ್ಪಣಿಗಳು.
ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾ, 1, ಪುಟ 140
ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ, ಪುಟ 22

10. ನಿರ್ವಾಣ ಸ್ಥಳದ ಬಗ್ಗೆ ವಿವರವಾದ ಚರ್ಚೆಗೆ ನೋಡಿ :

ಕಹ್ನಯಲಾಲ್, ಪಾವ–ಸಮೀಕ್ಷಾ, ಅಶೋಕ ಪ್ರಕಾಶನ, ಕತರ್ ಬಜಾರ್, ಛಪ್ರ ಬಜಾರ್, 1972.

ಭಾರತೀಯರ ಚರಿತ್ರೆ ಮತ್ತು ಸಂಸ್ಕೃತಿ, ಸಂಪುಟ 11, ದಿ ಏಜ್ ಆಫ್ ಇಂಪೀರಿಯಲ್ ಯೂನಿಟಿ, ಪುಟ 7.

11. ಮುನಿನಾಗರಾಜ್, ಆಗಮ ಔರ್ ತ್ರಿಪಿಟಕ, ಪುಟ 324

12. ಹರಿವಂಶ ಕೊಚ್ಚರ್, ಅಪಭ್ರಂಶ ಸಾಹಿತ್ಯ
ಪರಮಾನಂದಶಾಸ್ತ್ರಿ, ಜೈನಗ್ರಂಥ ಪ್ರಶಸ್ತಿ ಸಂಗ್ರಹ, ಭಾಗ 11,
ಅಪಭ್ರಂಶ ಗ್ರಂಥ.





# ಸಂಧಿ ೧

## ಭಗವಂತನ ಗರ್ಭಾವತರಣ, ಜನನ ಮತ್ತು ತಪಸ್ಸು

೧

### ಮಂಗಲಾಚರಣೆ ಹಾಗೂ ಕಾವ್ಯ ರಚನೆಯ ಪ್ರತಿಜ್ಞೆ

ಯಾರಿಂದ ಕಾಮದೇವನು ನಾಶವಾದನೋ, ಯಾರ ಶಾಸನ ಸುರಪತಿ ನರಪತಿ ಹಾಗೂ ನಾಗಪತಿಯ ಮೂಲಕ ಪ್ರಕಟವಾಗಿದೆಯೋ, ಯಾರು ಕುಜ್ಞಾನದ ನಿಂದೆ ಮಾಡಿರುವನೋ ಮತ್ತು ನಿರ್ಮಲ ಮೋಕ್ಷ ಮಾರ್ಗದ ಪ್ರಕಾಶನ ಮಾಡಿರುವನೋ ಅಂತಹ ಸನ್ಮತಿ ಭಗವಂತನಿಗೆ ನಾನು ಪ್ರಣಾಮ ಮಾಡುತ್ತೇನೆ. ಈ ಭಗವಂತನು ಜನನ ಮರಣಗಳ ಪರಂಪರೆಯ ವಿನಾಶಕನೂ, ಮನುಷ್ಯನ ಮನಸ್ಸಿನಲ್ಲಿ ಉತ್ಪನ್ನ ವಾಗುವ ಅಜ್ಞಾನ ರೂಪಿ ಅಂಧಕಾರವನ್ನು ದೂರಗೊಳಿಸುವ ಸೂರ್ಯನ ಸಮಾನನೂ ಆಗಿದ್ದಾನೆ. ಆ ಪ್ರಭುವು ಪಾಪರೂಪಿಯಾದ ಇಂಧನವನ್ನು ನಷ್ಟಗೊಳಿಸುವ ಸಲು ವಾಗಿ ಅಗ್ನಿ ಸಮಾನವಾದ ಉತ್ತಮ ತಪಸ್ಸುಗಳ ಮಾರ್ಗವಾಗಿದ್ದಾನೆ.

ಅವನು ಸ್ಥಿರನೂ, ಅಂತಸ್ತಿನಿಂದ ಮುಕ್ತನೂ, ಇಂದ್ರಿಯಗಳನ್ನು ತನ್ನ ವಶ ದಲ್ಲಿ ಇಟ್ಟುಕೊಳ್ಳುವಂಥವನೂ, ಶತ್ರು ಮತ್ತು ಮಿತ್ರ ಹಾಗೂ ಪಾಮರ ಮತ್ತು ಪಂಡಿತರ ಮೇಲೆ ಸಮಾನ ದೃಷ್ಟಿ ಇಟ್ಟಿರುವವನೂ ಆಗಿದ್ದಾನೆ. ಅವನು ತನ್ನ ಸಮಾ ನತೆಯ ಭಾವದಿಂದ ಪ್ರಮಾದಿ ರಾಗಯುಕ್ತ ಹಾಗೂ ದುರ್ವಿನೀತ ಚಂಚಲ ಮನ ಸ್ಸನ್ನು ಸೋಲಿಸಿದ್ದಾನೆ. ಅವನು ಈ ಜಗತ್ತನ್ನು ಜ್ಞಾನದ ಮಾರ್ಗದ ಮೇಲೆ ಇಟ್ಟಿದ್ದಾನೆ. ಅವನು ಶಾಶ್ವತವಾದ ಮಾರ್ಗದ ಸ್ಥಾಪನೆಯನ್ನು ಮಾಡಿದ್ದಾನೆ. ಅವನು ಯಾವಾಗಲೂ ಕಷಾಯ ರಹಿತನೂ ಮತ್ತು ವಿಷಾದ ಹೀನನೂ ಆಗಿದ್ದಾನೆ. ಅವನಿಗೆ ದರ್ಪವೇ ಇಲ್ಲ, ಮಾಯೆಯ ಅಭಾವವಿದೆ. ಅವನು ಯಾವಾಗಲೂ ಪ್ರಸನ್ನ ನಾಗಿರುತ್ತಾನೆ. ಆಹಾರ, ಭಯ ಮುಂತಾದ ಸಂಜ್ಞೆಗಳು ಆತನಿಗೆ ಇರುವುದಿಲ್ಲ. ಆತನು ದಿವ್ಯ ದ್ವಾದಶ ಅಂಗಗಳ ಜ್ಞಾತ ತಪಸ್ವೀಗಣದ ಪ್ರಧಾನನಾಗಿದ್ದಾನೆ. ಆ ಮಹಾವೀರ ನಾಮಾಂಕಿತ ತೀರ್ಥಂಕರನು ಉತ್ತಮ ದೇವಾಂಗನೆಯರ ಪ್ರೇಮದಲ್ಲಿ ಆಸಕ್ತನಾಗಲಿಲ್ಲ.

ಇಂಥ, ಜಗತ್ತಿನಲ್ಲಿರುವ ಮುನಿಗಳ ಮತ್ತು ಅರ್ಜಿಕೆಯರ ಸ್ವಾಮಿ ; ದಮ, ಯಮ, ಕ್ಷಮಾ, ಸಂಯಮ–ಇವೇ ಅಲ್ಲದೆ ಅಭ್ಯುದಯ ಮತ್ತು ನಿಃಶ್ರೇಯಸ್ಸು ರೂಪದ ಎರಡೂ ರೀತಿಯ ಲಕ್ಷ್ಮಿ ಹಾಗೂ ಸಮಸ್ತ ದ್ರವ್ಯಗಳ ಸರಿಸಮವಾದ ಜ್ಞಾನಿ ; ದಯೆಯಿಂದ ವೃದ್ಧಿಶೀಲ ವರ್ಧಮಾನ ಜಿನೇಂದ್ರನಿಗೆ ನಾನು ನನ್ನ ಮಸ್ತಕವನ್ನು

ಬಗ್ಗಿಸಿ ನಮಸ್ಕರಿಸುತ್ತೇನೆ ಮತ್ತು ಆತನ ಚರಿತ್ರೆಯನ್ನು ವರ್ಣಿಸುತ್ತೇನೆ. ಆತನ ಈ ದಿವ್ಯ ಕಾವ್ಯವನ್ನು ಕೇಳಿರಿ. ಗಣಧರರು ಇದನ್ನು ವಿಸ್ತಾರವಾಗಿ (ವರ್ಣಿಸಿದ್ದಾರೆ) ಉಪದೇಶಿಸಿದ್ದಾರೆ. ಆದರೂ ನಾನು ಇಲ್ಲಿ ಕಿಂಚಿತ್ತಾಗಿ ವರ್ಣನೆ ಮಾಡುತ್ತೇನೆ.

ಸೂರ್ಯರೂಪೀ ದೀಪಕದಂತೆ ಪ್ರಕಾಶಮಾನವಾದ ಈ ಜಂಬೂದ್ವೀಪದ ಪೂರ್ವ ವಿದೇಹ ಹೆಸರಿನ ಮನೋಹರ ಕ್ಷೇತ್ರದಲ್ಲಿ ನಿರ್ಮಲವಾದ ನೀರಿನ ಪ್ರವಾಹದಿಂದ ತುಂಬಿರುವ ಸೀತಾ ನದಿಯ ಉತ್ತರ ದಡದ ಮೇಲೆ ಪುಷ್ಕಲಾವತೀ ಹೆಸರಿನ ದೇಶವಿದೆ.

## ೨

## ಜಂಬೂದ್ವೀಪ ಪೂರ್ವವಿದೇಹ ಪುಷ್ಕಲಾವತೀ ದೇಶದ ಕಾಡಿನಲ್ಲಿ ಪುರೂರವ ಹೆಸರಿನ ಶಬರ ಮತ್ತು ಶಬರಿಯರು

ಆ ದೇಶದಲ್ಲಿ ಒಂದು ಕಾಡಿತ್ತು. ಅದು ಅರಳಿದ ರಸತುಂಬಿದ ಹೂಗಳ ಪರಾಗದಿಂದ ತುಂಬಿಕೊಂಡಿತ್ತು. ಅಲ್ಲಿಯ ಸರೋವರ ಸುಂದರವಾದ ಅರಳಿದ ಕಮಲಗಳಿಂದ ಶೋಭಿತವಾಗಿತ್ತು. ಕಂದರಗಳೂ, ಝರಿಗಳೂ ನೀರಿನ ಪ್ರವಾಹದಿಂದ ಪೂರ್ತಿಯಾಗಿದ್ದುವು. ಅಲ್ಲಿ ಕಿನ್ನರರ ಕೈಯಲ್ಲಿಯ ವೀಣೆಗಳ ಸುಂದರ ಧ್ವನಿ ಕೇಳಿಸುತ್ತಿತ್ತು. ಕೆಲವೆಡೆ ಮದೋನ್ಮತ್ತ ಆನೆ ಸಿಂಹದ ಪಂಜದ ಹೊಡೆತಕ್ಕೆ ಘೀಳಿಡುತ್ತಿತ್ತು. ಮತ್ತೆ ಕೆಲವೆಡೆ ಪರ್ವತದ ಗುಹೆಗಳಲ್ಲಿ ಆನೆಗಳಿಂದ ದೊರೆತ ಮುತ್ತುಗಳು ಸುರಕ್ಷಿತವಾಗಿ ಇಡಲ್ಪಟ್ಟದ್ದುವು. ಬೇರೆಡೆಯಲ್ಲಿ ಸುತ್ತಾಡುತ್ತಿದ್ದ ಕಸ್ತೂರಿ ಮೃಗಗಳ ಸುಗಂಧ ಬರುತ್ತಿತ್ತು. ಇನ್ನೂ ಕೆಲವು ಕಡೆ ಕುರರ, ಶುಕ ಮತ್ತು ಕೋಗಿಲೆಗಳ ಕಲರವ ಕೇಳಿಬರುತ್ತಿತ್ತು. ಕೆಲವೆಡೆ ವನಚರರ ಸಮೂಹಗಳು ಸಂತೋಷದಿಂದ ವಿಲಾಸದಲ್ಲಿ ಮಗ್ನವಾಗಿದ್ದುವು, ಮತ್ತೆಲ್ಲೋ ಭ್ರಮರಗಳ ಪ್ರಿಯ ಮತ್ತು ಮನೋಹರವಾದ ಧ್ವನಿ ಕೇಳಿಬರುತ್ತಿತ್ತು.

ಇಂತಹ ಆ ಮಧುಕರ ನಾಮಂಕಿತ ಕಾಡಿನಲ್ಲಿ ಪುರೂರವನೆಂಬ ಒಬ್ಬ ಶಬರನು ವಾಸಿಸುತ್ತಿದ್ದನು. ಅವನು ಅತ್ಯಂತ ದುರ್ಭಾವನೆಗಳಿಂದ ದೂಷಿತನಾಗಿದ್ದನು. ಒಂದು ದಿನ ಅವನು ತನ್ನ ಪ್ರಚಂಡ ಧನುಷ್ಬಾಣ ಸಹಿತನಾಗಿ ತನ್ನ ಕೃಷ್ಣವರ್ಣದ ಶಬರಿಯ ಜೊತೆಯಲ್ಲಿ ಆ ಕಾಡಿನಲ್ಲಿ ವಿಹರಿಸುತ್ತಿದ್ದನು. ಆ ಸಮಯದಲ್ಲಿ ಅವನು ಸ್ಥಾವರ ಮತ್ತು ಜಂಗಮ ಜೀವರಾಶಿಗಳನ್ನು ಯತ್ನಪೂರ್ವಕವಾಗಿ ರಕ್ಷಿಸುವ ಶ್ರೇಷ್ಠ ಮುನಿಯಾದ ಸಾಗರಸೇನರನ್ನು ನೋಡಿದನು. ಅವನು ತತ್ಕಾಲದಲ್ಲೇ ಅವರನ್ನು ತನ್ನ ಬಾಣದಿಂದ ಭೇದಿಸುವ ವಿಚಾರಮಾಡಿದನು. ಆದರೆ ಅವನು ಬಾಣವನ್ನು ಕೈಯಲ್ಲಿ ತೆಗೆದುಕೊಳ್ಳುವ ಮುನ್ನವೆ ಅವನ ಸ್ತ್ರೀ ಅವನನ್ನು ತಡೆದಳು. ಆ ಶಬರಿ ತಮಾಲವೃಕ್ಷ ಹಾಗೂ ನೀಲಮಣಿಗಳಂತೆ ಕಪ್ಪಗಿದ್ದಳು. ಚಿಕ್ಕ ಆನೆಯ ದಂತದ ಚೂರುಗಳಿಂದ ನಿರ್ಮಿತವಾದ ಕರ್ಣಭೂಷಣಗಳನ್ನು ಹಾಕಿಕೊಂಡಿದ್ದಳು.

ಹುಲ್ಲಿನಿಂದ ಮಾಡಿದ ಕೀಲ ತೊಟ್ಟಿದ್ದಳು. ಅವಳು ಆನೆಯ ಮದದ ಸಮಾನವಾದ ನೀಲಿವರ್ಣವಾಗಿದ್ದಳು. ಮರಗಳ ಎಲೆಗಳಿಂದ ತಯಾರಿಸಿದ ಬಟ್ಟೆಯನ್ನು ಧರಿಸಿದ್ದಳು. ಬೇರು ಬಳ್ಳಿಗಳಿಂದ ಮಾಡಿದ ಕಟಿಬಂಧವನ್ನು ಹಾಕಿಕೊಂಡಿದ್ದಳು. ಅವಳ ಕೈಯಲ್ಲಿ ಮಾಂಸ ಮತ್ತು ಫಲಭರಿತ ಬುಟ್ಟಿಯಿದ್ದಿತು. ಅವಳ ಕಣ್ಣುಗಳು ನೀಲಕಮಲಗಳಿಗೆ ಸದೃಶವಾಗಿದ್ದುವು.

೩

## ಮುನಿಯನ್ನು ಕೊಲ್ಲಲು ಹೊರಟ ಬೇಡನನ್ನು ಬೇಡತಿಯು ತಡೆಯುವುದು ಮತ್ತು ಅವನಿಗೆ ಮುನಿಯ ಧರ್ಮೋಪದೇಶ

ಆ ಶಬರಿಯು ಶಬರನಿಗೆ ಹೇಳಿದಳು : "ಹೊಡೆಯಬೇಡ, ಅಯ್ಯೋ ಮೂರ್ಖನೇ ನಿನಗೆ ಸ್ವಲ್ಪವೂ ವಿವೇಕವಿಲ್ಲ. ಇದು ಯಾವ ಮೃಗವೂ ಅಲ್ಲ. ಅವರು ಜ್ಞಾನಿ, ಮುನಿರಾಜರು ಹಾಗೂ ಲೋಕಪ್ರಿಯರು. ಮತ್ತು ಅವರಿಗೆ ಎಲ್ಲರೂ ಪ್ರಣಾಮ ಮಾಡುತ್ತಾರೆ." ಶಬರಿಯ ಈ ಮಾತನ್ನು ಕೇಳಿ ಪುಳಿಂದನು ತನ್ನ ಭುಜದಂಡಕ್ಕೆ ಭೂಷಣವಾದ ಧನುಸ್ಸನ್ನು ಭೂಮಿಯ ಮೇಲೆ ಎಸೆದನು, ಮತ್ತು ಸದ್ಭಾವ ಪೂರ್ವಕವಾಗಿ ಮುನಿವರರಿಗೆ ಪ್ರಣಾಮ ಮಾಡಿದನು.

ಪಾಪವನ್ನು ನಾಶಮಾಡುವ ಆ ಮುನಿಪುಂಗವರು ಅವನಿಗೆ ಆಶೀರ್ವಾದ ಮಾಡುತ್ತಾ ಹೇಳಿದರು, "ಹೇ ಶಬರನೇ, ನಿನಗೆ ಧರ್ಮಬುದ್ಧಿ ಹಾಗೂ ಶುದ್ಧಜ್ಞಾನ ಮತ್ತು ಸಮಾಧಿ ಪ್ರಾಪ್ತವಾಗಲಿ. ಈಗ ನೀನು ಜೀವದ ಹಿಂಸೆ ಮಾಡಬೇಡ. ಸುಳ್ಳನ್ನು ನುಡಿಯಬೇಡ, ಹಾಗೂ ಯಾವತ್ತೂ ಪರಧನಕ್ಕೆ ಕೈಯನ್ನಿಡಬೇಡ. ಪರಸ್ತ್ರೀಯರ ಮುಖಕಮಲದ ಕಡೆ ದೃಷ್ಟಿಸಬೇಡ, ಅವರ ಸ್ತನಮಂಡಲಗಳ ಮೇಲೆ ಕೈಯಾಡಿಸಬೇಡ. ದೋಷಗಳಿಂದ ದೂಷಿತನಾದವನಿದ್ದರೂ ಕೂಡ ಯಾರ ನಿಂದೆಯನ್ನೂ ಮಾಡಬೇಡ. ಮನೆಯಲ್ಲಿ ಎಷ್ಟು ಸಾಮಗ್ರಿಗಳನ್ನು ಇಡಬೇಕೋ ಅಷ್ಟನ್ನೇ ಮಿತಿಯಲ್ಲಿಟ್ಟು ಸಂತೋಷಪಡು. ಮಧು ಮದ್ಯ ಮತ್ತು ಮಾಂಸದ ಭೋಜನ ಹಾಗೂ ರಾತ್ರಿ ಭೋಜನಗಳು ದುಃಖದ ಕಾರಣಗಳಾಗುತ್ತವೆ. ನೀನು ಬೇಟೆಯಾಡುವುದನ್ನು ನಿಲ್ಲಿಸಿಬಿಡು. ಇವುಗಳನ್ನು ನಿನ್ನ ಮನಸ್ಸಿನಲ್ಲಿ ಧೃಡವಾದ ಪ್ರತಿಜ್ಞೆ ಮಾಡಿಕೋ. ಪ್ರತಿದಿನ ಭಕ್ತಿಭಾವಪೂರ್ವಕವಾಗಿ ಜಿನಭಗವಾನನ ಪೂಜೆಮಾಡು."

ಮುನಿಯ ಈ ಉಪದೇಶವನ್ನು ಕೇಳಿ ಆ ವನೇಚರನು, ಮಾನವೀಯ ಗುಣಗಳನ್ನು ನಾಶಮಾಡುವಂಥ ಮಧು ಮತ್ತು ಮಾಂಸದ ತ್ಯಾಗಮಾಡುವುದಾಗಿ ಪ್ರತಿಜ್ಞೆ ತೆಗೆದುಕೊಂಡನು. ಈ ರೀತಿಯಾಗಿ ನಿರಕ್ಷರಸ್ಥನಾದ ಶಬರನು ಜೀವದಯೆಯಲ್ಲಿ ತತ್ಪರನಾದನು. ಮತ್ತು ಜಿನಧರ್ಮದಲ್ಲಿ ತೊಡಗಿದನು. ಕಾಲವ್ಯತೀತವಾದ ಮೇಲೆ ಅವನು ಸತ್ತು ಮತ್ತೆ ಸೌಧರ್ಮ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

೪

## ಅಯೋಧ್ಯಾನಗರದ ರಾಜ ಭರತ ಚಕ್ರವರ್ತಿ

ಆ ಸ್ವರ್ಗದಲ್ಲಿ ದಿವ್ಯ ಭೋಗಗಳನ್ನು ಭೋಗಿಸಿ ಹಾಗೂ ಒಂದು ಸಾಗರೋಪಮ ಕಾಲ ಜೀವಂತವಾಗಿದ್ದು ಆ ಶಬರನು ಸ್ವರ್ಗದಿಂದ ಚ್ಯುತನಾದನು. ಆ ಸಮಯದಲ್ಲಿ ವಿಶಾಲ ಭಾರತ ವರ್ಷದಲ್ಲಿ ಕೋಸಲದೇಶ ಧನಧಾನ್ಯಗಳಿಂದ ಸಂಪನ್ನವಾಗಿದ್ದಿತು. ಅದರ ರಾಜಧಾನಿಯಾದ ಅಯೋಧ್ಯಾನಗರಿಯು ಮಯೂರಗಳ ಧ್ವನಿಯಿಂದ, ರಮಣೀಯವಾದ ನಂದನವನಗಳಿಂದ ಕಂಗೊಳಿಸುತ್ತಿತ್ತು. ಅದರ ನಾಲ್ಕೂ ಕಡೆ ಹಳ್ಳದ ಮಂಡಲವಿದ್ದಿತು. ಅದು ಯಾವಾಗಲೂ ನೀರಿನಿಂದ ತುಂಬಿರುತ್ತಿತ್ತು. ಇದರಿಂದಾಗಿ ಆ ನಗರ ಶತ್ರುಗಳಿಗೆ ದುರ್ಗಮವಾಗಿತ್ತು.

ಅಲ್ಲಿಯ ಸೌಧ ಸ್ವರ್ಣದಿಂದ ನಿರ್ಮಿತವಾಗಿದ್ದಿತು ಮತ್ತು ಮಣಿಗಳಿಂದ ತುಂಬಿದ್ದಿತು. ಅಲ್ಲಿಯ ನಾಗರೀಕ ಜನರು ಕೇವಲ ಶುಭ ಕೆಲಸಗಳನ್ನೇ ಮಾಡುತ್ತಿದ್ದರೇ ಹೊರತು ಅಶುಭ ಕೆಲಸಗಳನ್ನು ಅಲ್ಲ. ಅಲ್ಲಿಯ ತೋರಣ ದ್ವಾರಗಳು ಕಲ್ಪವೃಕ್ಷಗಳ ಚಿಗುರುಗಳಿಂದ ಸಂಶೋಭಿತವಾಗಿದ್ದುವು. ಅದು ವಿಚಿತ್ರ ವರ್ಣಗಳ ಏಳು ಪ್ರಾಕಾರಗಳಿಂದ ಸುರಕ್ಷಿತವಾಗಿದ್ದಿತು. ಅಲ್ಲಿಯ ಗವಾಕ್ಷಗಳು ಬಿಸಲಿನ ತಾಪದ ಝಳಕ್ಕೆ ಕಪ್ಪಾಗುತ್ತಿದ್ದುವು. ಅಲ್ಲಿಯ ಭೂಮಿಯ ಭಾಗವು ಇಂದ್ರನ ಮನಸ್ಸನ್ನು ಕೂಡ ರಂಜಿಸುವಷ್ಟು ಸುಂದರವಾಗಿದ್ದಿತು. ಈ ರೀತಿಯ ಆ ಅಯೋಧ್ಯಾನಗರಕ್ಕೆ ಋಷಭನಾಥನು ರಾಜನಾಗಿದ್ದನು. ಆತನ ಚರಣಕ್ಕೆ ದೇವೇಂದ್ರನೂ ನಮಸ್ಕರಿಸುತ್ತಿದ್ದನು. ಆತನು ದೀರ್ಘಕಾಲದವರೆಗೂ ರಾಜ್ಯವನ್ನಾಳಿದನು. ಆತನು ವಿಶುದ್ಧ ಜ್ಞಾನಧಾರಕ, ಶುಭಶಂಕರ, ಪ್ರಥಮ ನರೇಂದ್ರ, ಮತ್ತು ಪ್ರಥಮ ತೀರ್ಥಂಕರ. ಆತನೇ ಆದಿಬ್ರಹ್ಮ, ಮಹಾದೇವ ಮತ್ತು ಮಹಾವಿಷ್ಣು ಎಂದು ಕರೆಯಲ್ಪಟ್ಟನು. ಆತನು ಮೂರುಲೋಕಗಳ ಗುರು, ಹಾಗೂ ಮನೋರಥಗಳನ್ನು ಪೂರೈಸುವವನಾದನು. ಮುಂದೆ ಷಟ್ ಖಂಡ ಪೃಥ್ವಿಯ ಸಾಮ್ರಾಟನಾದ ಭರತೇಶ್ವರನು ಋಷಭನಾಥನ ಪ್ರಥಮ ಪುತ್ರನು.

ಆತನು ವೇತಾಢ್ಯ ಗಿರಿಯ ಮೇಲೆ ವಾಸಿಸುವ ಸುಂದರ ದೇಹಧಾರಿ ಮಾಗಧ ಪ್ರಭಾಸನೆಂಬ ಹೆಸರಿನ ದೇವತೆಯನ್ನೂ ಜಯಸಿದನು. ಆತನು ವಿದ್ಯಾಧರರ ಸ್ವಾಮಿ. ಆತನು ನಮಿ ಮತ್ತು ವಿನಮಿ ಎಂಬ ರಾಜರನ್ನು ಭಯದಿಂದ ಕಂಪಿಸುವ ಹಾಗೆ ಮಾಡಿ ಅವರಿಂದ ತನ್ನ ಸೇವೆಯನ್ನು ಮಾಡಿಸಿಕೊಂಡನು. ಎಳೆಯ ಜಿಂಕೆಯಂತೆ ಕಣ್ಣುಳ್ಳ ಲಕ್ಷ್ಮಿಯೂ ಕೂಡ ಆತನ ಸೇವೆ ಮಾಡುತ್ತಿದ್ದಳು. ಗಂಗಾ ಮತ್ತು ಸಿಂಧೂ ನದಿಗಳ ದೇವಿಯರು ಆತನಿಗೆ ಅಭಿಷೇಕ ಮಾಡುತ್ತಿದ್ದರು. ಹಾಗೂ ಹೊಸ ಕಮಲದಳಗಳ ಸದೃಶವಾದ ನೇತ್ರಗಳಿರುವ, ಉಪವನದಲ್ಲಿ ವಾಸಿಸುವ ಯಕ್ಷರೂ ಕೂಡ ನಾನಾ ಪ್ರಕಾರಗಳ ಪುಷ್ಪಗಳಿಂದ ಆತನ ಪೂಜೆ ಮಾಡುತ್ತಿದ್ದರು.

೫

## ಭರತ ಚಕ್ರವರ್ತಿಯ ರಾಣಿ ಅನಂತಮತಿಯು ಆ ಶಬರನ ಜೀವಕ್ಕೆ, ಮರೀಚಿ ಎಂಬ ಹೆಸರಿನ ಪುತ್ರನ ರೂಪದಲ್ಲಿ ಜನ್ಮಕೊಟ್ಟಳು.

ಭರತನ ರಾಣಿ ಅನಂತಮತಿಯು ಅತ್ಯಂತ ಸುಂದರಳಾಗಿದ್ದಳು. ಅವಳ ಕೈಗಳು ಕಂಕೇಲಿ ಹೂಗಳ ದಳಗಳಂತೆ ಕೋಮಲವಾಗಿದ್ದುವು ಹಾಗೂ ಆಕೆಯ ಸ್ವರವು ವೀಣೆ, ಹಂಸ, ಕೊಳಲು ಮತ್ತು ಕೋಗಿಲೆಯ ತರಹ ಮಧುರವಾಗಿದ್ದಿತು. ತುಂಗ ಪಯೋಧರವುಳ್ಳ ಆ ದೇವಿಯ ಗರ್ಭದಲ್ಲಿ ಕಾಡಿನ ಬೇಡನ ಜೀವವು ಬಂದು ಉತ್ಪನ್ನವಾಯಿತು. ಆ ಜೀವದ ಮೇಲೆ ದೇವಲೋಕದ ಸುಂದರಿಯರು ಚಾಮರ್ರವನ್ನು ಬೀಸುತ್ತಿದ್ದರು. ಆಕೆಯ ಆ ಪುತ್ರನು ಮರೀಚಿ ಎಂಬ ಹೆಸರಿನಿಂದ ವಿಖ್ಯಾತ ನಾದನು. ಅವನ ಶರೀರವು, ಅನೇಕ ಶುಭಲಕ್ಷಣಗಳಿಂದ ಅಲಂಕೃತವಾಗಿತ್ತು.

ಯಾವಾಗ ದೇವರ ದೇವ ಹಾಗೂ ಅತ್ಯಂತ ಜ್ಞಾನವಂತನಾದ ಅವನ ಪಿತಾ ಮಹನು (ಋಷಭನಾಥನು) ನೀಲಾಂಜನಾ ನರ್ತಕಿಯ ಮರಣದಿಂದ ವಿರಕ್ತನಾಗಿ ಪೃಥ್ವೀಮಂಡಲದ ರಾಜ್ಯವನ್ನು ತ್ಯಾಗಮಾಡಿ ದೀಕ್ಷಿತಮುನಿಯಾದನೋ, ಆಗ ಇಂದ್ರನೂ ಸಹ ಆತನ ಚರಣ ಕಮಲಗಳಿಗೆ ಪ್ರಣಾಮ ಮಾಡತೊಡಗಿದ. ಅದೇ ಸಮಯದಲ್ಲಿ, ಇಂದ್ರ ಮತ್ತು ಪ್ರತೀಂದ್ರ ಹಾಗೂ ಹರಿವಂಶ ಮತ್ತು ಕುರುವಂಶಗಳ ಕಚ್ಛಾದಿ ರಾಜರ ಸಹಿತ, ಆತನ ಮೊಮ್ಮಗ ಮರೀಚಿಯೂ ಸಹ ಧ್ಯಾನಮಗ್ನ ಅವಸ್ಥೆ ಯಲ್ಲಿದ್ದ ತನ್ನ ಪಿತಾಮಹನಿಗೆ ನಮಿಸಿದನು, ಮತ್ತು ಅವನು (ಮರೀಚಿಯು) ಅದೇ ಅವಸರದಲ್ಲಿ ಪ್ರವ್ರಜಿತನಾದನು. ಆದರೆ, ಅತಿ ಶೀಘ್ರದಲ್ಲೇ, ಆ ಭಗವಂತ ಋಷಭನಾಥನ ಕಠಿಣವಾದ ಮಹಾತಪಸ್ಸನ್ನು ಅ-ಸಹ್ಯವಾಗಿ ತಿಳಿದು ಅನೇಕ ಅನ್ಯದೀಕ್ಷಿತ ರಾಜರು ತಪಸ್ಸಿನಿಂದ ಭ್ರಷ್ಟರಾದರು.

ಆಗ ಮರೀಚಿಯೂ ಕೂಡ ತಪೋಭ್ರಷ್ಟನಾದ. ಅವನು ವಲ್ಕಲಧಾರಣೆ ಮಾಡತೊಡಗಿದ. ವೃಕ್ಷದ ಫಲಗಳನ್ನು ತಿನ್ನತೊಡಗಿದ. ಮತ್ತು ಮಿಥ್ಯಾ ದೃಷ್ಟಿ ಹೊಂದಿ, ಅಸತ್ಯವಾದ ಮಾತುಗಳ ಕಡೆ ದೃಷ್ಟಿ ಹರಿಸತೊಡಗಿದ. ಈ ರೀತಿಯಾಗಿ ನಾನಾ ಪ್ರಕಾರದ ಮಹಾನ್ ಪಾಪಗಳಿಂದ ಯುಕ್ತ ಮಿಥ್ಯಾತ್ವರೂಪಿ ಶಲ್ಯದ ಕಾರಣ ಆತನು ಅನೇಕ ಜನ್ಮಗಳಲ್ಲಿ, ಅನೇಕ ಪ್ರಕಾರವಾದ ಶರೀರಧಾರಣೆ ಮಾಡಿದ, ಮತ್ತು ಮರೀಚಿಯು ಭರತೇಶ್ವರನ ಮಗನಾಗಿಯೂ ಕೂಡ, ಮನಸ್ಸಿನಲ್ಲಿ ಸಂಶಯದ ಆಘಾತ ದಿಂದಾಗಿ ಚಿರಕಾಲದವರೆಗೆ ಸಂಸಾರದಲ್ಲಿ ಭ್ರಮಣ ಮಾಡುತ್ತಾ ಇದ್ದನು.

೬

ಮರೀಚಿಯ ಜೀವ, ಪುಷ್ಪೋತ್ತರ ನಾಮಾಕಿಂತ ಸ್ವರ್ಗದ ವಿಮಾನದಲ್ಲಿ ಬಂದು, ರಾಜ ಸಿದ್ಧಾರ್ಥ ಹಾಗೂ ರಾಣಿ ಪ್ರಿಯಕಾರಿಣಿಯರ ಪುತ್ರನಾಗಿ ಜನಿಸಿತು.

ಆ ಸ್ವರ್ಗದಲ್ಲಿ ದೇವರೂಪದಲ್ಲಿ ಇರುವಾಗ ಆತನು ಸಾವಿರ ವರ್ಷದಲ್ಲಿ ಒಂದು ಸಾರಿ ಆಹಾರ ಸೇವಿಸುತ್ತಿದ್ದನು, ಮತ್ತು ಅಷ್ಟೇ ಪಕ್ಷಗಳಲ್ಲಿ ಶ್ವಾಸೋಚ್ಛ್ವಾಸ ಮಾಡುತ್ತಿದ್ದನು. ಅಲ್ಲಿ ಸಮಸ್ತ ದುಃಖಗಳ ವಿನಾಶ. ಅಲ್ಲಿ ಆತನು ತನ್ನ ಅವಧಿ ದರ್ಶನದ ಮೂಲಕ ಪೃಥ್ವಿಯವರೆಗಿನ ವಿಷಯಗಳನ್ನು ತಿಳಿಯುತ್ತಿದ್ದನು. ಈ ಪ್ರಕಾರವಾಗಿ ಪರಮಾಗಮದಲ್ಲಿ ಹೇಳಿರುವ ಗುಣಗಳಿಂದ ಯುಕ್ತರಾಗಿ ದಿವ್ಯ ಪ್ರಮಾಣವುಳ್ಳವರಾಗಿ ಪುಷ್ಪೋತ್ತರ ವಿಮಾನದಲ್ಲಿ ಇದ್ದುಕೊಂಡು ತನ್ನ ಉತ್ಕೃಷ್ಟವಾದ ಆ ಆಯು ಪ್ರಮಾಣದ ಆರುಮಾಸಗಳಷ್ಟೇ ಇನ್ನು ಬಾಕಿ ಉಳಿದಿವೆ ಎನ್ನುವಾಗ ಸೌಧರ್ಮ ಸ್ವರ್ಗದ ಇಂದ್ರನು, ಜಗತ್ ಕಲ್ಯಾಣದ ಇಚ್ಛೆಯಿಂದ ಪ್ರೇರಿತನಾಗಿ ಕುಬೇರನಿಗೆ ಈ ರೀತಿ ಹೇಳಿದನು:

ಈ ಜಂಬೂ ದ್ವೀಪದ ಭರತಕ್ಷೇತ್ರದಲ್ಲಿ ವಿಶಾಲ ಶೋಭೆಯುಳ್ಳ ವಿದೇಹ ಪ್ರದೇಶದ ಕುಂಡಪುರ ನಗರದಲ್ಲಿ ರಾಜನಾದ ಸಿದ್ಧಾರ್ಥನು ರಾಜ್ಯ ನಡೆಸುತ್ತಿದ್ದಾನೆ. ಆತನು ಆತ್ಮ ಹಿತೈಷಿ, ಮತ್ತು ಶ್ರೀಧರನಾಗಿದ್ದರೂ ಸಹ ವಿಷ್ಣುವಿನಂತೆ ವಾಮನಾವತಾರ ಸಂಬಂಧದ ಯಾಚಕನ ರೂಪದಿಂದಲ್ಲ. ದುಃಖೀ ಜನರಿಗೆ ಆಶ್ಚರ್ಯ ಜನಕವಾದ ದಾನಕೊಟ್ಟು ಸುಖೀಜನರನ್ನಾಗಿ ಮಾಡುವಂತಹ ಶಂಭುವಾಗಿದ್ದಾನೆ; ಆದರೆ ಆತನು ಕಪಾಲಧಾರಣೆಮಾಡಿ ಕೌತುಕ ಉತ್ಪನ್ನಮಾಡುವ ರುದ್ರನಲ್ಲ. ಆತನು ಗುಣಗಳ ಸಮುದ್ರವಾದರೂಕೂಡ, ಸಮುದ್ರದಂತೆ ದೇವರಿಂದ ಮಥಿಸಲ್ಪಟ್ಟಿಲ್ಲ.

ಆತನು ಸಮರ ಶೂರನಾದರೂ ಕೂಡ ಕೇತುಗ್ರಹದಿಂದ ನುಂಗಲ್ಪಡುವ ಸೂರ್ಯನಲ್ಲ. ಆತನು ಧರ್ಮದಲ್ಲಿ ಆನಂದವನ್ನು ಕಾಣುತ್ತಾನೆ, ಮತ್ತು ಆನಂದ ಪೂರಿತವಾಗಿ ಧನುಸ್ಸನ್ನೂ ಧಾರಣೆ ಮಾಡುತ್ತಾನೆ. ಆದರೂ ಕೂಡ ಅವನು ತನ್ನ ಮನೆಯಿಂದ ನಿರ್ವಾಸಿತನಾಗಿ, ಧರ್ಮರಾಜ ಯುಧಿಷ್ಠರನ ಹಾಗೆ, ದೂರ ಹೋಗಲಿಲ್ಲ. ಆತನು ಒಳ್ಳೊಳ್ಳೆ ಮಲ್ಲರನ್ನೂ ಕೂಡ ಪರಾಜಿತರನ್ನಾಗಿ ಮಾಡಿದ ನರನಾಗಿದ್ದನು, ಆದರೆ ಆತನಿಗೆ ನರ ಅರ್ಥಾತ್ ಅರ್ಜುನನೋಪಾದಿಯಲ್ಲಿ ಬೃಹನ್ನಳಾ ಎಂಬ ನರ್ತಕಿಯ ವೇಷಾಧಾರಣೆ ಮಾಡಬೇಕಾಗಲಿಲ್ಲ. ಆತನು ತನ್ನ ಶತ್ರುರಾಜರ ಹೃದಯದಲ್ಲಿ ಭಯರೂಪಿಯಾದ ಶಲ್ಯವನ್ನು ಉತ್ಪನ್ನ ಮಾಡುತ್ತಿದ್ದನು. ಆತನ ರಾಜ್ಯದಲ್ಲಿ ಗ್ರಾಮಗಳು ಸಘನತೆಯಿಂದ ನೆಲೆಸಿದ್ದುವು. ಈ ಕಾರಣದಿಂದ ಅಲ್ಲಿ ಮೃಗಗಳು ನೆಲೆಸಲು ಸ್ಥಳವಿರಲಿಲ್ಲ. ಪೃಥ್ವಿಯ ಮೇಲೆ ಇಂದ್ರನೇ ಬಂದಿಳಿದಿರುವನೋ

ಎನ್ನುವ ಹಾಗೆ ಅವರ ಸರ್ವಾಂಗಗಳು ಪೂರ್ಣ ಮತ್ತು ಸುಂದರವಾಗಿದ್ದುವು. ಆತನು ಭುವನ ಮಂಡಲದ ಚಂದ್ರನಾಗಿದ್ದನು. ಆದರೆ ಚಂದ್ರನ ಹಾಗೆ ಅವರ ಅಂಗಗಳು ಖಂಡಿತವಾಗುತ್ತಿರಲಿಲ್ಲ.

ಅವನು ಯಾಚಕ ಜನರ ಆಸೆಗಳನ್ನು ಪೂರ್ಣಗೊಳಿಸುವ ಕಾಮಧೇನುವಾಗಿದ್ದರೂ ಸಹ ಕಾಮಧೇನುವಿನ ಹಾಗೆ ಪಶುವಿನ ಅವಸ್ಥೆಯಿಂದ ಮುಕ್ತನಾಗಿದ್ದನು. ಆತನು ಮನಸ್ಸಿನಲ್ಲಿ ಚಿಂತಿಸಲ್ಪಟ್ಟ ಅಭಿಲಾಷೆಗಳನ್ನು ಪೂರೈಸುವ ಚಿಂತಾಮಣಿಯಾಗಿದ್ದರೂ ಸಹ, ತನ್ನ ಮನಸ್ಸಿನಲ್ಲಿ ಚಿಂತೆಯಿಂದ ವಿಮುಕ್ತನಾಗಿದ್ದನು. ಆತನು ಕರ್ಣನ ಸಮಾನವಾಗಿ ನಿರಂತರ ದಾನಶೀಲ ಹಾಗೂ ಧನುರ್ವಿದ್ಯೆಯಲ್ಲಿ ಖ್ಯಾತಿ ಹೊಂದಿದ್ದರೂ ಕೂಡ ಕರ್ಣನ ರೀತಿ ತನ್ನ ಸಹೋದರ ಭ್ರಾತೃಗಳ ಶತ್ರುವಾಗಲಿಲ್ಲ. ಆತನ ಭುಜಗಳು ಎರಡೇ ಇದ್ದರೂ ಸಹ, ಯುದ್ಧದಲ್ಲಿ ಸಹಸ್ರ ಬಾಹುವಿನ ರೀತಿಯಲ್ಲಿ ವೀರತ್ವವನ್ನು ತೋರಿಸುತ್ತಿದ್ದನು. ಆತನು ಸುಧೀ ಅರ್ಥಾತ್ ವಿದ್ವಾಂಸರಿಗೆ ಜೀವನವನ್ನು ಪ್ರದಾನ ಮಾಡುತ್ತಿದ್ದನು. ಆದ್ದರಿಂದಲೇ ಆತನು ತನ್ನ ಮಿತ್ರರಿಗೋಸ್ಕರ ತನ್ನ ಜೀವನವನ್ನೇ ದಾನಮಾಡಿದ ಜೀಮೂತವಾಹನನ ಸಾಕ್ಷಾತ್ ರೂಪವಾಗಿದ್ದನು. ಆತನು ರಾಜಾಧಿರಾಜರ ದಾರಿದ್ರ್ಯವನ್ನು ದೂರಮಾಡುವ ಕಲ್ಪವೃಕ್ಷವಾಗಿದ್ದನು. ಆದರೂ ಕಲ್ಪವೃಕ್ಷದಂತೆ ಆತನು ಕಾಷ್ಠದ ಹಾಗೂ ಕಟುವಾದ ಸ್ವಭಾವಹೊಂದಿರಲಿಲ್ಲ.

ಇಂತಹ ಆ ಸಿದ್ಧಾರ್ಥ ರಾಜನ ರಾಣಿ ಪ್ರಿಯಕಾರಿಣೀದೇವಿ ಆಗಿದ್ದಳು. ಆಕೆಯು ವಿಶಾಲವಾದ ಆನೆಗಳ ಕುಂಭಸ್ಥಲದಂತೆ ಪೀನಪಯೋಧರೆಯಾಗಿ ಸಮಸ್ತ ನಾರೀಸಮಾಜದ ಚೂಡಾಮಣಿಯಾಗಿದ್ದಳು.

## ೭

## ಕುಂಡಪುರದ ಶೋಭೆ

ಇಂದ್ರನು ಕುಬೇರನಿಗೆ ಹೇಳುತ್ತಾನೆ-"ಹೇ, ಕಮಲ-ನಯನವುಳ್ಳ ಯಕ್ಷನೇ, ಇದೇ ರಾಜ ಸಿದ್ಧಾರ್ಥ ಮತ್ತು ರಾಣಿ ಪ್ರಿಯಕಾರಿಣಿಯರ ಶುಭಲಕ್ಷಣಗಳಿಂದ ಯುಕ್ತನಾದ, ಮದಿರಾದಿ ವ್ಯಸನಗಳ ತ್ಯಾಗಿ ಪುತ್ರನು ಇಪ್ಪತ್ನಾಲ್ಕನೆಯ ತೀರ್ಥಂಕರನಾಗುವನು. ಅವನ ಚರಣಗಳಿಗೆ ಇಂದ್ರನೂ ನಮಸ್ಕಾರ ಮಾಡುವನು. ಆದ್ದರಿಂದಲೇ, ಹೇ ಕುಬೇರನೇ, ಈ ಇಬ್ಬರ (ಸಿದ್ಧಾರ್ಥ-ಪ್ರಿಯಕಾರಿಣಿಯರ) ನಿವಾಸ ಭವನವನ್ನು ಸ್ವರ್ಣಮಯವನ್ನಾಗಿ, ಕಾಂತಿಯುಳ್ಳದ್ದಾಗಿ ಮತ್ತು ದೇವತೆಯರ ಲಕ್ಷ್ಮಿಗೆ ವಿಲಾಸ ಯೋಗ್ಯವನ್ನಾಗಿ ಮಾಡು."

ಇಂದ್ರನ ಆಜ್ಞೆಯಾನುಸಾರ ಕುಬೇರನು ಕುಂಡಪುರವನ್ನು ಇದೇ ರೀತಿ ಸುಂದರವಾಗಿ ಮಾಡಿದನು. ಅದರ ನಾಲ್ಕೂ ಕಡೆ ರತ್ನ ಜಟಿತ ಪ್ರಾಕಾರಗಳನ್ನು ನಿರ್ಮಿಸಿದನು. ಅದರ ಎಲ್ಲಾ ಕಡೆಗಳಲ್ಲೂ ನಾನಾ ಪ್ರಕಾರದ ದ್ವಾರಗಳಿದ್ದುವು.

ಮುತ್ತು ಅದರ ನಾಲ್ಕೂ ಕಡೆ ಶತ್ರುಗಳ ಸಂಚಾರಕ್ಕೆ ತಡೆಯುಂಟಾಗುವಂತೆ ಪರಿಖೆಯು ಇದ್ದಿತು. ಅಲ್ಲದೆ ನಗರದ ನಾಲ್ಕೂ ಕಡೆ ಹೂ ಹಣ್ಣುಗಳಿಂದ ಸುಸಜ್ಜಿತವಾದ ನಂದನವನಗಳಿದ್ದುವು. ಜತೆಗೆ ಅನೇಕ ಸ್ಥಾನಗಳಲ್ಲಿ ತರುಣಿಯರಿಗೋಸ್ಕರವಾಗಿ ಉತ್ತಮ ನೃತ್ಯ ಶಾಲೆಗಳಿದ್ದುವು. ಎಲ್ಲಾ ಕಡೆ ಧವಳ ಪ್ರಸಾದಗಳು ದೃಷ್ಟಿಗೋಚರ ವಾಗುತ್ತಿದ್ದುವು. ಅವುಗಳ ಶಿಖರಗಳು ಆಕಾಶದ ಅಂತಿಮ ಸೀಮೆಯನ್ನು ಮುಟ್ಟು ತ್ತಿದ್ದುವು. ಅವುಗಳ ಕೆಳಭಾಗದ ಭೂಮಿಯು ಸ್ಫಟಿಕ ಶಿಲೆಗಳಿಂದ ತುಂಬಿಸಲ್ಪಟ್ಟಿತ್ತು ಮುತ್ತು ಪ್ರತಿಯೊಂದು ಜಾಗವೂ ಕೇಶರ ರಸವನ್ನು ಚಿಮುಕಿಸಿದ್ದರಿಂದ ಒದ್ದೆ ಯಾಗಿದ್ದಿತು. ಎಲ್ಲಾ ಕಡೆ ಇಡಲ್ಪಟ್ಟ ಹೂಗಳು ವಿಚಿತ್ರ ಶೋಭೆಯನ್ನುಂಟು ಮಾಡಿದ್ದುವು. ಇವುಗಳ ಮಕರಂದವನ್ನು ಭ್ರಮರಗಳು ಹೀರುತ್ತಿದ್ದುವು. ಸಮಸ್ತ ಪ್ರದೇಶವು ಹೊಳೆಯುತ್ತಿದ್ದ ಬಂಗಾರದಿಂದ ಹಳದಿಯಾಗಿದ್ದಿತು. ಮತ್ತು ಎಲ್ಲಾ ಕಡೆ ಮುತ್ತುಗಳಿಂದ ರಚಿತವಾದ ರಂಗವಲ್ಲಿ ಕಾಣಿಸುತ್ತಿದ್ದಿತು. ಸಮಸ್ತ ಭವನವೂ ವೈಢೂರ್ಯ ಮಣಿಗಳಿಂದ ಹೊಳೆಯುತ್ತಿತ್ತು. ಚಂದ್ರಕಾಂತ ಮಣಿಗಳಿಂದ ನೀರು ಹರಿಯುತ್ತಿತ್ತು. ಸೂರ್ಯಕಾಂತ ಮಣಿಗಳಿಂದ ಜ್ವಾಲೆಯು ಪ್ರಜ್ವಲಿತವಾಗುತ್ತಿತ್ತು. ಅದರ ಮೇಲೆ ಹಾರುತ್ತಿದ್ದ ಧ್ವಜಗಳಿಂದ ಭವನವು ಚಲಿಸುತ್ತಿರುವ ಹಾಗೆ ದೃಷ್ಟಿ ಗೋಚರವಾಗುತ್ತಿತ್ತು. ಎಲ್ಲಾ ಕಡೆ ನಗಾರಿ ಮತ್ತು ಮೃದಂಗಗಳ ಧ್ವನಿಯು ಕೇಳಿಸುತ್ತಿತ್ತು. ಎಲ್ಲಾ ಕಡೆಯೂ, ನೃತ್ಯಶಾಲೆಗಳಲ್ಲಿ ಮತ್ತು ನಾಟಕಗಳೂ ನಡೆ ಯುತ್ತಿದ್ದುವು. ಕೆಲವೆಡೆಗಳಿಂದ ಸ್ತ್ರೀಯರ ಗೆಜ್ಜೆ-ನೂಪುರಗಳ ಮಧುರ ಧ್ವನಿ ಕೇಳಿ ಬರುತ್ತಿತ್ತು. ಎಲ್ಲಾ ಕಡೆ ಶಾಂತಿಯು ವ್ಯಾಪ್ತವಾಗಿದ್ದಿತು. ಎಲ್ಲೂ ದ್ವೇಷ ಮತ್ತು ಅಪರಾಧಗಳ ಹೆಸರೂ ಕೂಡ ಇರಲಿಲ್ಲ. ಈ ತರಹದ ಆ ರಾಜಭವನದ ಪ್ರಾಂಗಣ ದಲ್ಲಿ, ಅಂತಿಮ ತೀರ್ಥಂಕರನ ವಂದನೆ ಮಾಡುವ ಆ ಯಕ್ಷರ ರಾಜ ಕುಬೇರನು ಆರು ತಿಂಗಳುಗಳ ತನಕ ರತ್ನಗಳ ಮಳೆಗೆರೆದನು.

೮

## ಪ್ರಿಯಕಾರಿಣೀ ದೇವಿಯ ಸ್ವಪ್ನ

ಒಂದುದಿನ ಪ್ರಿಯಕಾರಿಣೀ ದೇವಿಯು ಪ್ರಾಸಾದದ ಸೌಧತಲದ (ಮೇಲಿನ ಉಪ್ಪರಿಗೆಯ) ಲ್ಲಿದ್ದ ಶಯನಾಲಯದಲ್ಲಿ ನಿದ್ರಿಸುತ್ತಿದ್ದಳು. ಆಕೆಗೆ ನಿದ್ರೆಯಲ್ಲಿ ಸಮಸ್ತ ದುಃಖಗಳನ್ನು ಅಪಹರಣ ಮಾಡುವ ಮತ್ತು ಸುಖದಾಯಿಯಾದ ಸ್ವಪ್ನಾ ವಳಿಯು ಕಾಣಿಸಿತು. ಆ ಸುರೇಂದ್ರನ ಅಪ್ಸರೆಗಳ ಸಮೂಹಗಳ ಮೂಲಕ ಹಾಗೂ ಸಮ್ಮಾನಿತ ಹಾಗೂ ಸಮಸ್ತ ವಾಂಛನೆಗಳನ್ನು ಸಿದ್ಧಮಾಡುವ ರಾಜ ಸಿದ್ಧಾರ್ಥನ ರಾಣಿ ಭಾವೀ ಜಿನೇಂದ್ರನ ಮಾತೆಯು ನಿಮ್ನ ಲಿಖಿತ ಹದಿನಾರು ಕನಸುಗಳನ್ನು ಕಂಡಳು.

೧. ಲೀಲಾಮತಿಯ ಗತಿಯಿಂದ ಚಲಿಸುತ್ತಿರುವ ಗಿರೀಂದ್ರದಂತೆ ಮದೋನ್ಮತ್ತ ಆನೆ
೨. ತೂಗಾಡುತ್ತಿರುವ ಗಂಗೆದೊಗಲಿನಿಂದ ಕೂಡಿದ ಮಹಾನ್ ವೃಷಭ
೩. ಭೀಷಣ ಸಿಂಹ
೪. ದಿವ್ಯ ಅಭಿಷೇಕಯುಕ್ತ ಲಕ್ಷ್ಮೀದೇವಿ
೫. ಉತ್ತಮವಾದ ಎರಡು ಪುಷ್ಪಮಾಲೆಗಳು
೬. ಅಂಧಕಾರವನ್ನು ದೂರ ಮಾಡುತ್ತಿರುವ ಚಂದ್ರ
೭. ಕಿರಣ ಜಾಲಾವಳಿಯಿಂದ ತೇಜಸ್ವಿಯಾದ ಸೂರ್ಯ
೮. ಸರೋವರದಲ್ಲಿ ಚಲಿಸುತ್ತಿರುವ ಎರಡು ಮೀನುಗಳು
೯. ಲೋಕ ಕಲ್ಯಾಣದ ಪ್ರತೀಕ ಹಾಗೂ ವಂದನೀಯವಾದ ಎರಡು ಕಲಶಗಳು.
೧೦. ಅರಳಿರುವ ಕಮಲಗಳ ಪಂಕ್ತಿಗಳಿಂದ ಕೂಡಿದ ಸರೋವರ
೧೧. ಉಕ್ಕುತ್ತಿರುವ ತರಂಗಗಳನ್ನು ನಿಯಂತ್ರಿಸುವ ಸಮುದ್ರ
೧೨. ಪ್ರಭೆಯಿಂದ ಉಜ್ವಲವಾಗಿರುವ ಸ್ವರ್ಣಮಯ ಸಿಂಹಾಸನ
೧೩. ವಿಲಾಸಗಳಿಂದ ಸಮೃದ್ಧವಾದ ಮಹಾನಾಗೇಂದ್ರನ ಪ್ರಾಸಾದ
೧೪. ಗಾಳಿಗೆ ಹಾರಾಡುತ್ತಿರುವ ಧ್ವಜಗಳ ಸಹಿತ ಉತ್ತಮ ಭಿತ್ತಿಗಳಿಂದ ಕೂಡಿದ ವಿಚಿತ್ರ, ಸುಂದರ ಮತ್ತು ಪವಿತ್ರ ಇಂದ್ರ ಭವನ
೧೫. ಪ್ರಭೆಯಿಂದ ಸ್ಫುರಾಯಮಾನವಾದ ಅತ್ಯಂತ ಶೋಭನೀಯ ಹಾಗೂ ಅಂಧಕಾರದ ಸಮೂಹವನ್ನು ದೂರಮಾಡುವ ಮಣಿಪುಂಜ
೧೬. ಜಾಜ್ವಲ್ಯಮಾನವಾದ ಅಗ್ನಿ

ತಮ್ಮ ನಿವಾಸ ಗೃಹದಲ್ಲಿ, ರಾತ್ರಿಯ ಅಂತಿಮ ಪ್ರಹರದಲ್ಲಿ ಈ ಷೋಡಶ ಸ್ವಪ್ನಗಳನ್ನು ನೋಡಿ ದೀರ್ಘ ನಯನವುಳ್ಳ ಮಹಾರಾಣಿ ಪ್ರಿಯಕಾರಿಣಿ ಎಚ್ಚೆತ್ತಳು. ಆಗ ಆಕೆ ರಾಜಾಧಿರಾಜನಾದ ಸಿದ್ಧಾರ್ಥನು ವಿರಾಜಮಾನವಾಗಿದ್ದಲ್ಲಿಗೆ ಹೋದಳು. ಆಕೆಯ ಚರಣಗಳಿಂದುಂಟಾದ ಘರ್ಷಣೆ ದೊಡ್ಡ ದೊಡ್ಡ ನರೇಶರ ಶಿರಗಳಲ್ಲಿನ ಚೂಡಾಮಣಿಗಳಿಂದ ಆಗುತ್ತಿತ್ತು. ಆತನನ್ನು (ಸಿದ್ಧಾರ್ಥನನ್ನು) ಅವನ ಪ್ರಿಯ ರಾಣಿ ಪ್ರಿಯಕಾರಿಣಿ ತನ್ನ ಸ್ವಪ್ನ ಫಲಗಳೇನೆಂದು ಕೇಳಿದಳು. ರಾಜನು ಅವುಗಳ ಫಲ ಶುಭವೂ ಶ್ರೇಷ್ಠವೂ ಆಗಿದೆಯೆಂದು ಹೇಳಿದನು. ಸಿದ್ಧಾರ್ಥನು ವಿಶೇಷವಾದ ಒಂದು ಮಾತನ್ನು ಹೇಳಿದನು. 'ನಿನಗೆ ಒಬ್ಬ ಪುತ್ರನಾಗುವನು, ಹಾಗೂ ಅವನು ಮಹಾದೇವತೆಗಳ ದೇವ, ಮಹಾನ್ ವೀತರಾಗ; ಅಭಿಮಾನದಿಂದ ಮುಕ್ತನೂ, ಮಹಾವೀರರ ವೀರನೂ, ಮಹಾಮೋಕ್ಷಗಾಮಿಯೂ. ತ್ರೈಲೋಕ್ಯಗಳಿಂದ ವಂದನೀಯನೂ ಮತ್ತು ತ್ರಿಲೋಕದ ಸ್ವಾಮಿಯೂ ಆಗುವನು'.

ರಾಜಾ ಸಿದ್ಧಾರ್ಥನ ಪ್ರಾಸಾದದ ಪ್ರಾಂಗಣದಲ್ಲಿ ಪ್ರಚುರ ರೂಪದಲ್ಲಿ ನಿರಂತರ ಧನದ ಧಾರಾವೃಷ್ಟಿ ಆಗುತ್ತಿರಲಿ ಎಂದು, ಇಂದ್ರನು ಕುಬೇರನಿಗೆ ಆದೇಶವಿತ್ತನು.

೬

## ಮಹಾವೀರ ತೀರ್ಥಂಕರನ ಗರ್ಭಾವತರಣ, ಜನ್ಮ ಹಾಗೂ ಮಂದರಾಚಲದ ಮೇಲೆ ಅಭಿಷೇಕ

ವಿಭ್ರಮ ಮತ್ತು ವಿಲಾಸದಿಂದ ಯುಕ್ತ ಬಾಲಹಂಸಚಾರಿಣೀ, ಕಂಕಣ ಹಾರ, ಕಟೀ ಸೂತ್ರ, ಕುಂಡಲ ಮತ್ತು ಮುಕುಟಧಾರಣೆ ಮಾಡಿಕೊಂಡಿರುವ ಚಂದ್ರ ಮತ್ತು ಸೂರ್ಯರ ಸದೃಶ ಕಾಂತಿಯುಕ್ತ ಹಾಗೂ ಕೀರ್ತಿಸಂಪನ್ನ ಕಮಲನಯನೆ ಪರಮೇಶ್ವರೀ ಶ್ರೀ ಹ್ರೀ ಲಕ್ಷ್ಮೀ ಧೃತಿ ಕೀರ್ತಿ ಮತ್ತು ಬುದ್ಧಿ—ಈ ದೇವಿಯರು ಸ್ವಯಂ ಬಂದು ಮಹಾರಾಣಿಯ ಗರ್ಭವನ್ನು ಶುದ್ಧಿ ಮಾಡಿದರು.

ಆಷಾಢಮಾಸದ ಚಂದ್ರನಿಂದ ಪ್ರಕಾಶಮಾನವಾದ, ಅಂಧಕಾರ ಸಮೂಹವನ್ನು ದೂರಮಾಡುವ ಶುಕ್ಲಪಕ್ಷದ ಆರನೆಯ ತಿಥಿಯ ದಿನ, ದಿಕ್ಕುಗಳು ನಿರ್ಮಲವಾಗಿದ್ದಾಗ ಸಂಸಾರದ ಸೇತುವೆಯಾದ ಭಗವಾನ್ ಮಹಾವೀರನು ಮಾತೆಯ ಗರ್ಭದಲ್ಲಿ ಬಂದು ಸ್ಥಿತನಾದನು. ಆಗಿನಿಂದ ನವಮಾಸದವರೆಗೆ, ಧರಣೇಂದ್ರ ಯಕ್ಷನು ಆನಂದದಾಯೀ ಸ್ವರ್ಣ ವೃಷ್ಟಿಯನ್ನು ಮಾಡುತ್ತಾ ಇದ್ದನು. ಚಿತ್ರಾ ನಕ್ಷತ್ರಯುಕ್ತ ಚೈತ್ರ ಮಾಸದ ಆಗಮನವಾದಾಗ, ಶುಕ್ಲಪಕ್ಷದ ತ್ರಯೋದಶಿಯ ದಿನ ಆ ಸತಿಯು, ಸ್ವರ್ಣಕಾಂತಿ ಯುಕ್ತವಾದ ಶರೀರವುಳ್ಳ, ಭುವನನಾಥನಾದ ಜಿನೇಂದ್ರನಿಗೆ ಜನ್ಮ ಕೊಟ್ಟಳು. ಅಂದಿಗೆ, ಪಾಪರೂಪಿ ಅಂಧಕಾರವನ್ನು ನಷ್ಟ ಮಾಡಲು ಚಂದ್ರನಿಗೆ ಸಮಾನನಾದ ಲಕ್ಷ್ಮೀನಾಥ ಶ್ರೀ ಪಾರ್ಶ್ವನಾಥ ಜಿನೇಂದ್ರನಿಗೆ ನಿರ್ವಾಣ ಪ್ರಾಪ್ತವಾಗಿ ಇನ್ನೂರೈವತ್ತು ವರ್ಷಗಳಾಗಿದ್ದುವು. ಆಗ ಆ ಶರೀರ ಕಾಂತಿಯುಕ್ತ ಜನ್ಮ ಜರಾಮರಣ ಅತೀತ ವ್ಯಾಧಿಗಳನ್ನು ದೂರಮಾಡುವ, ಜಗತ್ತಿನ ತಿಲಕ ಪ್ರಾಯನಾದ ಶ್ರೀವರ್ಧಮಾನ ಜಿನೇಂದ್ರನು ತನ್ನ ಆಯುಸ್ಸನ್ನು ಕಟ್ಟಿಕೊಂಡು ಹುಟ್ಟಿದನು. ಅನಂತರ ಸುರೇಂದ್ರನು ಜಿನೇಂದ್ರಶಿಶುವನ್ನು ಮಂದರ ಪರ್ವತದ ಶಿಖರದ ಮೇಲೆ ತೆಗೆದುಕೊಂಡು ಹೋಗಿ, ಪೂರ್ಣ ಚಂದ್ರನ ಕಾಂತಿಯನ್ನು ಸೋಲಿಸುವ ಕಲಶಗಳ ಮೂಲ ಕ್ಷೀರೋದಧಿಯ ಜಲದಿಂದ ಆವನಿಗೆ ಅಭಿಷೇಕ ಮಾಡಿದನು.

೧೦

## ಭಗವಾನನ ನಾಮಕರಣ, ಸ್ವಭಾವ ವರ್ಣನೆ ಬಾಲಕ್ರೀಡೆ ಹಾಗೂ ದೇವರ ಮೂಲಕ ಪರೀಕ್ಷೆ

ಅಭಿಷೇಕದ ನಂತರ ಆ ದೇವೇಂದ್ರನು ಮಣಿಮಯ ಮಾಲೆಗಳ ಮೂಲಕ, ತ್ರೈಲೋಕ್ಯಗಳಲ್ಲಿ ಪೂಜಿತನಾದಂಥವನನ್ನು ಪೂಜೆಮಾಡಿದನು. ಭಗವಾನನ ಸ್ವಯಂ ಭುವನ ಭೂಷಣ ರೂಪಕ್ಕೆ ಆ ಭೂಷಣಗಳಿಂದ ವಿಭೂಷಿತನನ್ನಾಗಿ ಮಾಡಿದನು, ಹಾಗೂ ಮಿಥ್ಯಾಮತಗಳಲ್ಲಿ ದೂಷಣೆ ತೋರಿಸುವಂಥವನಿಗೆ ನಾನಾ ಪ್ರಕಾರದ ಕ್ರಿಯಾಕಲಾಪಸಹಿತ ಸ್ತುತಿ ಮಾಡಿದನು. ಆತನಿಗೆ ವರ್ಧಮಾನನೆಂದು ಹೆಸರು ಇಡಲ್ಪಟ್ಟಿತ್ತು. ಆತನನ್ನು ಯಾವುದರೊಡನೆ ಹೋಲಿಸಲಿ ಎಂದು ಕವಿಯು ಪ್ರಶ್ನಿಸುತ್ತಾ; ಸಮುದ್ರದೊಡನೆ ಹೋಲಿಸೋಣವೆಂದರೆ ಇಂತಹ ಗಂಭೀರತೆಯುಳ್ಳವನ ಮುಂದೆ ಕಡಲು ಗಂಭೀರವಾಗಿ ಕಾಣುವುದಿಲ್ಲ' ಎಂದು ಭಾವಿಸುತ್ತಾನೆ. ಅಂತಹ ಅನುಪಮ ಗಂಭೀರತೆ ವರ್ಧಮಾನನಲ್ಲಿ ವ್ಯಕ್ತವಾಗುತ್ತಿತ್ತು. ಪೃಥ್ವಿ ಮತ್ತು ಸುಮೇರು ಪರ್ವತವನ್ನು ಸ್ಥಿರವೆಂದು ಹೇಳಲಾಗದಂತಹ ಸ್ಥಿರತೆ ಮತ್ತು ಧೀರತೆ ಆತನಲ್ಲಿತ್ತು. ಆತನನ್ನು ನೋಡಿ ಚಂದ್ರನ ಕಾಂತಿ 'ನನಗಿಂತಲೂ ಆತ ಕಾಂತಿವಂತನಾಗಿದ್ದಾನೆ' ಎಂದು ಅಂದುಕೊಳ್ಳುವಂತಾಯಿತು; ಸೂರ್ಯನೂ ಸಹ 'ನನಗಿಂತಲೂ ಆತ ತೇಜೋಮಯನಾಗಿದ್ದಾನೆ' ಎಂದು ಭಾವಿಸಿಕೊಳ್ಳುವಂತಾಯಿತು. ಅಷ್ಟು ಕಾಂತಿ ಮತ್ತು ತೇಜಸ್ವಿಯಾದ ಆತನು ಮಾಧ್ಯಸ್ತಭಾವದಿಂದ ಯುಕ್ತ ಹಾಗೂ ಶುಭಶುಕ್ಲಲೇಶ್ಯನಾಗಿದ್ದನು. ಸ್ವಯಂ ಧರ್ಮವೇ ಮನುಷ್ಯನ ರೂಪಧಾರಣೆ ಮಾಡಿಕೊಂಡುಬಂದು ಉಪಸ್ಥಿತವಾದ ಹಾಗೆ ಆತನು ಕಾಣುತ್ತಿದ್ದನು.

ಸಂಜಯ ಮತ್ತು ವಿಜಯರೆಂಬ, ಚಾರಣಋದ್ಧಿಧಾರಿಯಾದ ದೇವತೆಗಳು ಪರಮೋಪದೇಶ ರೂಪವಾಣಿಯನ್ನು ತಿಳಿದುಕೊಂಡೇ, ಆತನನ್ನು ಶೈಶವಾವಸ್ಥೆಯ ಕಾಲದಲ್ಲಿ ನೋಡೇ, ಆತನನ್ನು ದೇವರ ದೇವ ತೀರ್ಥಂಕರನೆಂದು ಅರಿತರು, ಮತ್ತು ಆ ಕ್ಷಣವೇ ಅವರಿಗೆ ಉಂಟಾಗಿದ್ದ ಭೀಷಣ ಸಂದೇಹದ ಕಾರಣವೂ ದೂರವಾಯಿತು. ಸಂಯಮಧಾರಿಯಾದ ಮುನಿಗಳು ಅತ್ಯಂತ ವಿನೀತಭಾವದಿಂದ ಆತನಿಗೆ ಪ್ರದಕ್ಷಿಣೆ ಮಾಡಿದರು. ಆತನನ್ನು ಸನ್ಮತಿ ಎಂದು ಕರೆದರು. ಆತನಿಗೆ ಅಭಿಷೇಕಜಲದಿಂದ ಮಂದರ ಪರ್ವತವನ್ನು ತೊಳೆಯುವ ಪುರಂದರನು ಆತನನ್ನು ನಿರ್ಭಯನೆಂದು ಕರೆದನು.

ದೇವತೆಗಳ ಸಭೆಯಲ್ಲಿ ಅವನ ಇಂಥ ಪ್ರಶಂಸೆಗಳನ್ನು ಕೇಳಿ, ಸಂಗಮನೆಂಬ ಒಬ್ಬ ದೇವತೆಯು ಆತನನ್ನು ಪರೀಕ್ಷೆಗೆ ಒಳಗುಮಾಡಲು ಬಯಸಿದನು. ಅವನು ಭಯಂಕರ ಸರ್ಪದ ರೂಪಧಾರಣೆ ಮಾಡಿದನು. ಕುಮಾರ ವೀರನು ಆಟವಾಡುತ್ತಿದ್ದ

ಕುಂಡಪುರದ ನಂದನವನಕ್ಕೆ ಬಂದನು. ಆತನು ಕ್ರೀಡೆಯಲ್ಲಿ ತೊಡಗಿದ್ದ ಮರದ ನಾಲ್ಕು ಕಡೆಗಳಿಂದ ಸರ್ಪವು ಸುತ್ತುವರಿಯಿತು. ಇದನ್ನು ನೋಡಿ, ಆತನ ಜೊತೆಯಲ್ಲಿ ಆಟವಾಡುತ್ತಿದ್ದ ಮಿಕ್ಕ ಸಹಚರಿ ಮಕ್ಕಳೆಲ್ಲ ದಿಕ್ಕಾಪಾಲಾಗಿ ಓಡಿಹೋದರು. ಆದರೆ ಆ ತ್ರಿಜಗತ್ತಿನ ಬಂಧುವು ಅಲ್ಲೇ ಅಚಲವಾಗಿ ನಿಂತನು. ಆ ಶ್ರೀ ವರ್ಧಮಾನನು ನಿರ್ವಾಕುಲ ಮತ್ತು ಅಚಲನಾಗಿ ಆ ಭಯಂಕರ ಸರ್ಪದ ಫಣಿಯ ಮೇಲೆ ಇದ್ದ ಮಣಿಯನ್ನು ಸ್ಪರ್ಶ ಮಾಡತೊಡಗಿದನು. ಆತನು ಹಾವಿನ ಹೆಡೆ ಮತ್ತು ಮುಖದ ದಾಡೆಗಳನ್ನು ತನ್ನ ಕರಗಳಿಂದ ಸ್ಪರ್ಶಮಾಡಲು ಸ್ವಲ್ಪವೂ ಶಂಕಿತನಾಗಲಿಲ್ಲ. ಇದನ್ನು ನೋಡಿ ದೇವತೆಯು ಆತನ ಪೂಜೆ ಮಾಡಿದನು ಮತ್ತು ಆತನನ್ನು ವೀರನಾಥ ಎಂಬುದಾಗಿ ಕರೆದನು.

೧೧

## ಭಗವಂತನಿಗೆ ಮುನಿದೀಕ್ಷೆ

ಕುಮಾರ ಕಾಲದಿಂದಲೇ ಯಾರ ದರ್ಶನ ಮಾಡಿದ ಮಾತ್ರದಿಂದಲೇ ಶತ್ರುವು ತನ್ನ ದ್ವೇಷಭಾವವನ್ನು ಬಿಡುತ್ತಿದ್ದನೋ ಅಂತಹ ಕುಮಾರ ಕಾಲ ಪ್ರವೃತ್ತಿಯಲ್ಲಿನ ಮುವ್ವತ್ತು ವರ್ಷಗಳು ಕಳೆದುವು. ಈಗ ಆತನ ಶರೀರದ ಪ್ರಮಾಣ ಪೂರ್ಣ ಏಳು ಕೈಗಳಷ್ಟು ಆಗಿದ್ದಿತು. ಆತನು ಕಾಮ ಭಾವನೆಗಳಿಗೆ ವಶೀಭೂತನಾಗದೆ ಕಾಮದೇವನನ್ನು ಜಯಿಸಿದ್ದನು. ಆಗ ಲೋಕಾಂತಿಕ ದೇವತೆಗಳು ಬಂದು ಆತನನ್ನು ಸಂಬೋಧಿಸಿದರು ಮತ್ತು ಕೈಗಳನ್ನು ಜೋಡಿಸಿ ಆತನಿಗೆ ವೈರಾಗ್ಯ ಭಾವವನ್ನು ಉಂಟುಮಾಡಿದರು. ಮತ್ತೆ ಉತ್ತಮವಾದ ಚಾಮರಗಳಿಂದ ವ್ಯಜನ ಮಾಡುತ್ತಾ ಸಮಸ್ತ ದೇವತೆಗಳು ಆತನಿಗೆ ಅಭಿಷೇಕ ಮಾಡಿದರು. ಮತ್ತೆ ಭಗವಾನ್ ಚಂದನ ಪ್ರಭೆಯಿಂದ ಯುಕ್ತವಾದ ಪಲ್ಲಕ್ಕಿಯ ಮೇಲೆ ವಿರಾಜಮಾನನಾಗಿ ಜ್ಞಾತೃಷಂಡವನವನ್ನು ತಲುಪಿದನು. ಅಲ್ಲಿ ಆ ಪಾಪಹಾರಿ ಪರಮೇಶ್ವರನು ಮಾರ್ಗಶೀರ್ಷ ಕೃಷ್ಣ ಪಕ್ಷ ದಶಮಿಯ ದಿನ ಯಾವಾಗ ದೇವತೆಗಳ ಮಹೋತ್ಸವವು ನಡೆಯುತ್ತಿದ್ದಿತೋ, ಮತ್ತು ಚಂದ್ರಮನು ಉತ್ತರಾ ಫಾಲ್ಗುನೀ ಮತ್ತು ಹಸ್ತಾ ನಕ್ಷತ್ರಗಳ ಮಧ್ಯೆ ಸ್ಥಿತನಾಗಿದ್ದನೋ ಆಗ ಚಾರಿತ್ರಾವರಣ ಕರ್ಮರೂಪಿ ಮಲವನ್ನು ದೂರಮಾಡಿ ಉಪವಾಸ ಸಹಿತ ತಪಶ್ಚರಣವನ್ನು ಗ್ರಹಣ ಮಾಡಿದನು. ಆಗ ಅವನು ಕೇಶತ್ಯಾಗ (ಲುಂಚನ) ಮಾಡಿದನು. ಇಂದ್ರನು ಆ ಕೇಶವನ್ನು ಒಂದು ಮಣಿಮಯ ಬಟ್ಟಲಲ್ಲಿ ತೆಗೆದುಕೊಂಡು ಕ್ಷೀರೋದಧಿಯಲ್ಲಿ ವಿಸರ್ಜಿಸಿದನು. ಈ ರೀತಿಯಾಗಿ ಆ ಮುನೀಂದ್ರ ಪರಮೇಷ್ಠಿಯು ಸಂಯಮಗ್ರಹಣಮಾಡಿ ಆಸೀನನಾದನು. ಭಾರತವರ್ಷದ ಸಮಸ್ತ ಜನತೆಯು ಆತನ ಸ್ತುತಿಮಾಡಿತು. ಕವಿ ಪುಷ್ಪದಂತನೂ ಕೂಡ ಆತನ ಚರಣಗಳಿಗೆ ವಂದಿಸುತ್ತಾನೆ.

ಇತಿ ವೀರಜಿನೇಂದ್ರನ ಗರ್ಭಾವತರಣ
ಜನ್ಮ ಮತ್ತು ತಪಸ್ಸಿನ ವಿಷಯ ಪ್ರಥಮ ಸಂಧಿ
ಸಮಾಪ್ತ

# ಸಂಧಿ ೨

## ಕೇವಲ ಜ್ಞಾನೋತ್ಪತ್ತಿ

### ಕೂಲಗ್ರಾಮದಲ್ಲಿ ಭಗವಂತನ ಆಹಾರದಾನ

ದೇವರ ದೇವನಾದ ಭಗವಾನ್ ಮಹಾವೀರನು ಸ್ಥಿರಚಿತ್ತ ಹಾಗೂ ಮನಃಪರ್ಯಯಜ್ಞಾನಯುಕ್ತನಾಗಿ ಆ ಕೂಲಗ್ರಾಮ ಎಂಬ ಹೆಸರಿನ ಪುರವನ್ನು ತಲುಪಿದನು. ಅಲ್ಲಿಯ ನಿವಾಸ ಗೃಹಗಳು, ತಾರೆಗಳು ಮತ್ತು ಹಾರಗಳಂತೆ ಉಜ್ವಲವಾಗಿ ದೃಷ್ಟಿಗೆ ಗೋಚರವಾಗುತ್ತಿದ್ದುವು. ಅಲ್ಲಿ ಆ ಪರಮೇಶ್ವರನು ಭಿಕ್ಷೆಗೆಂದು ಪ್ರವೇಶ ಮಾಡಿದನು. ಬಹಳ ಸೌಮ್ಯಭಾವದಿಂದ ಒಂದು ಮನೆಯಿಂದ ಮತ್ತೊಂದು ಮನೆಯ ಕಡೆಗೆ ಹೋಗತೊಡಗಿದನು. ಆತನು ತನ್ನ ಮನಃಪರ್ಯಯ ಜ್ಞಾನರೂಪಿ ನೇತ್ರಗಳಿಂದಲೇ ತನ್ನ ಸುತ್ತಮುತ್ತಲಿನ ಜನಗಳ ಮನಸ್ಸನ್ನು ತಿಳಿದುಕೊಳ್ಳುತ್ತಿದ್ದನು.

ಆತನು ಅಲ್ಲಿಯ ರಾಜನಾದ ಕೂಲನ ಗೃಹಪ್ರಾಂಗಣದಲ್ಲಿ ಕಾಣಿಸಿಕೊಂಡನು. ಪ್ರಿಯಂಗುವರ್ಣದಿಂದ ಉಜ್ವಲನಾದ ಆ ನರೇಶನು ಕೈ ಜೋಡಿಸಿ ಆತನಿಗೆ ಪ್ರಣಾಮ ಮಾಡಿದನು. ಆ ಭುವನನಾಥನು ಅಲ್ಲಿ ಉಳಿದುಕೊಂಡನು. ರಾಜನು ಆತನನ್ನು ಮುನಿಯೋಗ್ಯವಾದ ನವಕೋಟಿ ಶುದ್ಧವಾದ ಆಹಾರವನ್ನಿತ್ತನು. ಯಾವಾಗ ಭಗವಂತನು ಆಹಾರ ತೆಗೆದುಕೊಂಡು ಆಚೆಗೆ ಹೊರಟನೋ ಆಗ, ಆತನು ಯಾವ ಭೂಮಿ ಭಾಗದ ಮೇಲೆ ಆಹಾರ ತೆಗೆದುಕೊಂಡಿದ್ದನೋ ಆ ಭಾಗ ರತ್ನಗಳಿಂದ ಪರಿಪೂರ್ಣವಾಗಿಹೋಯಿತು. ದೇವತೆಗಳು ಜಯಧ್ವನಿಯನ್ನು ಮಾಡುತ್ತಾ ತುತ್ತೂರಿಯನ್ನು ಊದಿದರು. ಆಕಾಶದಿಂದ ಹೂಗಳ ಸುರಿಮಳೆ ಮಾಡಿದರು. 'ಅಹೋ, ಇದು ದೊಡ್ಡ ಸುಂದರ ದಾನ' ಎಂದು ದೇವತೆಗಳು ಘೋಷಿಸಿದರು. ಆ ಸಮಯದಲ್ಲಿ ಅತಿ ಸುಗಂಧಯುಕ್ತವಾದ ಮಳೆ ಸುರಿಯಿತು. ಮಂದ ಮತ್ತು ಶೀತಲವಾದ ಗಾಳಿ ಪ್ರವಹಿಸಿತು. ಆ ಅನೇಕ ಗುಣಗಳ ನಿವಾಸವಾದ ರಾಜನಿಗೆ ಜನಗಳು ವಂದಿಸಿದರು.

ಇಲ್ಲಿ ಭಗವಾನ್ ಮಹಾವೀರನು ತನ್ನ ದುಷ್ಕರ್ಮಗಳನ್ನು ನಾಶಮಾಡುತ್ತಾ ಆ ಪುರದ ಸಮೀಪದಲ್ಲಿನ ಭೀಷಣ ನಿರ್ಜನ ವನದಲ್ಲಿ ದಿನಗಳನ್ನು ಕಳೆಯತೊಡಗಿದನು. ಆತನು ಜಿನಕಲ್ಪ ಚರಿತೆಯಿಂದ ತನ್ನ ಚರ್ಯೆ ನಡೆಸುತ್ತಿದ್ದನು. ಯಾರು ಆತನ ಪ್ರಾಣಹರಣಮಾಡುವ ಇಚ್ಛೆಯಿಂದ ಅವನ ಹತ್ತಿರ ಬರುತ್ತಿದ್ದರೋ ಆವ

ರಿಗೂ ಸಹ ಸಮಭಾವವನ್ನು ಉಳ್ಳವನಾಗಿದ್ದನು. ಯಾವ ವನದಲ್ಲಿ ನಾಯಿ, ಸಿಂಹ, ತೋಳ, ಮತ್ತು ಹುಲಿಗಳು ಗರ್ಜಿಸುತ್ತ ನಾಲ್ಕೂ ಕಡೆ ಸಂಚರಿಸುತ್ತಿದ್ದವೋ ಅಂತಹ ವನದಲ್ಲಿ ಆತನು ರಾತ್ರಿಪೂರ್ತಿ ಯಾವುದೋ ಸ್ಥಿರ ಸ್ತಂಭವೋ ಎನ್ನುವಂತೆ ಧ್ಯಾನಮಗ್ನನಾಗಿರುತ್ತಿದ್ದನು.

೨

## ಉಜ್ಜೈನಿಯಲ್ಲಿ ರುದ್ರನ ಮೂಲಕ ಭಗವಾನನ ಪರೀಕ್ಷೆ

ಭಗವಾನನು ತನ್ನ ಶರೀರದ ಸಂಸ್ಕಾರದ ಯಾವ ಕ್ರಿಯೆಯನ್ನೂ ಮಾಡುತ್ತಿರಲಿಲ್ಲ. ಆತನು ದೊಡ್ಡ ದೊಡ್ಡ ಪರೀಷಹಗಳನ್ನು ಸಹ ಸಹಿಸುತ್ತಿದ್ದನು. ಧೈರ್ಯವನ್ನು ಬಿಡುತ್ತಿರಲಿಲ್ಲ. ತನ್ನ ಬೆಳೆಯುತ್ತಿರುವ ಕೇಶದ ಜಟೆಗಳಿಂದ ಆವರಿಸಲ್ಪಟ್ಟ ಆತನು, ಅನೇಕ ಸರ್ಪರೂಪಿ ಮಾಲೆಗಳಿಂದ ಸುತ್ತುವರಿಯಲ್ಪಟ್ಟ ಚಂದನ ವೃಕ್ಷವೋ ಎನ್ನುವ ಹಾಗೆ ಕಾಣಿಸುತ್ತಿದ್ದನು.

ಒಂದು ದಿನ ಉಜ್ಜೈನಿಯ ಭಯಂಕರ ಸ್ಮಶಾನದಲ್ಲಿ ಅಂಧಕಾರದಿಂದ ಕರ್‍ರಗಿನ ಭೀಷಣ ರಾತ್ರಿಯ ಸಮಯದಲ್ಲಿ ಆತನು, ಸಿದ್ಧರೂಪಿ ಮಹಿಳೆಯ ಪ್ರಿಯಪತಿ, ಪ್ರತಿಮಾಯೋಗಸ್ಥಿತನಾಗಿದ್ದನು. ಆಗ ಆ ಅವಸ್ಥೆಯಲ್ಲಿ ಜನರ ಜನನ ಮರಣರೂಪಿ ವ್ಯಾಧಿಯ ಹರಣ ಮಾಡುವ ಪರಮ ಶ್ರೇಷ್ಠ ಯೋಗೀಶ್ವರನನ್ನು ರುದ್ರನು ನೋಡಿದನು. "ನೋಡೋಣ, ಈತನು ಉಪಸರ್ಗ ಮಾಡುವುದರಿಂದ ತ್ರಸ್ತನಾಗುವನೋ ಮತ್ತು ತನ್ನ ಚರಿತ್ರರೂಪಿ ಗಿರೀಂದ್ರದಿಂದ ಕೆಳಕ್ಕೆ ಬೀಳುವನೋ; ಇವನು ದರ್ಶನ ಧಾರಣ ಮಾಡುವ ಪ್ರಿಯಕಾರಿಣಿ ದೇವಿಯ ಪುತ್ರ ಜಿನೇಂದ್ರನೋ ಅಲ್ಲವೋ" ಎಂದು ರುದ್ರನು ವಿಚಾರ ಮಾಡಿದನು. ಈ ರೀತಿ ವಿಚಾರ ಮಾಡಿ ಆ ಜೇಷ್ಠಾಪುತ್ರ ರುದ್ರನು ಕೆಂಪು ಕಣ್ಣುಗಳು, ವಕ್ರವಾದ ಹುಬ್ಬುಗಳು ಮತ್ತು ಭೀಷಣವಾದ ಮುಖ ಮಾಡಿಕೊಂಡು, ಕಾಲ-ಕಂಕಾಲಧಾರೀ ಭೇತಾಳನಾಗಿ ತನ್ನ ಕೈಗಳಲ್ಲಿ ಖಡ್ಗ, ಶೂಲ ಮುಂತಾದ ಆಯುಧಗಳನ್ನು ಹಿಡಿದಿದ್ದನು.

ಅವನ ಕೇಶಗಳು ಪಿಂಗಳ ವರ್ಣದ್ದಾಗಿ ಎದ್ದು ನಿಂತಿದ್ದವು. ಉಗುರುಗಳು ತುಂಬಾ ಉದ್ದವಾಗಿದ್ದುವು. ಅವು ತಮ್ಮ ಕಿಲಕಿಲಾಹಟದ ಧ್ವನಿಯಿಂದ ಭುವನರೂಪೀ ಗೃಹವನ್ನು ಕಿವುಡಾಗಿ ಮಾಡುತ್ತಿದ್ದವು. ರುದ್ರನ ಪ್ರೇರಣೆಯಿಂದ ಆ ಸಹಚರರೆಲ್ಲರೂ ಭಗವಂತನ ಕಡೆ ಓಡಿದರು. ಸಿಂಹವೂ ಆತನ ಮೇಲೆ ಹಾರಿತು. ಭೀಷಣ ವಿಷಧಾರಿಸರ್ಪವೂ ಆತನ ಕಡೆ ಫೂತ್ಕರಿಸುತ್ತಾ ಧಾವಿಸಿತು. ಇದರ ವ್ಯತಿರಿಕ್ತವಾಗಿ ಆ ರುದ್ರಹರನು ಕೇವಲ ಭುವನ ಮಾತ್ರದ ಸಂಹಾರ ಮಾಡುವುದರಲ್ಲಿ ಸಮರ್ಥನಾಗಿದ್ದನು. ತನ್ನ ವಿದ್ಯೆಯ ಮೂಲಕ ಭೀಷಣವಾದ ಮೇಘಗಳನ್ನು ತೋರಿಸಿದ ಮತ್ತು ಘೋರ ಜಲವೃಷ್ಟಿ ಮಾಡಿದ.

೩

## ರುದ್ರನ ಉಪಸರ್ಗ ವಿಫಲವಾಯಿತು

ರುದ್ರನು ಸಮಸ್ತ ವನಚರರ ಮೂಲಕ ಕ್ಷೋಭೆಯನ್ನು ಉಂಟುಮಾಡಿದನು. ಧಗಧಗಿಸುವ ಅಗ್ನಿಯನ್ನು ಉರಿಸಿದನು. ಅಲ್ಲದೆ ನಾನಾ ಪ್ರಕಾರದ ದೇವ, ಇಂದ್ರ, ಮತ್ತು ಚಂದ್ರರ ದರ್ಪವನ್ನು ಚೂರು ಚೂರು ಮಾಡುವವೋ ಎಂಬಂಥ ಅಸ್ತ್ರಶಸ್ತ್ರಗಳನ್ನೂ ಸಹ ಬಿಟ್ಟನು.

ಆದರೆ ಈ ರುದ್ರನ ಉಪಸರ್ಗಗಳೆಲ್ಲವೂ, ಜಿಪುಣನ ಮನೆಗೆ ದೀನ ಜನರು ಹೋಗಿ ವಿಫಲರಾಗೇ ವಾಪಸ್ಸಾಗುವ ರೀತಿ ವಿಫಲವಾದುವು. ಆಗ ಆ ಸಾತ್ಯಕೀ ಪುತ್ರ ರುದ್ರನು ಪಾರ್ವತಿಗೆ ಹೇಳಿದನು–

'ಹೇ ಪ್ರಫುಲ್ಲ ಕಮಲಮುಖೀ, ಗಿರಿವರಪುತ್ರಿ ಪಾರ್ವತೀ, ಈ ವೀರನ ವೀರತೆ, ಲೇಶಮಾತ್ರವೂ ಚಲಿಸದೆ ಇರುವುದನ್ನು ನೋಡು ! ಸುಮೇರು ಪರ್ವತವು ಎಲ್ಲಾದರೂ ಜರುಗಬಲ್ಲುದೆ ?'

ಹೀಗೆಂದು ಹೇಳಿ, ಆ ಇಬ್ಬರೂ ಭಗವಂತನಿಗೆ ವಂದಿಸಿ, ತಮ್ಮ ವೃಷಭದ ಮೇಲೆ ಆರೂಢರಾಗಿ ತಮ್ಮ ರತಿರಸದಲ್ಲಿ ಅನುರಕ್ತರಾಗುತ್ತಾ ಅಲ್ಲಿಂದ ಹೊರಟು ಹೋದರು.

ಅಲ್ಲಿ, ಚೇತಕ ರಾಜನ ಲತೆಯಂತೆ ಕೋಮಲ ಭುಜಗಳನ್ನು ಹೊಂದಿರುವ, ಕಮಲ ಮುಖಿ ಚಂದನಳೆಂಬ ಹೆಸರಿನ ಪುತ್ರಿಯು ತನ್ನ ನಗರದ ನಂದನವನದಲ್ಲಿ ಆಟವಾಡುತ್ತಿದ್ದಳು. ಆಗ ಕಾಮವಾಸನೆಯಿಂದ ಪ್ರೇರಿತನಾಗಿ ಒಬ್ಬ ವಿದ್ಯಾಧರನು ಅವಳನ್ನು ಸದ್ದಿಲ್ಲದೆ ಅಪಹರಿಸಿದನು. ಇದರಿಂದ ಅವಳ ತಂದೆ ತಾಯಿಯರು ಸಖಿಯರು ಹಾಗೂ ಒಡನಾಡಿಗಳಿಗೆ ಅಪಹರಣದ ಸುಳಿವೇ ಸಿಗಲಿಲ್ಲ. ಆ ವಿದ್ಯಾಧರನು ಅವಳನ್ನು ಸದ್ದಿಲ್ಲದೆ ಅಪಹರಿಸಿದನು. ಆ ವಿದ್ಯಾಧರನು ಅವಳನ್ನು ಅಪಹರಿಸಿಕೊಂಡು ಹೋದರೂ, ಮಾರ್ಗ ಮಧ್ಯದಲ್ಲಿ ತನ್ನ ಗೃಹಿಣಿಯ ಕ್ರೋಧದ ಆಶಂಕೆಯಿಂದ ಭಯಭೀತನಾಗಿ ಅವನು ಅವಳನ್ನು ವನದಲ್ಲೇ ಬಿಟ್ಟುಬಿಟ್ಟನು.

೪

## ಕೌಶಾಂಬಿಯಲ್ಲಿ, ಚಂದನಕುಮಾರಿಯ ಮೂಲಕ, ಭಗವಾನನ ದರ್ಶನ

ತನ್ನ ಬಂಧುವರ್ಗದಿಂದ ಬೇರ್ಪಟ್ಟು ಮತ್ತು ಆ ವನದಲ್ಲಿ ತನ್ನನ್ನು ಏಕಾಂಗಿಯಾಗಿ ಕಂಡು ಚಂದನಳಿಗೆ ಬಹಳ ದುಃಖವಾಯಿತು. ಅದೇ ಸಮಯದಲ್ಲಿ ಆ ಹಂಸಗಾಮಿನಿಯನ್ನು ಒಬ್ಬ ಧನದತ್ತನೆಂಬ ವ್ಯಾಧನು ನೋಡಿದನು. ಅವನು ತನ್ನ ಜತೆಯಲ್ಲಿ ಕರೆದುಕೊಂಡು ಹೋಗಿ ಆ ನಗರದ ಶ್ರೇಷ್ಠ ಧನಿಕನಾದ ವೃಷಭದತ್ತನೆಂಬ

ವಣಿಕನಿಗೆ ಒಪ್ಪಿಸಿದ. ವಣಿಕನು ಆ ಸತಿಯನ್ನು ತನ್ನ ಮನೆಯಲ್ಲಿ ಇಟ್ಟುಕೊಂಡನು. ಆದರೆ ಅವಳು ಸೌಂದರ್ಯದಲ್ಲಿ ಸಾಕ್ಷಾತ್ ರತಿಯೇ ಆಗಿದ್ದಳು.

ಆದುದರಿಂದ ಆ ವಣಿಕನ ಪತ್ನಿಯಾದ ಸುಭದ್ರಾ ಎಂಬುವಳು, ಪ್ರತಿಕೂಲ ವಾದ ಭಾವನೆಗಳಿಂದ ಪ್ರೇರಿತಳಾಗಿ, ಒಂದು ಪಕ್ಷ ನನ್ನ ಪತಿ ಈ ಕುಮಾರಿಯ ಮೇಲೆ ಆಸಕ್ತನಾಗಿಬಿಟ್ಟ ಎಂದರೆ ಮತ್ತೆ ನನಗೆ ಈ ಮನೆ ದುಷ್ಕರವಾಗಿ ಬಿಡು ವುದು ಎಂದು ಯೋಚಿಸಿದಳು. ಆದುದರಿಂದ, ಕುತ್ಸಿತ ಭೋಜನದ ಮೂಲಕ ಇವಳ ಯೌವನದ ಜೊತೆಯಲ್ಲಿ ಇವಳ ಸೌಂದರ್ಯವನ್ನೂ ನಷ್ಟ ಮಾಡುವುದೇ ಒಳ್ಳೆಯದು ಎಂದು ವಿಚಾರ ಮಾಡಿದ ಆ ಸ್ತ್ರೀಯು ರೋಷಕ್ಕೆ ವಶಳಾಗಿ ಅವಳ (ಚಂದನಳ) ಮೇಲೆ ಭೀಷಣವಾದ ದುರ್ವಚನ ರೂಪದ ಚಾಟಿಯೇಟಿನಿಂದ ಪ್ರಹಾರ ಮಾಡಲಾರಂಭಿಸಿದಳು. ಅವಳು ನಿತ್ಯವೂ ಒಂದು ಪಾತ್ರೆ ತುಂಬ ರಸವಿಹೀನ ಬಗ್ಗಡದ ಅನ್ನ ಗಂಜಿಯ ಜೊತೆ ಉಣ್ಣಲು ಕೊಡುತ್ತಿದ್ದಳು.

ಈ ಮಧ್ಯೆ ರುದ್ರನ ಅತ್ಯಂತ ಭಯಂಕರ ಹಾಗೂ ಭೀಷಣ ಪಾಪಭಾವದಿಂದ ಪ್ರೇರಿತನಾಗಿ ಮಾಡಲ್ಪಟ್ಟ ಉಪಸರ್ಗಗಳನ್ನು ಸಹಿಸಿಕೊಂಡು, ಶತ್ರುಮಿತ್ರ ಹಾಗೂ ಜೀವನ ಮತ್ತು ಮರಣ-ಮುಂತಾದ ದ್ವಂದ್ವಗಳಲ್ಲಿ ಸಮತಾಭಾವವಿಟ್ಟಿದ್ದ ಆ ಭಗವಾನ್ ಮಹಾವೀರನು ಒಂದು ದಿನ, ಉದ್ಧಾರ ಭಾವನೆಯನ್ನಿಟ್ಟುಕೊಂಡು, ಮತ್ತು ಜೀವನದ ವಿಚಿತ್ರ ಗತಿಗಳನ್ನು ಅರಿಯುತ್ತಾ, ಆಹಾರದ ನಿಮಿತ್ತ ಕೌಶಾಂಬಿ ಪುರವನ್ನು ಪ್ರವೇಶಿಸಿದನು.

ಆಗ ಶೃಂಖಲೆಯಿಂದ ಬಂಧಿಸಲ್ಪಟ್ಟಿದ್ದ ಆ ದುಃಖೀ ಚೇಟಕ ರಾಜನ ಮಗಳು ಪೌರರಿಂದ ಮುಕ್ತಳಾಗಿ ಭಗವಾನನ ಸಮ್ಮುಖ ಬಂದು ಆತನಿಗೆ ಪ್ರಣಾಮಗಳನ್ನು ಸಲ್ಲಿಸಿದಳು.

೫೭

## ಭಗವಂತನಿಗೆ ಚಂದನಾಳ ಮೂಲಕ ಆಹಾರದಾನ

ಚಂದನಾಳು ಕೆಳತರಗತಿಯ ಸಣ್ಣ ಧಾನ್ಯದ ಅನ್ನವನ್ನು ಮಜ್ಜಿಗೆಯಲ್ಲಿ ಮಿಶ್ರ ಮಾಡಿ ಬಟ್ಟಲಲ್ಲಿ ಇಟ್ಟುಕೊಂಡು ಮುನಿರಾಜನ (ಮಹಾವೀರನ) ಕರಗಳಲ್ಲಿ ಇಟ್ಟಳು. ಭಗವಾನನು ಅದನ್ನು ದೃಷ್ಟಿಯಿಟ್ಟು ನೋಡಿದಾಗ ಅದು ಹದಿನೆಂಟು ಪ್ರಕಾರದ ಸ್ವಾದಿಷ್ಟ ಮತ್ತು ನಾನಾ ರಸಗಳಿಂದ ಯುಕ್ತವಾದ ಭೋಜನವಾಯಿತು.

ಚಂದನಾಳು ಭಗವಾನನಿಗೆ ಕೊಟ್ಟ ಆ ಆಹಾರ ದಾನದ ಪ್ರಭಾವದಿಂದಾಗಿ ಅವಳ ಜೀವನಗತಿಯಲ್ಲಿ ಅಡ್ಡ ಬರುತ್ತಿದ್ದ, ಲೋಹದಿಂದ ಮಾಡಿದ ಆ ಸಂಕೋಲೆಗಳು ಮುರಿದುಬಿದ್ದುವು. ಇದರಿಂದ ಸಜ್ಜನರ ಅಂತಃಕರಣ ಮತ್ತು ನೇತ್ರಗಳಿಗೆ ವಿಶೇಷ ಆನಂದವಾಯಿತು. ದೇವರುಗಳು ಭ್ರಮರಗಳ ಮುಖದಿಂದ ಪ್ರೇರಿತ ಝುಂಕಾರ

ಯುಕ್ತ ಮಂದಾರ ಪುಷ್ಪಗಳ ಮಳೆಯನ್ನು ಸುರಿಸಿದರು. ಅವರು ನಾನಾ ವರ್ಣಗಳಿಂದ ವಿಚಿತ್ರ ಹಾಗೂ ತನ್ನ ಹರಡುತ್ತಿರುವ ಕಿರಣಗಳಿಂದ ಸ್ಫುರಾಯಮಾನವಾದ ರತ್ನಗಳ ವೃಷ್ಟಿಯನ್ನು ಮಾಡಿದರು, ದುಂದುಭಿಯನ್ನು ಬಾರಿಸಿದರು, ಹಾಗೂ 'ಸಾಧು ಸಾದು' ಎಂಬುದಾಗಿ ಉಚ್ಚಾರಣಗೈದರು.

ಗುಣೀ ಜನಗಳ ಸಂಸರ್ಗದಿಂದ ಯಾರಿಗೆತಾನೆ ಉಲ್ಲಾಸವಾಗುವುದಿಲ್ಲ? ವಿದ್ವಾಂಸರು ಆ ಕನ್ಯೆಯ ಗುಣಗಳ ಸ್ತುತಿ ಮಾಡಿದರು. ಆ ಸಮಯದಲ್ಲಿ ಅವಳಿಗೆ ಅವಳ ತಾಯಿ ತಂದೆ ಬಂಧು ಬಾಂಧವರ ಜೊತೆ ಸಂಯೋಗವೂ ಆಗಿಹೋಯಿತು.

ಸನ್ಮತಿ ಭಗವಾನನು ದುಷ್ಕರ್ಮಿಗಳ ನಾಶಮಾಡುತ್ತಾ, ಹನ್ನೆರಡು ವರ್ಷಗಳ ತನಕ ತಪವನ್ನಾಚರಿಸಿದನು. ತನ್ನ ಆ ಚಂದನಾಳೆಂಬ ತಂಗಿಯ ಅಹಿಂಸೆ ಮತ್ತು ಕ್ಷಮಾ ಭಾವಗಳ ಘೋಷಣೆ ಮಾಡುತ್ತಾ, ಪ್ರಥ್ವಿಯಮೇಲೆ ವಿಹಾರ ಮಾಡುತ್ತ ಆ ಭಗವಾನನು ಋಷಿರಾಜ ಜುಂಭಿಕಾ ಎಂಬ ಹೆಸರಿನ ಗ್ರಾಮದ ಅತಿ ವಿಕೃತ ಋಜುಕೂಲಾ ನದಿಯ ದಡದಲ್ಲಿರುವ ಮಯೂರ, ಶುಕ ಮತ್ತು ಸಾರಸಗಳು ಕ್ರೀಡಿಸುತ್ತಿದ್ದ ಮನೋಹರವಾದ ಉದ್ಯಾನವನದಲ್ಲಿ ಸಾಲವೃಕ್ಷದ ಮೂಲದಲ್ಲಿ ಇಟ್ಟದ್ದ ರತ್ನಶಿಲೆಯ ಮೇಲೆ ವಿರಾಜಮಾನನಾದನು.

೬

## ಭಗವಾನನಿಗೆ ಕೇವಲ ಜ್ಞಾನ ಉತ್ಪತ್ತಿ

ಪಾಪದ ಹರಣ ಮಾಡುವವನು ಷಷ್ಠೋಪವಾಸ ಮಾಡುತ್ತಾ ಹಾಗೂ ಹದಿಮೂರು ತರಹದ ಚರಿತ್ರೆಯ ಪಾಲನೆ ಮಾಡುತ್ತಾ ಭಗವಾನನು ತನ್ನ ತಪದಲ್ಲಿ ಲೀನನಾಗಿ ಇರತೊಡಗಿದನು.

ಆ ಮೇಲೆ ವೈಶಾಖಮಾಸದ ಶುಕ್ಲಪಕ್ಷದ ದಶಮ ತಿಥಿಯ ಅಪರಾಹ್ನದಲ್ಲಿ ಚಂದ್ರನು ಹಸ್ತ ಮತ್ತು ಉತ್ತರಾ ಫಾಲ್ಗುಣೀ ನಕ್ಷತ್ರಗಳ ಮಧ್ಯದಲ್ಲಿ ಸ್ಥಿತನಾಗಿದ್ದಾಗ ಭಗವಾನನಿಗೆ ಕೇವಲ ಜ್ಞಾನರೂಪೀ ಲಕ್ಷ್ಮಿಯ ಪ್ರಾಪ್ತಿಯಾಯಿತು. ಅವನ ಸಘನ ಘಾತಿಕರ್ಮಗಳು ವಿನಷ್ಟವಾದುವು. ಆ ಸಮಯದಲ್ಲಿ ಮೂರೂ ಲೋಕಗಳಲ್ಲಿ ಜಾಗೃತಿ ಉತ್ಪನ್ನವಾಯಿತು. ಘಂಟೆಗಳ, ನಗಾರಿಗಳ, ಹಾಗೂ ಶಂಖಗಳ ಧ್ವನಿ ಹಾಗೂ ಸಿಂಹನಾದ ಮಾಡುತ್ತಾ ಅಸಂಖ್ಯ ದೇವತೆಗಳು ಬಂದು ಉಪಸ್ಥಿತರಾದರು. ಅವರು ಮಹಾವೀರ ಭಗವಂತನಿಗೆ ವಂದಿಸಿದರು.

ಇಂದ್ರನೂ ಸಹ ಅವನ ಚರಣಯುಗಳಕ್ಕೆ ನಮಿಸಿದನು. ಮತ್ತೆ ಅವರು ಸಮವಸರಣದ ರಚನೆ ಮಾಡಿದರು. ಅದರ ಮಧ್ಯದಲ್ಲಿ ಕಾಮುವನ್ನು ದೂರಮಾಡುವ

ಹಾಗೂ ಭುವನದ ಜನರ ಆಶ್ರಯಭೂತ ಭಗವಾನನು ವಿರಾಜಮಾನನಾದನು. ಗೌತಮಗಣಧರ ರಾಜನು ಶ್ರೇಣಿಕನಿಗೆ ಹೇಳಿದನು—

• 'ಹೇ ಶ್ರೇಣಿಕನೇ, ಆ ಸಮಯದಲ್ಲಿ ಇಂದ್ರನು ಪ್ರಸನ್ನಮುಖಿಯಾಗಿ, ದ್ವಿಜ ಪ್ರಮುಖನಾದ ನನ್ನನ್ನು ಇಲ್ಲಿಗೆ ಕರೆತಂದನು. ಆಗ ನನ್ನ ಬುದ್ಧಿಯೂ ಸಂಶಯ ದಿಂದ ಭ್ರಾಂತವಾಗಿತ್ತು. ಆದ್ದರಿಂದ ನಾನು ಜಿನೇಂದ್ರನಿಗೆ ಜೀವದ ಗತಿಯ ವಿಷಯವಾಗಿ ಪ್ರಶ್ನೆ ಮಾಡಿದೆನು. ಭಗವಾನನು ನನ್ನ ಸಂಶಯವನ್ನು ದೂರಮಾಡಿನು. ಆಗ ನಾನು ನನ್ನ ಪಾಡಿಗೆ ನಾನೇ ಮುನಿದೀಕ್ಷೆಯಿಂದ ವಿಭೂಷಿತನಾದೆ. ನನ್ನ ಜೊತೆಯ ಐನೂರು ಜನ ದ್ವಿಜರೂ ಪ್ರವ್ರಜ್ಯ (ಸನ್ಯಾಸ)ವನ್ನು ತೆಗೆದುಕೊಂಡು ಶ್ರಮಣರಾದರು. ಅದಾದ ಮೇಲೆ, ಶ್ರಾವಣಮಾಸದ ಕೃಷ್ಣಪಕ್ಷದ ಪ್ರತಿಪದೆಯ ದಿವಸ ಬಂದಮೇಲೆ, ನನಗೆ ನಾಲ್ಕು ಪ್ರಕಾರದ ಬುದ್ಧಿ ಹಾಗೂ ಏಳೂ ಋಷಿ-ಋದ್ಧಿಗಳೂ ಸಹ ಉತ್ಪನ್ನವಾದುವು.

೭

## ಭಗವಾನನ ಇಂದ್ರಭೂತಿ-ಗೌತಮ ಮುಂತಾದ ಹನ್ನೊಂದುಮಂದಿ ಗಣಧರರು

ಮಹಾಜ್ಞಾನಿ ಹಾಗೂ ವಿಭೂತಿಯುಕ್ತ ಇಂದ್ರಭೂತಿ ಗೌತಮನು ಭಗವಾನ ಮಹಾವೀರನ ಶ್ರೇಷ್ಠಗಣಧರನಾದನು. ಎರಡನೆಯ ವಾಯುಭೂತಿ, ಮೂರನೆಯ ಅಗ್ನಿಭೂತಿ, ನಾಲ್ಕನೆಯ ಸುಧರ್ಮಮುನೀಂದ್ರರು ತಮ್ಮ ಕುಲರೂಪೀ ಆಕಾಶದ ಚಂದ್ರರಾಗಿದ್ದರು; ಅನಿಂದ್ಯ, ನರವಂದ್ಯ ಹಾಗೂ ಚಾರಿತ್ರ್ಯದಲ್ಲಿ ಕುಶಲರಾಗಿದ್ದರು. ಐದನೆಯ ಋಷಿ ಮೌರ್ಯ, ಆರನೆಯ ಮುಣ್ಡಿ (ಮೌಣ್ಯ), ಏಳನೆಯ ಸುತ (ಪುತ್ರ)ರು ಇಂದ್ರಿಯಾಸಕ್ತಿರಹಿತರೂ ಹಾಗೂ ವೀರಭಗವಾನನ ಚರಣಕಮಲಗಳ ಭಕ್ತ ರಾಗಿದ್ದರು.

ಎಂಟನೆಯ ಮೈತ್ರೇಯನು ಮಹಾತಪದಿಂದ ಶೋಭಾಯಮಾನನಾಗಿ ಇಂದ್ರಿಯಜಿತನೂ ಶುಕ್ಲಧ್ಯಾನಿಯೂ ಪವಿತ್ರಚಿತ್ತನೂ ಆಗಿದ್ದನು. ಒಂಬತ್ತನೆಯ ಅಕಂಪನನು ಯಾವಾಗಲೂ ತಪಸ್ಸಿನಲ್ಲಿ ಆಕಂಪನಾಗಿರುತ್ತಿದ್ದನು. ಹತ್ತನೆಯ ಅಚಲ ಮತ್ತು ಹನ್ನೊಂದನೆಯ ಪ್ರಭಾಸರು ದೇಹದ ಅನುರಾಗರಹಿತರೂ ಹಾಗೂ ಕಾಮದೇವನ ವಿನಾಶಕರೂ ಆಗಿದ್ದರು. ಜಿನೇಂದ್ರ ಭಗವಾನರ ಈ ಹನ್ನೊಂದು ಗಣಧರ ಮುನಿಗಳು ಶಲ್ಯರಹಿತರೂ ಮಹಾತ್ಮರೂ ಆಗಿದ್ದರು.

ಇವರ ಹೊರತು ಭಗವಂತನಿಗೆ ಸಮಸ್ತ ಪೂರ್ವಪರ ಮತ್ತು ಅಂಗಗಳ ಜ್ಞಾತರೂ ಸುಪ್ರಸಿದ್ಧರೂ, ಅವ್ರತಗಳ ತ್ಯಾಗಿಗಳೂ ಅರ್ಥಾತ್ ಮಹಾವ್ರತಿಗಳೂ ಆದಂಥ ಮೂನ್ನೂರು (೩೦೦) ಜನ ಶಿಷ್ಯರಿದ್ದರು. ಭಗವಾನನಿಗೆ ಸರ್ವಅವಧಿಜ್ಞಾನ

ವೆಂಬ ಕಣ್ಣು ತೆರೆದಂತಹ ಅರ್ಥಾತ್ ಸರ್ವಾವಧಿಜ್ಞಾನವುಳ್ಳ ಒಂಬೈನೂರು (೯೦೦) ಜನ ಶಿಷ್ಯರಿದ್ದರು. ಭಗವಾನನ ಸಂಘದಲ್ಲಿ ಮೋಹ ಮತ್ತು ಲೋಭದ ತ್ಯಾಗಿಗಳಾದ, ಕ್ಷಮೆ ಮತ್ತು ದಮ ಇತ್ಯಾದಿ ಗುಣಗಳಿಂದ ಕಲಂಕೃತರಾದ ಸಾವಿರದ ಮುನ್ನೂರು (೧೩೦೦) ಮುನಿಗಳೂ ಇದ್ದರು.

ಅ

## ಮುನಿಸಂಘ ಸಹಿತವಾಗಿ ವಿಪುಲಾಚಲ ಪರ್ವತದ ಮೇಲೆ ಭಗವಾನನ ಆಗಮನ

ಭಗವಾನನ ಸಂಘದಲ್ಲಿ ಅಯ್ನೂರು ಚತುರ್ಥಜ್ಞಾನಧಾರಿ, ಅರ್ಥಾತ್ ಮನಃ ಪರ್ಯಯಜ್ಞಾನಿಗಳೂ ಹಾಗೂ ಏಳುಜನ ಕೇವಲ ಜ್ಞಾನಿ ಮುನಿಗಳೂ ಸಹ ಇದ್ದರು.

ದ್ವಿಜ, ಸುಗತ (ಬುದ್ಧ) ಕಪಿಲ ಮತ್ತು ಹರ (ಶಿವ)-ಈ ಸಿದ್ಧಾಂತಗಳನ್ನು ಖಂಡಿಸಲು ಸಮರ್ಥರಾದಂಥ ನಾಲ್ಕುನೂರು (೪೦೦) ಶ್ರೇಷ್ಠರಾದ ಮುನಿಗಳಿದ್ದರು. ಈ ಮುನಿಗಳ ಹೊರತಾಗಿ ಸಂಘದಲ್ಲಿ ಮುವತ್ತಾರು ಸಾವಿರ (೩೬,೦೦೦) ಸಂಯಮಿನಿ ಅರ್ಥಾತ್ ಅರ್ಜಿಕರು (ಕಂತಿಯರು), ಒಂದು ಲಕ್ಷ ಗೃಹಸ್ಥ ಶ್ರಾವಕರು ಹಾಗೂ ಮೂರುಲಕ್ಷ ಮಹಿಳಾ ಶ್ರಾವಕರೂ ಇದ್ದರು. ದೇವತೆ ಮತ್ತು ದೇವಿಯರ ಸಂಖ್ಯೆಯೋ ಅಸಂಖ್ಯವಾಗಿತ್ತು. ಆ ಪರಮೇಷ್ಠಿ ದೇವನ ಜೊತೆ ಸಂಖ್ಯೇಯ ತಿರ್ಯಂಚರೂ ಇದ್ದರು. ಇವರು ಜೊತೆಯಲ್ಲಿ ಇದ್ದುಕೊಂಡು ಸುಖದ ಅನುಭವ ಪಡೆಯುತ್ತಿದ್ದರು.

ಈ ವಿಶಾಲ ಚತುರ್ವಿಧ ಸಂಘಸಹಿತ ಹಾಗೂ ನಾನಾ ವಿಭೂತಿಗಳ ಮೂಲಕ ದೇವತೆಗಳಿಗೂ ಅನುರಾಗ ಉತ್ಪನ್ನ ಮಾಡುತ್ತಾ ಭಗವಾನನು ಅನೇಕ ಗ್ರಾಮಗಳು ಹಾಗೂ ನಗರಗಳಲ್ಲಿ ವಿಹರಿಸಿದನು. ಭವ್ಯ ಜೀವಗಳ ವಿಶಾಲ ಸಮುದಾಯವನ್ನು ಸಂಬೋಧಿಸಿ, ಸಂಯಕ್ ದರ್ಶನರೂಪಿಯಾದ ಜಲದಿಂದ ಅವರ ಮಿಥ್ಯಾತ್ವವೆಂಬ ಮಲವನ್ನು ತೊಳೆದು ಹಾಕಿದನು. ಆ ತ್ರಿಭುವನ ನಾಥನು ವಸುಧೆಯ ಮೇಲೆ ವಿಹರಿಸುತ್ತಾ ಹಾಗೂ ಕಾಮವ್ಯಸನವನ್ನು ದೂರುಮಾಡುತ್ತಾ, ರಾಜಗೃಹದ ಸಮೀಪ, ವಿಪುಲಾಚಲವೆಂಬ ಪರ್ವತವನ್ನು ತಲಪಿದನು.

### ಗೌತಮಸ್ವಾಮಿಯು ರಾಜನಾದ ಶ್ರೇಣಿಕನಿಗೆ ಹೇಳುತ್ತಾನೆ-

ಹೇ ಶ್ರೇಣಿಕನೇ, ನೀನು ವಿಪುಲಾಚಲದ ಮೇಲೆ ಬಂದು, ಆ ದುಃಖವಿನಾಶಕನಾದ ತೀರ್ಥಂಕರ ಭಗವಾನ್ ಮಹಾವೀರನ ವಂದನೆ ಮಾಡಿರುವೆ, ನೀನು ಮಹಾ ಪುರಾಣ ಸಂಬಂಧವಾದ ಪ್ರಶ್ನೆಯನ್ನು ಮಾಡಿರುವೆ ಮತ್ತು ಅದಕ್ಕೆ ಉತ್ತರವಾಗಿ ನಾನು ನಿನಗೆ ಸಮಸ್ತ ಪುರಾಣವನ್ನು ಹೇಳಿ ತಿಳಿಸಿದ್ದೇನೆ.

ಗೌತಮಗಣಧರೆನ ಆ ಭಾಷಣವನ್ನು ಕೇಳಿ ಭಾರತದೇಶವೆಲ್ಲವೂ ಆನಂದದಿಂದ ವಿಭೂಷಿತವಾಯಿತು. ನಾಗ–ಮನುಷ್ಯ–ಹಾಗೂ ಯೋಗೇಶ್ವರರೆಲ್ಲರ ಸಂಬೋಧನೆಯಾಯಿತು.

ಎಂದು ಕವಿ ಪುಷ್ಪದಂತನು ಹೇಳುತ್ತಾನೆ

ಇತಿ

ವೀರಜಿನೇಂದ್ರ ಚರಿತದಲ್ಲಿ ಕೇವಲ ಜ್ಞಾನೋತ್ಪತ್ತಿ
ವಿಷಯಕ್ಕೆ ಸಂಬಂಧಿಸಿದ ದ್ವಿತೀಯ ಸಂಧಿ
ಸಮಾಪ್ತ

[ಇದು ಮಹಾಪುರಾಣ ಸಂಧಿ ೯೭ ರಿಂದ ಸಂಕಲಿತ]

# ಸಂಧಿ ೩

# ವೀರ ಜಿನೇಂದ್ರನ ನಿರ್ವಾಣ ಪ್ರಾಪ್ತಿ

## ೧

## ವಿಪುಲಾಚಲದಿಂದ ವಿಹಾರಮಾಡುತ್ತಾ ಪಾವಾಪುರಕ್ಕೆ ಭಗವಾನನ ಆಗಮಿಸುವಿಕೆ

ಆ ಅಂತಿಮ ತೀರ್ಥಂಕರ ಭಗವಾನ ಮಹಾವೀರನು ವಿಪುಲಾಚಲದಿಂದ ಹೊರಟು ಪೃಥ್ವಿಯ ಮೇಲೆ ವಿಹರಿಸುತ್ತಾ, ಜನತೆಯ ದುರ್ಲಂಘ್ಯ ದುಷ್ಕರ್ಮಗಳ ಅಪಹರಣ ಮಾಡುತ್ತಾ ಪಾವಾಪುರವೆಂಬ ಉತ್ತಮ ನಗರವನ್ನು ತಲಪಿದನು.

ಆ ನಗರದ ಸಮೀಪದಲ್ಲಿ ಒಂದು ಮನೋಹರವಾದ ವನವಿದ್ದಿತು. ಅಲ್ಲಿಯ ಮರಗಳು ಹೊಸ ಚಿಗುರುಗಳಿಂದ ಆಚ್ಛಾದಿತವಾಗಿದ್ದುವು. ಅಲ್ಲಿ ಅನೇಕ ಸರೋವರ ಗಳಿದ್ದುವು. ಒಂದು ರಾಜಹಂಸವು ಕಮಲಪತ್ರದ ಮೇಲೆ ಆಸೀನವಾಗಿರುವಂತೆ, ಆ ವನದ ಒಂದು ವಿಶುದ್ಧ ರತ್ನಶಿಲೆಯಮೇಲೆ ಭಗವಾನನು ವಿರಾಜಮಾನನಾದನು.

ಅಲ್ಲಿಂದ ಅವನು ಎರಡು ದಿನಗಳ ತನಕ ಯಾವ ಆಹಾರವನ್ನೂ ಸ್ವೀಕರಿಸಲಿಲ್ಲ, ಹಾಗೂ ತೃತೀಯ ಶುಕ್ಲಧ್ಯಾನದಲ್ಲಿ ಮಗ್ನನಾದನು. ಮತ್ತೆ ಕಾರ್ತಿಕ ಮಾಸದ ಕೃಷ್ಣ ಪಕ್ಷದ ಚತುರ್ದಶಿಯ ದಿನದ ರಾತ್ರಿಯ ಅಂತಿಮ ಭಾಗದಲ್ಲಿ ಚಂದ್ರನು ಸುಖದಾಯಿ ಸ್ವಾತಿ ನಕ್ಷತ್ರದಲ್ಲಿ ಸ್ಥಿತನಾಗಿದ್ದಾಗ ಅವನಿಗೆ ನಿರ್ವಾಣ ಪ್ರಾಪ್ತವಾಯಿತು.

## ೨

## ಭಗವಾನನ ನಿರ್ವಾಣ ಹಾಗೂ ಅವನ ಶಿಷ್ಯ ಪರಂಪರೆ

ಭಗವಾನನು ಕಾಯಾ ವಾಚಾ ಮತ್ತು ಮನಸಾ ಈ ಮೂರು ಯೋಗಗಳನ್ನು ನಿರೋಧಿಸಿ 'ಛಿನ್ನ-ಕ್ರಿಯಾ-ನಿವೃತ್ತಿ' ಎಂಬ ಧ್ಯಾನವನ್ನು ಧಾರಣೆ ಮಾಡಿದನು. ಅವನು ನಾಲ್ಕೂ ಅಘಾತಿ ಕರ್ಮಗಳನ್ನು ನಾಶಮಾಡಿದನು.

ಈ ಪ್ರಕಾರ ಸಿದ್ಧಾರ್ಥರಾಜನ ಪುತ್ರ ಜಿನೇಂದ್ರನು ಮಹಾಜಿನ ರಾಗದ್ವೇಷಿತ ನಾಗಿ ಹಾಗೂ ಸಮಸ್ತ ಪಾಪರೂಪಿ ರಜವನ್ನು ದೂರಮಾಡಿ, ಶರೀರ ರಹಿತನಾಗಿ, ಸಂಯಕ್ತ್ವ, ಮುಂತಾದ ಅಷ್ಟಗುಣಯುಕ್ತನಾಗಿ ಸಿದ್ಧನಾದನು. ಅವನ ಜತೆಯಲ್ಲಿ ಬೇರೆ ಒಂದು ಸಹಸ್ರ ಮುನಿಗಳಿಗೂ ಸಹ ಸಿದ್ಧತ್ವವು ಪ್ರಾಪ್ತವಾಯಿತು. ಆ ಸಮಯ ದಲ್ಲಿ ಹೊಸ ಕಮಲ ಪುಷ್ಪಗಳ ಮಾಲೆಗಳನ್ನು ಧರಿಸಿಕೊಂಡ ಸುರೇಂದ್ರನು ತಾಳವನ್ನು ಹಾಕುತ್ತಾ, ದೇವಲೋಕದ ಅಪ್ಸರೆಯರಿಂದ ನೃತ್ಯವನ್ನು ಮಾಡಿಸಿದನು.

ವೀರ ಭಗವಾನನಿಗೆ ನಿರ್ವಾಣ ಪ್ರಾಪ್ತವಾದ ಮೇಲೆ ಮದ ಮತ್ತು ರಾಗವಿನಿಷ್ಠ ಮಾಡುವ ಇಂದ್ರಭೂತಿ ಗಣಧರನು ಕೇವಲಜ್ಞಾನವನ್ನು ಗಳಿಸಿದನು. ಅವನು ತನ್ನ ಕರ್ಮಗಳಿಂದ ಮುಕ್ತನಾಗಿ ವಿಪುಲಗಿರಿ ಪರ್ವತದ ಮೇಲೆ ನಿರ್ವಾಣವೆಂಬ ಶಾಶ್ವತ ಸ್ಥಾನವನ್ನು ಗಳಿಸಿದನು. ಅದೇ ದಿನ ಸುಧರ್ಮ ಮುನಿಗೆ, ಪಾಪಮಲದ ಪ್ರಕಾಶನ ಮಾಡುವಂಥ, ಕೇವಲ ಜ್ಞಾನೋತ್ಪತ್ತಿ ಉಂಟಾಯಿತು.

ಸುಧರ್ಮ ಮುನಿಯ ನಿರ್ವಾಣವಾದ ಮೇಲೆ, ಕಾಮವನ್ನು ಗೆಲ್ಲುವ ಜಂಬೂ ಎಂಬ ಹೆಸರಿನ ಗಣಧರನಿಗೆ ಅದೇ ಪಂಚಮ ದಿವ್ಯಜ್ಞಾನ ಅರ್ಥಾತ್ ಕೇವಲಜ್ಞಾನವು ಉತ್ಪನ್ನವಾಯಿತು. ಈ ಮೂವರು ಪ್ರಧಾನ ಕೇವಲ ಜ್ಞಾನೀ ಗಣಧರರ ಅನಂತರ ಕ್ರಮವಾಗಿ ನಂದಿ, ನಂದಿಮಿತ್ರ, ಅಪರ (ಅಪರಾಜಿತ) ಮತ್ತು ನಾಲ್ಕನೆಯ ಗೋವರ್ಧನ ಹಾಗೂ ಅಯ್ದನೆಯ ಭದ್ರಬಾಹು–ಎಂಬ ಇವರು ಮೇಘದಂತೆ ಗಂಭೀರ ಧ್ವನಿ ಮಾಡುವ ಸಮಸ್ತ ಶ್ರುತಜ್ಞಾನದ ಪಾರಗಾಮಿಗಳಾದರು, ಅಂದರೆ ಶ್ರುತಕೇವಲಿ ಗಳಾದರು. ಇವರು ಮಿಥ್ಯಾತ್ವರೂಪಿಯಾದ ಮಲವನ್ನು ದೂರಮಾಡಿ, ಶುದ್ಧವೀತರಾಗ ಭಾವನೆಗಳನ್ನು ಪ್ರಾಪ್ತಿಮಾಡಿಕೊಂಡರು.

ಇವರ ಅನಂತರ, ಹನ್ನೊಂದು ಅಂಗಗಳ ಹಾಗೂ ದಶಪೂರ್ವಗಳ ಜ್ಞಾತರು ಕ್ರಮವಾಗಿ ನಿಮ್ನಲಿಖಿತ ಏಕಾದಶ ಮುನಿಗಳಾದರು.

ವಿಶಾಖ, ಪ್ರೋಷ್ಠಿಲ, ಕ್ಷತ್ರಿಯ, ಜಯ ನಾಗಸೇನ, ಸಿತ್ಧಾರ್ಥ, ಧೃತಿಸೇನ, ವಿಜಯ ಬುದ್ಧಿಲ, ಗಂಗ, ಮತ್ತು ನಿಃಶಾಲ್ಯ ಧರ್ಮಸೇನ. ಇವರ ತರುವಾಯ ನಕ್ಷತ್ರ, ಯಶಪಾಲ, ಪಾಂಡು, ಧ್ರುವಸೇನ ಮತ್ತು ಕಂಸ ಎಂಬ ಅಯ್ದುಜನ 'ಹನ್ನೊಂದು ಅಂಗಧಾರಿಗಳು' ಆದರು. ಕಂಸನ ಪಶ್ಚಾತ್ ಸುಭದ್ರ ಮತ್ತು ಯಶೋಭದ್ರ ಮುನಿಗಳೂ ಆದರು. ಇವರು ಆತ್ಮಜಯಿಗಳು, ಜನಸುಖಕಾರಿಗಳು, ಮಹಾನ್ ತೀಕ್ಷ್ಣಬುದ್ಧಿಗಳು ಹಾಗೂ ಗಣಧರರಂತೆ ಜ್ಞಾನಿಗಳು ಆಗಿದ್ದರು.

೩

## ಪ್ರಸ್ತುತ ಗ್ರಂಥದ ಪೂರ್ವ ಪರಂಪರೆ

ಯಶೋಭದ್ರನ ಅನಂತರ ಭದ್ರಬಾಹು ಹಾಗೂ ಲೋಹಚಾರ್ಯ ಭಟ್ಟಾರಕ ರಾದರು. ಇವರು ನಾಲ್ಕುಜನ ಆಚಾರ್ಯರು ಜಗತ್ತಿನ ಸಾರಭೂತ ಆಚಾರಾಂಗ ಧಾರಿಗಳಾದರು. ಇವರುಗಳು ಆಚಾರಾಂಗ ಶಾಸ್ತ್ರದ ಪೂರ್ಣಜ್ಞಾನವನ್ನು ತಮ್ಮ ಮನದಲ್ಲಿ ಧಾರಣೆಮಾಡಿಕೊಂಡಿದ್ದರು. ಅವರಿಗೆ ಶೇಷ ಆಗಮುಗಳ ಕೇವಲ ಏಕ ದೇಶ ಅರ್ಥಾತ್ ಸಂಕ್ಷಿಪ್ತ ಜ್ಞಾನಮಾತ್ರವಿದ್ದಿತು.

ಪೂರ್ವಕಾಲದಲ್ಲಿ ಯಾವ ಶ್ರುತಜ್ಞಾನವನ್ನು, ಶತ್ರುಗಳ ವಧುಗಳಿಗೆ ವೈಧವ್ಯ ವನ್ನು ತೋರಿಸುತ್ತಿದ್ದ ಶತ್ರುವಿಜಯಿಾ ರಾಜಭರತನು ಕೇಳಿದ್ದನೋ ಅದನ್ನೇ ಅನು

ಕ್ರಮವಾಗಿ ರಾಜರು ನಿರಂತರವಾಗಿ ಕೇಳುತ್ತಾ ಇದ್ದರೋ, ಅದೇ ಧರ್ಮವನ್ನು ಮಹಾ ಮುನಿನಾಥರು ಪ್ರಕಟ ಮಾಡಿದರು. ಆ ಸಂಸಾರದ ಭಯರೂಪಿ ಭಾರವನ್ನು ದೂರಮಾಡುವ ಧರ್ಮಶ್ರೋತರಲ್ಲಿ ಎಲ್ಲರಿಗಿಂತ ಕೊನೆಯ ರಾಜ ಶ್ರೇಣಿಕನಾದನು.

ಆಚಾರ್ಯ ವೀರಸೇನ ಮತ್ತು ಧರಸೇನರೂ ಸಹ ಆ ಜೈನಶಾಸನದ ಸೇವೆ ಮಾಡಿದರು. ಆ ಜೈನಶಾಸನ ಮದರೂಪಿ ಪರ್ವತದ ವಜ್ರದ ಸಮಾನ ವಿನಾಶಕ ವಾಗಿದೆ. ಅದರ ನಂತರ ಅದನ್ನು ನಾನಾ ರಸಜಟಿತ ಪದ್ಧಟಿಕಾ ಛಂದದಲ್ಲಿ ಮಹಾ ಮಂತ್ರಿ ಭರತನು ಬರೆಸಿದನು. ಅದನ್ನು ಓದಿ, ಕೇಳಿ, ಹಾಗೂ ಕಿವಿಗಳಲ್ಲಿ ಹಾಕಿ ಕೊಂಡು 'ಮಾವ್ಯೈಯ್ಯಾ' ಮೂಲಕ ಅದೇ ನಿರ್ಮಲ ಮಹೀತಲದ ಮೇಲೆ ಪ್ರಕಟ ಮಾಡಲ್ಪಟ್ಟಿತು.

ಗಣಧರರ ಮೂಲಕ ಉಪದಿಷ್ಟವಾದ ಈ ಪುರಾಣವು ಕರ್ಮಕ್ಷಯದ ಕಾರಣ ವಾಗಿದೆ. ಇದೇ ದೃಷ್ಟಿಯಿಂದ ನಾನು ಈ ಮಹಾಪುರಾಣದ ಸೃಷ್ಟಿಮಾಡಿದ್ದೇನೆ. ಈ ಜಿನೇಂದ್ರ ಮಾರ್ಗದ ಕಥನದಲ್ಲಿ ನನ್ನಂಥ ಬುದ್ಧಿಹೀನನ ಮೂಲಕ, ಏನಾದರೂ ಸ್ವಲ್ಪ ಹೆಚ್ಚು ಕಡಿಮೆ ಹೇಳಲ್ಪಟ್ಟಿದ್ದರೆ, ಅವನನ್ನು ತ್ರೈಲೋಕ್ಯದ ಸಾರಭೂತ ಅರಹಂತ ಭಗವಾನನ ಮೂಲಕ ಪಾದುರ್ಭೂತ ಪೂಜ್ಯ 'ಶ್ರುತದೇವಿಯು' ಕ್ಷಮಿಸಲಿ. ಸಮಸ್ತ ಪಾಪಗಳನ್ನೂ ಕ್ಷಯಮಾಡುವ ಆ ಇಪ್ಪತ್ತುನಾಲ್ಕು ಜನ ತೀರ್ಥಂಕರರು ನನಗೆ ಸಮಸ್ತ ಸಮಾಧಿ ಮತ್ತು ಭೋದಿಜ್ಞಾನವನ್ನು ಪ್ರದಾನ ಮಾಡಲಿ.

ಈ ಅನುಪಮ ಕರ್ಣರಸಾಯನ ರೂಪಿ ರಚನೆಯು ಭುವನತಲದ ಮೇಲೆ ದುಃಖವ ನಾಶಮಾಡಲಿ ಮತ್ತು ಆನಂದೋತ್ಪತ್ತಿಯನ್ನೂ ಮಾಡಲಿ, ಹಾಗೂ ಜನರು ಎಲ್ಲಿಯವರೆಗೆ ಆಕಾಶದಲ್ಲಿ ಚಂದ್ರ ಮತ್ತು ತಾರಾಗಣಗಳು ಇರುತ್ತವೆಯೋ ಅಲ್ಲಿಯವರೆಗೂ ಇದನ್ನು ಶ್ರವಣ ಮತ್ತು ಮನನ ಮಾಡಲಿ.

೪

## ಪುಷ್ಪದಂತ ಕವಿಯ ಲೋಕ ಕಲ್ಯಾಣ ಭಾವನೆ

ಸಮಯಕ್ಕೆ ತಕ್ಕಂತೆ ಮೇಘ ಸಮೂಹ ಸಂಪತ್ತಿ ಧಾರಾಪೂರ್ವಕವಾಗಿ ಮಳೆ ಸುರಿಸಲಿ. ಪೃಥ್ವಿಯು ಯಥೇಚ್ಛವಾಗಿ ಧನಧಾನ್ಯಗಳಿಂದ ತುಂಬಿರಲಿ. ವೀರ ಜಿನೇಂದ್ರನ ಶಾಸನ ಜೀವಿಗಳಿಗೆ ಆನಂದದಾಯಕವಾಗಿರಲಿ. ರಾಜ ಶ್ರೇಣಿಕನು ತನ್ನ ನರಕ ನಿವಾಸದಿಂದ ಹೊರಗೆ ಬರಲಿ ಮತ್ತು ಮುಂಬರುವ ತೀರ್ಥಂಕರನ ರೂಪದಲ್ಲಿ ದೇವೇಂದ್ರನು ಅವರ ಅಭಿಷೇಕ ಕಾರ್ಯದಲ್ಲಿ ಮಗ್ನನಾಗಲಿ. ಸಮಸ್ತ ಪ್ರಜೆಗಳು ಸುಖದಲ್ಲಿ ಆನಂದಿತರಾಗಿರಲಿ ಮತ್ತು ಶಾಸಕಗಣವೂ ಸಹ ಪ್ರಸನ್ನವಾಗಲಿ. ದೇಶವೆಲ್ಲಾ ಆನಂದದಿಂದ ತುಂಬಲಿ. ಸುಭಿಕ್ಷವು ಹರಡಲಿ. ಜನರು ತಮ್ಮ ಮಿಥ್ಯಾತ್ವ ಮತ್ತು ದುಶ್ಚಿಂತೆಗಳ ವಿನಾಶಮಾಡಲಿ. ತಮ್ಮ ಪ್ರತಿಜ್ಞಾ ಪಾಲನೆಯಲ್ಲಿ

ಶೂರ ವೀರ ಶ್ರೇಷ್ಠ ಸುಭಟ ಭರತನಿಗೆ ಶಾಂತಿ ಪ್ರಾಪ್ತಿಯಾಗಲಿ. ನಾನಾಗುಣ ಸಮೂಹಧಾರಿಗಳಿಗೂ, ದಯಾವಂತರಿಗೂ, ಸಂತರಿಗೂ ಹಾಗೂ ಮುನಿಗಳಿಗೂ ಶಾಂತಿ ಪ್ರಾಪ್ತಿಯಾಗಲಿ. ಸಜ್ಜನರು, ಶಂಕಾಕುಲರು ಮತ್ತು ಸುಜನ ಸಂತರಿಗೂ ಸಹ ಶಾಂತಿ ಸಿಗಲಿ. ಜಿನೇಂದ್ರ ಪಾದಗಳಿಗೆ ಪ್ರಣಾಮ ಮಾಡುವುದರಿಂದ ತಮ್ಮ ಗರ್ವ ಹಾಗೂ ಅಭಿಮಾನಗಳನ್ನು ದೂರವಿಟ್ಟ ಮಿಕ್ಕ ಆ ಸಮಸ್ತ ಭವಿಗಳಿಗೂ ಸಹ ಶಾಂತಿ ಲಭಿಸಲಿ.

ಈ ದಿವ್ಯ ಕಾವ್ಯದ ರಚನೆಯ ಫಲವನ್ನು ಜಿನೇಂದ್ರ ಭಗವಾನನು ನನಗೆ ಶೀಘ್ರದಲ್ಲಿ ಪ್ರದಾನಮಾಡಲಿ ಹಾಗೂ ಶ್ರೀ ಭರತ ಮತ್ತು ಭಗವಾನನು ಅರಹಂತ ವಾದಂಥ ಮಾರ್ಗವೂ, ಪುಷ್ಪದಂತ ಕವಿಯಾದ ನನ್ನ ಮಾರ್ಗವೂ ಅದೇ ಆಗಿರಲಿ.

## ಪುಷ್ಪದಂತ ಕವಿಯು ಪರಿಚಯು

ಈ ಪುರಾಣದ ರಚನೆ ಕಾಶ್ಯಪಗೋತ್ರೀಯನಾದ ಕೇಶವಭಟ್ಟ ಹಾಗೂ ಮುಗ್ಧಾದೇವಿಯ ಪುತ್ರನಾದ ಪುಷ್ಪದಂತನ ಮೂಲಕ ಮಾಡಲಾಗಿದೆ. ಅವನು ಸಿದ್ಧರೂಪಿ ವಿಲಾಸಿನಿಯ ಮನೋಹರ ದೂತನಾಗಿದ್ದಾನೆ. ಅವನ ಚಿತ್ತವೃತ್ತಿಯು ನಿರ್ಧನರಲ್ಲಿ ಮತ್ತು ಧನವಂತರಿಬ್ಬರಲ್ಲೂ ಸಮಾನವಾಗಿರುತ್ತದೆ. ಅವನು ಸಮಸ್ತ ಜೀವಿಗಳ ನಿಷ್ಕಾರಣ ಮಿತ್ರನು. ಅವನ ಕಿವಿಗಳು ಶಬ್ದರೂಪೀ ಜಲದಿಂದ ತುಂಬಿವೆ. ಅವನು ಸ್ವಚ್ಛ ನಿರ್ಮಲ ಸರಸ್ವತಿಯ ಆಶ್ರಯ ಪಡೆದುಕೊಂಡು ಪ್ರಸನ್ನ ನಾಗಿರುತ್ತಾನೆ. ಅವನು ಸೂನ್ಯಗೃಹ ಅಥವಾ ದೇವಾಲಯವನ್ನು ತನ್ನ ನಿವಾಸ ವನ್ನಾಗಿ ಮಾಡಿಕೊಳ್ಳುತ್ತಾನೆ. ಅವನು ಕಲಿಯುಗದ ಪ್ರಬಲ ಮಲಿನತೆಯ ಪಟಲ ದಿಂದ ರಹಿತನಾಗಿದ್ದಾನೆ.

ಅವನಿಗೆ ತನ್ನದೇ ಆದ ಮನೆಯಾಗಲೀ ಮತ್ತು ಯಾವ ಹೆಂಗಸಾಗಲೀ, ಮಕ್ಕಳಾಗಲೀ ಇಲ್ಲ. ಅವನು ಎಲ್ಲಿಯಾದರೂ ಯಾವುದಾದರೂ ನದಿ, ಭಾವಿ, ಅಥವಾ ಕೆರೆಯಲ್ಲಿ ಸ್ನಾನ ಮಾಡುತ್ತಾನೆ ಮತ್ತು ಎಂತಹದಾದರೂ ಜೀರ್ಣವಸ್ತ್ರ ಅಥವಾ ವಲ್ಕಲವನ್ನು ತೊಡುತ್ತಾನೆ. ಅವನು ಧೂಳಿನಿಂದ ಆವೃತ್ತನಾಗಿಯೂ ಇರುತ್ತಾನೆ.

ಅವನು ಧೈರ್ಯವಂತನೂ, ದುರ್ಜನರ ಸಹವಾಸವನ್ನು ದೂರದಿಂದಲೇ ಪರಿ ತ್ಯಜಿಸುವಂತಹವನೂ ಆಗಿದ್ದಾನೆ. ಅವನು ಭೂಮಿಯನ್ನೆ ತನ್ನ ಶಯ್ಯೆಯನ್ನಾಗಿ ಮಾಡಿಕೊಳ್ಳುತ್ತಾನೆ. ತನ್ನ ಕೈಗಳನ್ನೇ ತಲೆದಿಂಬಾಗಿ ಇಟ್ಟುಕೊಳ್ಳುತ್ತಾನೆ. ಅವನು ಪಂಡಿತ-ಪಂಡಿತ-ಮರಣ ಅರ್ಥಾತ್ ಶ್ರೇಷ್ಠ ಮುನಿಗಳಂತೆ ಸಮಾಧಿ ಮರಣದ ಯಾಚನೆ ಮಾಡುತ್ತಾನೆ. ಅವನು ಉತ್ತಮ ಮಾನ್ಯಖೇಟ ನಗರದಲ್ಲಿ ನೆಲೆಸಿ ದನು. ಮನಸ್ಸಿನಲ್ಲಿ ಅರಹಂತ ಧರ್ಮದ ಧ್ಯಾನವನ್ನಿಟ್ಟನು. ಭರತ ಮಂತ್ರಿಯ

ಮೂಲಕ ಅವನು ಸನ್ಮಾನಿತನಾದನು. ಅವನು ತನ್ನ ನಯ, ನಿಧಾನ, ಹಾಗೂ ಕಾವ್ಯ-ಪ್ರಬಂಧ ರಚನೆಯ ಮೂಲಕ ಜನರನ್ನು ರೋಮಾಂಚನಗೊಳಿಸುತ್ತಿದ್ದನು. ತನ್ನ ಮನಸ್ಸಿನ ಮಾಲಿನ್ಯವನ್ನೂ ದೂರವಿಟ್ಟು, ಭಕ್ತಿ ಸಹಿತವಾಗಿ ಪಾರಮಾರ್ಥಿಕ ಭಾವನೆಯಿಂದ ಜಿನೇಂದ್ರನ ಚರಣ ಕಮಲಗಳಿಗೆ ಕೈಜೋಡಿಸಿ ಪ್ರಣಾಮಮಾಡಿ ಜಗತ್ತಿನಲ್ಲಿ 'ಅಭಿಮಾನ ಮೇರು' ಎಂಬ ಹೆಸರಿನಿಂದ ವಿಖ್ಯಾತನಾದ ಆ ಪುಷ್ಪದಂತ ಕವಿಯು ಈ ಕಾವ್ಯದ ರಚನೆ ಮಾಡಿದನು. ಮತ್ತು ಅದನ್ನು ಕ್ರೋಧನ ಸಂವತ್ಸರದ ಆಷಾಢಮಾಸದ ಶುಕ್ಲಪಕ್ಷದ ಹತ್ತನೆಯ ತಿಥಿಯಲ್ಲಿ ಪೂರ್ಣಮಾಡಿದನು.

ಇತಿ ವೀರ ಜಿನೇಂದ್ರ ನಿರ್ವಾಣ ಪ್ರಾಪ್ತಿ ವಿಷಯಕ್ಕೆ ಸಂಬಂಧಿಸಿದ
ತೃತೀಯ ಸಂಧಿ ಸಮಾಪ್ತವಾದುದು.

# ಸಂಧಿ ೪

## ಜಂಬೂಸ್ವಾಮಿಯು ಪ್ರವ್ರಜ್ಯನಾಗುವುದು

೧

### ರಾಜನಾದ ಶ್ರೇಣಿಕನ ಮೂಲಕ ಅಂತಿಮ ಕೇವಲಿಯ ವಿಷಯಕ್ಕೆ ಸಂಬಂಧಿಸಿದ ಪ್ರಶ್ನೆ ಮತ್ತು ಅದಕ್ಕೆ ಗೌತಮ ಗಣಧರನ ಉತ್ತರ

ಭಗವಾನ್ ಮಹಾವೀರನು ವಿಹರಿಸುತ್ತಾ (ಧರ್ಮ ಸಂಚಾರವನ್ನು ಮಾಡುತ್ತಾ) ಹಾಗೂ ತನ್ನ ಧರ್ಮೋಪದೇಶದಿಂದ ಸಮಸ್ತ ಜಗತ್ತನ್ನು ಅಲಂಕೃತ ಮಾಡುತ್ತಾ, ಸಮಯಕ್ಕೆ ಸರಿಯಾಗಿ ಸುಂದರವಾದ ವಿಪುಲಾಚಲ ಪರ್ವತದ ಮೇಲೆ ಬಂದು ವಿರಾಜಮಾನನಾದನು. ಆಗ ಮಗಧರಾಜ ಶ್ರೇಣಿಕನು ಭಕ್ತಿಪೂರ್ವಕವಾಗಿ ಅವನನ್ನು (ಮಹಾವೀರನನ್ನು) ವಂದಿಸಲು ಹೋದನು. ಆತನು ಭಗವಾನನ ಸಮವಸರಣದ ದರ್ಶನ ಮಾಡಿದನು.

ಮತ್ತೆ ಮಗಧ ನರೇಶನು ಧರ್ಮಭಾವದಿಂದ ಹೀಗೆ ಪ್ರಶ್ನೆ ಮಾಡಿದನು : 'ಹೇ ದೇವ, ಈ ಭಾರತ ವರ್ಷದಲ್ಲಿ ಅಂತಿಮ ಕೇವಲ ಜ್ಞಾನಿಯಾರಾಗುವನು ?' ಇದಕ್ಕೆ ಗೌತಮಗಣಧರರು ಹೇಳಿದರು—'ಹೇ ರಾಜನ್, ನಿನ್ನ ಸಮ್ಮುಖದಲ್ಲಿ ವಿದ್ಯುತ್ ಸಮಾನ ಕಾಂತಿವಾನನೂ ಮತ್ತು ಗುಣವತಿಯರಾದ ಅಪ್ಸರೆಯರ ಸಹಿತವಾಗಿ ನಿಂತಿರುವ ವಿದ್ಯುನ್ಮಾಲಿ ದೇವತೆಯನ್ನು ನೋಡುತ್ತಿರುವೆಯಲ್ಲಾ, ಅವನೇ ಇಂದಿನಿಂದ ಏಳನೆಯ ದಿನ ಅರಹದಾಸ ಸೇಠನ ಮತ್ತು ಆ ಜಿನದಾಸಿ ಸೇಠಾನಿಯ ಗರ್ಭದಲ್ಲಿ ಉತ್ಪನ್ನನಾಗುವನು.

ಯಾವಾಗ ಆಕೆ ಫಲಿತ ಶಾಲಿ ಕ್ಷೇತ್ರ, ಉರಿಯುತ್ತಿರುವ ಅಗ್ನಿ, ಮದೋನ್ಮತ್ತ ಹಾಗೂ ಬಹಳ ಮದದಿಂದ ಆಚ್ಛಾದಿತವಾದ ಆನೆ, ಮತ್ತು ದೇವತೆಗಳ ಮೂಲಕ ಕೊಡಲಾದ ಜಂಬೂ ಫಲದ ಉಪಾಹಾರವನ್ನು ತನ್ನ ಸ್ವಪ್ನದಲ್ಲಿ ನೋಡುವನೋ ಆಗ ಆ ಸ್ವಪ್ನದ ಫಲ ಸ್ವರೂಪವಾಗಿ ಅವರ ಪುತ್ರನು ಜಂಬೂ ದೇವತೆಯ ಮೂಲಕ ಪೂಜಿಸಲ್ಪಡುವನು. ಈ ಪೃಥ್ವಿಯ ಮೇಲೆ ಆತನ ಹೆಸರು ಜಂಬೂ ಸ್ವಾಮಿಯೆಂದು ಆಗುತ್ತದೆ. ಆತನಿಗೆ ಅದೇ ಜನ್ಮದಲ್ಲಿ ನಿರ್ವಾಣವೂ ಪ್ರಾಪ್ತಿಯಾಗುತ್ತದೆ.

ಅದೇ ಸಮಯದಲ್ಲಿ ಸ್ನಿಗ್ಧ, ನೀಲವರ್ಣದ, ತೊಂಬತ್ತುನಾಲ್ಕು ಅಂಗುಲ ಉದ್ದ ಶರೀರಧಾರಿ ಭಗವಾನ್ ವರ್ಧಮಾನನು ಅಚಲವಾದ ಮತ್ತು ಕೇವಲ ಜ್ಞಾನ

ಪ್ರಧಾನವಾದ ನಿರ್ವಾಣವನ್ನು ಪಾವಾಪುರದ ಸರೋವರಯುಕ್ತ ವನದಲ್ಲಿ ಹೊಂದುವನು. ಆ ಸಮಯದಲ್ಲಿ ನಾನು, ಅರ್ಥಾತ್ ಗೌತಮ ಗಣಧರನು, ಅತಿ ನಿರ್ಮಲವಾದ ಕೇವಲ ಜ್ಞಾನವನ್ನು ಪಡೆಯುತ್ತೇನೆ ಮತ್ತು ಕರ್ಮಘಾತಿ ಗಣಧರ ಸುಧರ್ಮ ಸಹಿತನಾಗಿ ಈ ದೇವತೆಗಳನ್ನು ಸಂತುಷ್ಟ ಮಾಡುವ ರಾಜಗೃಹ ನಗರಕ್ಕೆ ಬರುತ್ತೇನೆ.

೨

## ಜಂಭೂಸ್ವಾಮಿಯ ವಿವಾಹ ಮತ್ತು ಗೃಹದಲ್ಲಿ ಚೋರರ ಪ್ರವೇಶ

ಗೌತಮ ಗಣಧರನು ಹೇಳುತ್ತಾನೆ-ಹೇ ಶ್ರೇಣಿಕನೇ, ನಿನ್ನ ಮಗ ಕುಣಿಕನನ್ನು ಸಂಬೋಧಿಸುತ್ತೇನೆ ಮತ್ತು ಅವನು ಶ್ರುತಜ್ಞಾನ ಹೊಂದಿ ಆನಂದಿತನಾಗುವನು. ಅದೇ ಸಮಯದಲ್ಲಿ ಜಂಬೂಸ್ವಾಮಿಯೂ ಅಲ್ಲಿಗೆ ಬರುವನು ಮತ್ತು ಭಕ್ತಿಪೂರ್ವಕವಾಗಿ ಅರಹಂತ ದೀಕ್ಷೆಯನ್ನು ಕೇಳುವನು. ಆದರೆ ಅವನ ಬಂಧುಗಳು ಅವನನ್ನು ಬಲಪೂರ್ವಕವಾಗಿ ತಡೆಯುವರು ಮತ್ತು ಅವನು ತನ್ನ ನಗರದಲ್ಲಿ ಸಪ್ತ ಭೂಮಿ ಪ್ರಾಸಾದ ಅರ್ಥಾತ್ ಏಳು ಖಂಡಗಳುಳ್ಳ ಮಹಲಿನಲ್ಲಿ ಇರತೊಡಗುವನು. ಮತ್ತೆ ಅವನ ವಿವಾಹದ ಸಿದ್ಧತೆಗಳಾಗುವುವು. ಆದರೂ ಅವನು ತನ್ನ ಮನದಲ್ಲಿ ಅದರ ಅವಹೇಳನೆ ಮಾಡುವನು ಆದಾಗ್ಯೂ ಸಾಗರದತ್ತ ಸೇಠನ ಪುತ್ರಿ ಪದ್ಮಾವತಿ, ದೇವಗಜಗಾಮಿನಿ ಸುಲಕ್ಷಣಾ, ಪದ್ಮಶ್ರೀ, ಸುಂದರಿ ಕನಕಶ್ರೀ, ವಿಜಯಶ್ರೀ, ಧನಶ್ರೀ, ಭವನದ ಮಧ್ಯೆ ಮಾಣಿಕ್ಯ ದೀಪದ ಸಮಾನವಾಗಿರುವ ಮಾಣಿಕ್ಯವತಿ, ಮತ್ತು ರತ್ನ ಚೂರ್ಣ ನಿರ್ಮಿತ ರಂಗಾವಲಿಯ ಸಮಾನ ಸುಂದರಿಯಾದ ರಂಗಾವಲಿ, ಇವರುಗಳ ಜೊತೆ ಅವನು ವರರೂಪಿಯಾಗಿ ಹೊಸ ಕಂಕಣ ಧರಿಸಿ ತನ್ನ ಕೈಗಳನ್ನು ಎತ್ತಿ ಆ ವಧುಗಳನ್ನು ಪಾಣಿಗ್ರಹಣ ಮಾಡುವನು. ಅದೇ ರಾತ್ರಿ ಅವನ ತಾಯಿ ನೋಡುತ್ತಿರುವಂತೆಯೇ, ಒಬ್ಬ ಕಳ್ಳನು ಅವರ ಮನೆಯನ್ನು ಹೊಕ್ಕನು. ಆ ಕಾಲದಲ್ಲಿ ನಿಜವಾಗಿ ಆ ಕಳ್ಳನು ಬೇರೆ ಯಾರೂ ಆಗಿರದೆ, ಸುರಮ್ಯ ದೇಶದ ರಾಜಧಾನಿ ಪೋದನಪುರದ ವಿದ್ಯುತ್‌ಶಯ ಎಂಬ ರಾಜನ ಪುತ್ರನಾಗಿದ್ದನು. ಅವನ ಹೆಸರು ವಿಧ್ಯುಚ್ಚರ. ಅವನು ಸುಭಟರ ಅಗ್ರಣಿಯಾಗಿದ್ದನು. ಶತ್ರುರೂಪಿ ಪರ್ವತಗಳಿಗೆ ವಜ್ರದ ಸಮಾನವಾದಂಥ ದಿಗ್ಗಜನು ಯಾವುದೋ ಕಾರಣದಿಂದ ಕ್ರುದ್ಧನಾದನು ಮತ್ತು ಅಕಸ್ಮಾತ್ ತನ್ನ ನಗರವನ್ನು ಬಿಟ್ಟು ಹೊರಟು ಹೋದನು. ಅವನು ಅದೃಶ್ಯವಾಗುವ ಬಾಗಿಲುಗಳನ್ನು ತೆಗೆಯುವ, ಹಾಗೂ ಜನರ ಬುದ್ಧಿಯನ್ನು ವಿನಷ್ಟ ಮಾಡುವ ವಿದ್ಯೆಗಳನ್ನು ಕಲಿತನು, ಹಾಗೂ ವಿದ್ಯುಚ್ಚೋರ ಎಂಬ ಹೆಸರನ್ನು ಇಟ್ಟುಕೊಂಡನು. ಅವನು ತನ್ನ 500 ಸಹಾಯಕರನ್ನು ಕರೆದುಕೊಂಡು ಹಾಗೂ ಬಲವಾದ ಮಂತ್ರ ತಂತ್ರಗಳ ಗರ್ವದಿಂದ ರಾತ್ರಿಯ ಘೋರ ಅಂಧಕಾರದಲ್ಲಿ ದೂಷಿತ ಅನ್ನಭಕ್ಷೀ ತಕ್ಕರನ ರೂಪದಲ್ಲಿ ಆ ಮನೆಯನ್ನು ತಲುಪಿದನು.

೩

## ಕಳ್ಳನ ಜಂಬೂಸ್ವಾಮಿಯ ತಾಯಿಯ ಜೊತೆಯಲ್ಲಿ ಮಾತುಕತೆ ಮತ್ತು ಆನಂತರ ಜಂಬೂಸ್ವಾಮಿಯ ಜೊತೆಯಲ್ಲಿ ವಾರ್ತಾಲಾಪ

ಆರೂಹವಾಸ ಸೇಠನ ಭವನದಲ್ಲಿ ಪ್ರವೇಶ ಮಾಡಿದಾಗ್ಯೂ ಕೂಡ ಅವನನ್ನು ಯಾವ ಮನುಷ್ಯನೂ ಸಹ ನೋಡಲಾಗಲಿಲ್ಲ. ಆ ಕಳ್ಳನು ಅಲ್ಲಿ ಯಶಸ್ವಿನೀ ಜಿನ ದಾಸಿ ಸೇಠಾನಿಯನ್ನು ನಿದ್ರೆಯಿಂದ ಆಲಸ್ಯ ರಹಿತನಾಗಿ ಏಳುತ್ತಿದ್ದುದನ್ನು ನೋಡಿದನು. ಆಗ ಕಳ್ಳನು ಅವಳನ್ನು ಈ ರೀತಿ ಕೇಳಿದನು–ಹೇ ಮಾತಾ, ನೀನು ಏಕೆ ಏಳುತ್ತಿರುವೆ, ಏತಕ್ಕೆ ಮಲಗುತ್ತಿಲ್ಲ. ಅದಕ್ಕೆ ಸೇಠಾನಿಯು ಹೇಳಿದಳು; ನನ್ನ ಶುದ್ಧ ಮನವುಳ್ಳ ಪುತ್ರನು ನಾಳೆ ತಪೋವನದಲ್ಲಿ ಪ್ರವೇಶ ಮಾಡುವನು. ಈ ಪುತ್ರ ವಿಯೋಗದ ದುಃಖ ತನ್ನ ಶರೀರವನ್ನು ಸುಡುತ್ತಿದೆ. ಮತ್ತು ಇದಕ್ಕೋಸ್ಕರವಾಗಿಯೇ ಹೇ ಬಾಬೂ, ನನಗೆ ಸ್ವಲ್ಪವೂ ನಿದ್ರೆ ಬರುತ್ತಿಲ್ಲ. ನೀನು ಬುದ್ಧಿವಾನನು, ಆದ್ದರಿಂದ ಹೇ ಸುಭಟನೇ, ಬುದ್ಧಿವಾನರಿಂದ ತಿಳಿಯಲ್ಪಟ್ಟ ಉಪಾಯಗಳಿಂದ ಇವನನ್ನು ತಡೆ; ನಾನು ನಿನ್ನನ್ನು ನನ್ನ ಪರಮಬಂಧು ಎಂದು ತಿಳಿಯುತ್ತೇನೆ. ಆದ್ದರಿಂದಲೇ ಈ ಕೆಲಸವನ್ನು ನೀನು ಮಾಡಿ ಮುಗಿಸಿದಮೇಲೆ ನೀನು ಎಷ್ಟು ಹಣ ಕೇಳಿದರೂ ನಾನು ಅಷ್ಟನ್ನು ಕೊಡುತ್ತೇನೆ. ಸೇಠಾನಿಯ ಈ ಮಾತುಗಳನ್ನು ಕೇಳಿ ವಧುಗಳ ಜೊತೆಯಲ್ಲಿ ಕುಳಿತಿದ್ದ ಸ್ಥಳಕ್ಕೆ ವಿದ್ಯುಚ್ಚೋರನು ಹೋದನು. ಮತ್ತು ಈ ರೀತಿ ಹೇಳಿದನು. ಹೇ ಕುಮಾರನೇ, ಪರಲೋಕದ ಆಗ್ರಹದಿಂದ ತನ್ನ ಸ್ವಜನರಿಗೆ ಖೇದವನ್ನುಂಟು ಮಾಡುವುದು ನಿನಗೆ ಉಚಿತವಲ್ಲ, ನೀನು ಹತ್ತಿರದ ವಿಷಯವನ್ನು ಅರಿಯಲು ಪ್ರಯತ್ನಿಸುವುದೇ ಇಲ್ಲ, ದೂರದ ವಸ್ತುವನ್ನೇ ನೋಡುವೆ. ಯಾವ ರೀತಿ ಆನೆಯ ಮರಿಯು ಹತ್ತಿರದಲ್ಲಿರುವ ಎಲೆಗಳು ಮತ್ತು ಹುಲ್ಲನ್ನು ಬಿಟ್ಟು ಮೇಲಿರುವ ಮಧುವಿನ ಆಸೆಪಡುತ್ತಾ ಬಂಡೆಗಳಿಂದ ಪೂರ್ಣವಾಗಿರುವ ಕಲ್ಲಿನ ತಳಕ್ಕೆ ಬಿದ್ದು ಮರಣ ಹೊಂದುತ್ತದೆಯೋ ಹಾಗೆ ನೀನು ವಿನಾಕಾರಣ ನಿನ್ನ ಮರಣವನ್ನು ತಂದುಕೊಳ್ಳಬೇಡ. ತಪಸ್ಸಿಗೆ ಏಕೆ ಮನಸ್ಸಿಡುತ್ತಿರುವೆ? ಈ ಕನ್ಯೆಯರ ಜೊತೆ ಪ್ರೇಮಿಸು. ಇದನ್ನು ಕೇಳಿ ವರನು ಈ ರೀತಿ ಹೇಳಿದನು. "ನೀನು ಶೂನ್ಯ ಬುದ್ಧಿಯುಳ್ಳವನು. ಭೋಗದಿಂದ ಜೀವತೃಪ್ತಿ ಆಗದು. ಇಂದ್ರಿಯ-ಸುಖಗಳಿಂದ ಅವರ ತೃಷ್ಣೆಯು ಆರುವುದಿಲ್ಲ." ಜಂಬೂಸ್ವಾಮಿಯ ಈ ಮಾತುಗಳನ್ನು ಕೇಳಿ ಆ ಘೋರ ಕಳ್ಳನು ಹೇಳಿದನು. "ಒಬ್ಬ ಶಬರನು ತನ್ನ ಬಾಣದಿಂದ ಒಂದು ಆನೆಯನ್ನು ವಧಿಸಿದ, ಆ ಬಾಣಧಾರಿ ದುರ್ಧರ, ದುಷ್ಟ ಭಿಲ್ಲನನ್ನು ವೃಕ್ಷದಲ್ಲಿದ್ದ ಸರ್ಪವು ಕಚ್ಚಿತು.

೬

# ಜಂಬೂಸ್ವಾಮಿ ಮತ್ತು ವಿಧ್ಯುಚ್ಚರ ಚೋರನ ಮಧ್ಯೆ ಯುಕ್ತಿ ಮತ್ತು ದೃಷ್ಟಾಂತಗಳ ಮೂಲಕ ವಾದ-ವಿವಾದ

ಆ ಭಿಲ್ಲನು ಸರ್ಪವು ತನ್ನನ್ನು ಕಚ್ಚಿದ ಮೇಲೆ ಅದನ್ನು ಹೊಡೆದು ಕೊಂದು ಹಾಕಿದನು. ಈ ಪ್ರಕಾರವಾಗಿ ಆನೆಯೂ ಸತ್ತಿತು, ಧನುರ್ಧಾರಿ ಶಬರನೂ ಮರಣ ಹೊಂದಿದನು ಮತ್ತು ಸರ್ಪವೂ ಸಹ ಉಳಿಯಲಿಲ್ಲ. ಅದೇ ಸಮಯಕ್ಕೆ ನರಿಯು ಮಾಂಸ ಭಕ್ಷಣೆಯ ಇಚ್ಛೆಯಿಂದ ಅಲ್ಲಿಗೆ ಬಂದಿತು. ಆ ಲೋಭಿಯು ಅಲ್ಲಿದ್ದ ಧನುಸ್ಸಿನ ಪ್ರತ್ಯಂಚ ರೂಪದ ಸ್ನಾಯುವನ್ನು ತಿನ್ನಲು ಶುರು ಮಾಡಿತು. ಅದು ತನ್ನ ಶರೀರದ ರಕ್ತದಿಂದ ಪ್ರಸನ್ನವಾಗತೊಡಗಿತು. ಧನುಸ್ಸಿನ ತುದಿಯ ಗಂಟು ತುಂಡಾಗಿ ಶೃಗಾಲದ ಹಲ್ಲುಗಳು ಮುರಿದವು ಮತ್ತು ನಾಲಿಗೆಯು ಸೀಳಿಹೋಯಿತು. ಈ ಪ್ರಕಾರವಾಗಿ ಅತಿ ಆಶೆಯಿಂದ ನರಿಯೂ ಸಹ ಸತ್ತಿತು. ಇದೇ ಪ್ರಕಾರ ಪರ ಲೋಕದ ಹಿಂದೆ ಓಡುವವರ ಸ್ಥಿತಿಯು ಆಗುವುದು. ಆದುದರಿಂದ ಸಾಯಬೇಡ. ಭೋಗ ವಿಲಾಸಗಳ ಸುಖವನ್ನು ಭೋಗಿಸು. ಇದಕ್ಕೆ ಯುವಕನು ಈ ರೀತಿ ಹೇಳಿದನು—"ಹೇ ಚೋರನೇ ಕೇಳು! ಒಬ್ಬ ಪಥಿಕನು ದಾರಿಯಲ್ಲಿ ನಾನಾ ರತ್ನಗಳನ್ನು ನೋಡಿದನು. ಅವುಗಳನ್ನು ಸುಲಭವಾಗಿ ಸಿಗುತ್ತವೆಂದು ತಿಳಿದು, ಬೇರೆ ಯಾರೂ ನೋಡಿ ತೆಗೆದುಕೊಳ್ಳದಿರಲಿ ಮತ್ತೆ ಹಿಂದಿರುಗಿ ಹೋಗುವಾಗ ತೆಗೆದುಕೊಳ್ಳಬಹುದೆಂದುಕೊಂಡು ತನ್ನ ಕಣ್ಣುಗಳನ್ನು ಆ ಕಡೆಗೆ ಹರಿಸದೆ, ಹೊರಟು ಹೋದನು. ಆದರೆ ಹಿಂದಿರುಗಿ ಬರುವಾಗ ಆ ರತ್ನಗಳು ಸಿಗಲಿಲ್ಲ. ಇದೇ ರೀತಿಯಲ್ಲಿ ಜಿನೇಂದ್ರನ ವಚನರೂಪಿ ರತ್ನವು ಯಾವ ಜೀವಿಗೆ ಸಹ್ಯವಾಗುವುದಿಲ್ಲವೋ (ನಾಟುವುದಿಲ್ಲವೋ) ಅವನು ಪ್ರಪಂಚದಲ್ಲಿ ಭ್ರಮಣ ಮಾಡುತ್ತಾ ನಾನಾ ಪ್ರಕಾರದ ವಿಪತ್ತಿಗೊಳಗಾಗುತ್ತಾನೆ. ಅವನು ಕ್ರೋಧ, ಲೋಭ ಮತ್ತು ಮೋಹಗಳಿಂದ ಮೂಢನಾಗಿ ಎಂಟು ಪ್ರಕಾರಗಳ ಕರ್ಮಬಂಧನಕ್ಕೆ ಒಳಗಾಗುತ್ತಾನೆ. ಆಗ ಕಳ್ಳನು ಹೇಳಿದನು—ಒಂದು ನರಿಯು ಮಾಂಸದ ತುಂಡನ್ನು ತೆಗೆದುಕೊಂಡು ನದಿಯನ್ನು ದಾಟುತ್ತಿತ್ತು. ಅದು ವೇಗದಿಂದ ಹರಿಯುತ್ತಿರುವ ನದಿಯಲ್ಲಿ ಒಂದು ಮೀನು ನೀರಿನಿಂದ ತನ್ನ ಶರೀರವನ್ನು ಮೇಲಕ್ಕೆ ತಂದು ಎಗರಿ ಬೀಳುತ್ತಿದ್ದುದನ್ನು ನೋಡಿತು. ಆ ತೃಷ್ಣಾವಶ ನರಿಯು ತನ್ನ ಬಾಯಲ್ಲಿದ್ದ ಮಾಂಸಖಂಡವನ್ನು ಬಿಟ್ಟು ಮೀನನ್ನು ಹಿಡಿಯಲು ಪ್ರಯತ್ನ ಮಾಡತೊಡಗಿತು. ಮೀನು ಬಾಯಿಗೆ ಸಿಗಲಿಲ್ಲ. ಆದರೆ ಬಾಯಿಂದ ಬಿದ್ದ ಮಾಂಸವನ್ನು ಒಂದು ಹದ್ದು ತೆಗೆದುಕೊಂಡು ಹಾರಿ ಹೋಯಿತು. ನರಿಯು ಆ ಪ್ರವಾಹದಲ್ಲಿ ಕೊಚ್ಚಿಹೋಗಿ ಸತ್ತು ಹೋಯಿತು. ಮತ್ತು ಮೀನು (ಮತ್ಸ್ಯವು) ನೀರಿನಲ್ಲಿ ಜೀವಿತವಾಗಿ ಉಳಿಯಿತು. ಇದನ್ನು ಕೇಳಿ ವರನು ಚೋರನನ್ನು ಪುನಃ ಉಪೇಕ್ಷಿಸಿ (ಅಲ್ಲಗಳೆಯುತ್ತಾ) ಹೇಳಲಾರಂಭಿಸಿದನು—ಒಬ್ಬ

ವಣಿಕನು ದಾರಿಯಲ್ಲಿ ಸುಖದಿಂದ ನಿದ್ರಿಸಲಾರಂಭಿಸಿದ. ಆಗ ಅವನ ರತ್ನಭರಿತ ಪೆಟ್ಟಿಯನ್ನು ಯಾರೋ ಕಳ್ಳನು ಕದ್ದುಕೊಂಡು ಹೋದನು. ಆ ವನದಲ್ಲಿ ನಿನ್ನಂಥಹ ಅಜ್ಞಾನಿ ಪ್ರಾಣಿಹಿಂಸಕರು ಆ ವಣಿಕನನ್ನು ಕುಶೀಲನಾಗಿ ಮಾಡಿದನು ಮತ್ತು ಅವನು ಆಪತ್ತಿನಲ್ಲಿ ಬಿದ್ದು ದುಃಖದಿಂದ ಪೀಡಿತನಾದನು. ಜಿನ-ವಚನ ರೂಪಿ ರತ್ನ ರಹಿತರಾಗಿ ನರಕವನ್ನು ಯಾರು ತಲುಪುವರೋ ಅಂಥಹ ಜೀವಿಗಳಿಗೆ ಇದೇ ಸ್ಥಿತಿಯಾಗುವುದು.

೫೫

## ದೃಷ್ಟಾಂತಗಳ ಮೂಲಕ ವಾದವಿವಾದದ ಮುಂದುವರಿಕೆ

ವಿಷಯ ಮತ್ತು ಕಷಾಯರೂಪಿ ಚೋರರ ಸಂಸರ್ಗದಿಂದ ಜೀವವು ಉನ್ಮಾರ್ಗಗಾಮಿ, ಪಾಪಿ ಮತ್ತು ದುಷ್ಟವಾಗಿಬಿಡುತ್ತದೆ. ಜಂಬೂಸ್ವಾಮಿಯ ಈ ಮಾತನ್ನು ಕೇಳಿ ಪರಧನ ಅಪಹರಿಸುವ ಚೋರನು ತನ್ನ ಬುದ್ಧಿವಿಸ್ತಾರದಿಂದ ಈ ರೀತಿ ಉತ್ತರ ಕೊಟ್ಟನು. ಒಬ್ಬ ಪುತ್ರವಧುವು ತನ್ನ ಅತ್ತೆಯ ಮೇಲೆ ಕೋಪಿಸಿಕೊಂಡು ವನಕ್ಕೆ ಹೋದಳು ಮತ್ತು ಅಲ್ಲಿ ವೃಕ್ಷಮೂಲದಲ್ಲಿ ಆತ್ಮಘಾತದ ಇಚ್ಛೆ ಮಾಡತೊಡಗಿದಳು. ಈ ಅವಸ್ಥೆಯಲ್ಲಿ ಅವಳನ್ನು ಸುವರ್ಣದಾರು ಎಂಬ ಮೃದಂಗ ಬಾರಿಸುವವನು ನೋಡಿದನು. ಇವಳ ಮಾತನ್ನು ಕೇಳಿ ಆ ಮೂರ್ಖನು ಅವಳ ಆಭರಣಗಳ ಲೋಭದಿಂದ ಆ ಮನೆಯ ಕಮಲ-ಲಕ್ಷ್ಮಿ, ಧವಳಾಕ್ಷಿ, ಹಾಗೂ ಕಾಮರಹಿತ ಜೀವನದಿಂದ ವಿರಕ್ತಳಾಗಿರುವ ಮಹಿಳೆಗೆ ಸಾಯುವ ಉಪಾಯವನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದನು. ಅವನು ತನ್ನ ಮೃದಂಗದ ಮೇಲೆ ಕಾಲುಗಳನ್ನು ಊರಿ ವೃಕ್ಷದಿಂದ ನೇತಾಡುತ್ತಿದ್ದ ಪಾಶವನ್ನು ತನ್ನ ಕೊರಳಿಗೆ ಹಾಕಿಕೊಂಡನು. ಈ ಮಧ್ಯೆ ಆ ಮೃದಂಗವು ಜಾರಿ ಬಿದ್ದಿತು ಮತ್ತು ಆ ದುಷ್ಟ ದುರಾಶೆಯುಳ್ಳವನು ನೇಣಿನಲ್ಲಿ ಸಿಕ್ಕಿ ಸತ್ತುಹೋದನು. ಅವನು ಸತ್ತಿದ್ದನ್ನು ನೋಡಿ ಆ ಪುತ್ರವಧುವು ಬಿಸಿ ಉಸಿರನ್ನು ಬಿಡುತ್ತಾ ಮನೆಗೆ ಹೋಗುವುದೇ ಒಳ್ಳೆಯದು ಎಂದು ತಿಳಿದಳು. ಯಾವ ಪ್ರಕಾರ ಆ ಮೃದಂಗವಾದಕನು ಆ ವಧುವಿನ ಧನ-ಕನಕಾದಿಗಳ ಮೋಹದಿಂದ ಸತ್ತನೋ ಅದೇ ರೀತಿ ನೀನೂ ಕೂಡ ಮೋಕ್ಷಲೋಭದಿಂದ ಸಾಯಬೇಡ.

ಇದಕ್ಕೆ ಕುಮಾರನು ಈ ರೀತಿ ಉತ್ತರಿಸಿದನು-ಒಬ್ಬ ಲಲಿತಾಂಗ ಧೂರ್ತನು ಒಂದು ನಗರದಲ್ಲಿರುತ್ತಿದ್ದನು. ಅವನು ರಾಗ-ರಂಗದಲ್ಲಿ ಆಸಕ್ತಿಯುಳ್ಳವನಾಗಿದ್ದನು. ಇವನನ್ನು ನೋಡಿ ರಾಜನ ಒಬ್ಬ ಮಣಿಮೇಖಲಾ-ಧಾರಿಣಿ ರಾಣಿಯು ಕಾಮಪೀಡೆಯಿಂದ ವಿಹ್ವಲಳಾದಳು. ಅವಳು ತನ್ನ ಸಖಿಯ ಮೂಲಕ ಅವನನ್ನು ಪಶ್ಚಿಮ ದ್ವಾರದಿಂದ ಹೇಳಿ ಕರೆಸಿದಳು ಮತ್ತು ಅವನೊಡನೆ ರಮಿಸಿದಳು. ಈ ಮಾತು ಪರಿವಾರದವರಿಗೆ ಜ್ಞಾತವಾಯಿತು ಮತ್ತು ರಾಜನಿಗೆ ಇದರ ಸೂಚನೆಯು ಸಿಕ್ಕಿತು. ಆಗ ರಾಣಿಯು ಅದನ್ನು ಮುಚ್ಚುವುದಕ್ಕೋಸ್ಕರ ತನ್ನ ಅಶುಚಿ ಮಲದಿಂದ ಪೂರ್ಣವಾದ ಶೌಚ-ಸ್ಥಾನದಲ್ಲಿ ಬಚ್ಚಿಟ್ಟಳು. ಅಲ್ಲಿ ಹುಳುಗಳು ಅವನನ್ನು ತಿನ್ನತೊಡಗಿದವು

ಮತ್ತು ಅವನು ದುಃಖಪಡುತ್ತಾ ಪ್ರಾಣಬಿಟ್ಟು ನರಕಕ್ಕೆ ಹೋದನು. ಯಾವ ಪ್ರಕಾರ ಆ ಧೂರ್ತನು ಭೋಗಾಸಕ್ತನಾದುದರಿಂದ ಈ ವಿಪತ್ತಿನಲ್ಲಿ ಬಿದ್ದನೋ ಅದೇ ರೀತಿ ಸ್ತ್ರೀಯ ಪ್ರೇಮದಲ್ಲಿ ಅನುರಕ್ತನಾದ ಮನುಷ್ಯನು ಮರಣ ಹೊಂದುತ್ತಾನೆ.

ಒಬ್ಬ ಹೇಡಿ ಮನುಷ್ಯನು ಭವರೂಪಿ ವನದಲ್ಲಿ ಹೋಗುತ್ತಿದ್ದನು. ಮೃತ್ಯು ಎಂಬ ವೇಗವಾನ ಆನೆಯು ಅವನನ್ನು ಬೆನ್ನಟ್ಟಿತು. ಇದರ ಭಯದಿಂದ ಅವನು ಓಡ ಲಾರಂಭಿಸಿದನು.

೬

## ಜನ್ಮಕೂಪದ ದೃಷ್ಟಾಂತ ಮತ್ತು ಜಂಬೂಸ್ವಾಮಿ ಹಾಗೂ ವಿಧ್ಯುಚ್ಚೋರರ ಪ್ರವ್ರಜ್ಯ

ಓಡುತ್ತಾ-ಓಡುತ್ತಾ ಅವನು ಒಂದು ವಿಧಿವಿಹಿತ ಜನ್ಮರೂಪಿ ಕೂಪದಲ್ಲಿ ಹೋಗಿ ಬಿದ್ದನು. ಅದು ಕುಲರೂಪಿ ವೃಕ್ಷದ ಬೇರುಗಳ ಜಾಲದಿಂದ ಆಚ್ಛಾದಿತ ವಾಗಿದ್ದಿತು. ಕೂಪದ ಮಧ್ಯದಲ್ಲಿಯೇ ಅವನು ಉತ್ಕೃಷ್ಟ ಆಯುರೂಪಿ ಬಳ್ಳಿಯಿಂದ ತೂಗಾಡತೊಡಗಿದನು. ಅಲ್ಲಿ ಅವನಿಗೆ ಪಂಚೇಂದ್ರಿಯ ರೂಪಿ ಮಧು ಬಿಂದುವಿನ ಸುಖವು ಪ್ರಾಪ್ತವಾಯಿತು. ಆದರೆ ಆ ಬಳ್ಳಿಯನ್ನು ಕೃಷ್ಣನ ಹಾಗೆ ಕರಿಯ ಮತ್ತು ಬಿಳಿಯ ವರ್ಣಗಳಿಂದ ವಿಭಿನ್ನವಾದ ರಾತ್ರಿ ಮತ್ತು ದಿನರೂಪೀ ಇಲಿಯು ಕಚ್ಚಿ ಹಾಕಿತು. ಆ ಬಳ್ಳಿಯು ಕತ್ತರಿಸಲ್ಪಟ್ಟಿದ್ದರಿಂದ ಅವನು ಜೀವ, ನರಕರೂಪಿ ಭಯಂಕರ ಸರ್ಪದ ಬಾಯಲ್ಲಿ ಹೋಗಿ ಬಿದ್ದನು. ಅಲ್ಲಿ ಅವನು ಐದು ಪ್ರಕಾರದ ಘೋರ ದುಃಖಗಳನ್ನು ಭೋಗಿಸಬೇಕಾಯಿತು. ಕುಮಾರನ ಈ ದೃಷ್ಟಾಂತವನ್ನು ಕೇಳಿ ಆ ಎಲ್ಲಾ ಶ್ರೋತೃಗಳು ಅರ್ಥಾತ್ ಕುಮಾರನ ತಾಯಿ, ಚೋರ ಮತ್ತು ಮರಕತ ಮಣಿ ಹಾಗೂ ಸುವರ್ಣ ಸಮಾನವಾದ ಮನೋಹರ ವರ್ಣವುಳ್ಳ ಆ ಕನ್ಯಾಮಣಿಗಳಿಗೆ ಧರ್ಮದಲ್ಲಿ ಶ್ರದ್ಧೆಯು ಉತ್ಪನ್ನವಾಯಿತು. ಇದೇ ಸಮಯದಲ್ಲಿ ಆಕಾಶದಲ್ಲಿ ಸೂರ್ಯನ ಉದಯವಾಯಿತು. ಮತ್ತು ಜಂಬೂಸ್ವಾಮಿಯು ಮನೆಯಿಂದ ಹೊರ ಟನು. ರಾಜ ಕುಣಿಕನು ಗಜಗಾಮೀ ಜಂಬೂಸ್ವಾಮಿಯ ನಿಷ್ಕ್ರಮಣ ಅಭಿಷೇಕ ಮಾಡಿದನು. ಕುಮಾರನು ರತ್ನಗಳ ಕಿರಣಗಳಿಂದ ಸ್ಥಿರಾಯಮಾನವಾದ ಹಾಗೂ ಶ್ರೇಷ್ಠ ಮಂಗಳ ದ್ರವ್ಯಗಳಿಂದ ತುಂಬಲ್ಪಟ್ಟ ಪಲ್ಲಕ್ಕಿಯಲ್ಲಿ ಆರೂಢನಾದನು. ಆ ತೇಜಸ್ವಿ ಕುಮಾರನು ನಾನಾ ಕಲ್ಪವೃಕ್ಷಗಳ ಪುಷ್ಪಗಳಿಂದ ಶೋಭಾಯಮಾನ ವಾದ ವಿಪುಲಾಚಲ ಪರ್ವತದ ಮಸ್ತಕವನ್ನು ತಲುಪಿ, ತನ್ನ ಪುತ್ರ ಮತ್ತು ಸ್ತ್ರೀ ಮೋಹ ಪರಿತ್ಯಾಗ ಮಾಡುವ ಬ್ರಾಹ್ಮಣ, ವಣಿಕ ಹಾಗೂ ಕ್ಷತ್ರಿಯ ಪುತ್ರರ ಸಹಿತ ಮತ್ತೂ ವಿಧ್ಯುಚ್ಚೋರ ಹಾಗೂ ಅವನ ಐನೂರು ಜೊತೆಗಾರರಾದ ಚೋರರ ಸಹಿತ, ವೀರ ಜಿನೇಂದ್ರರ ಹತ್ತಿರ ಧರ್ಮನಂದೀ ಸುಧರ್ಮಾಚಾರ್ಯರಿಂದ ತಪಗ್ರಹಣ

ಮಾಡುವರು, ಹಾಗೂ ಶ್ರೇಷ್ಠ ಯತಿಗಳಾಗುವರು ಮತ್ತು ಆ ಮೇಲೆ ಸುಧರ್ಮ ಆಚಾರ್ಯರ ಕರ್ಮಗಳ ವಿನಾಶಮಾಡಿ ನಿರ್ವಾಣ ಪಡೆದಮೇಲೆ, ಆ ಜಿನೇಂದ್ರ ಭಗವಾನರ ಚರಣಗಳಲ್ಲಿ ಕೈಜೋಡಿಸಿ ಶ್ರುತಕೇವಲಿಗಳಾಗುವರು.

೭

## ಜಂಬೂ ಸ್ವಾಮಿಗೆ ಕೇವಲ ಜ್ಞಾನ-ಪ್ರಾಪ್ತಿ

ಇದಾದ ಹನ್ನೆರಡು ವರ್ಷಗಳಾದ ಮೇಲೆ ಅವನು ಮನಸ್ಸನ್ನು ಸಮಾಧಿಯಲ್ಲಿ ಸ್ಥಿತ ಮಾಡಿ ರಾಗದ್ವೇಷರಹಿತನಾಗುತ್ತಾ ಪಂಚಮಜ್ಞಾನ ಅರ್ಥಾತ್ ಕೇವಲಜ್ಞಾನ ವನ್ನು ಹೊಂದುವನು. ಅವನ ಶಿಷ್ಯರು ಭವನಾಮೀ ಋಷಿಗಳಾಗುವರು. ಜಂಬೂ ಸ್ವಾಮಿಯು ಮಹೀತಲದ ಮೇಲೆ ವಿಹಾರ ಮಾಡುತ್ತಾ ದಶಗುಣಿತ ನಾಲ್ಕು ಅರ್ಥಾತ್ ನಾಲ್ವತ್ತು ವರ್ಷಗಳ ತನಕ ಸಮಸ್ತ ಭವ್ಯಜೀವಗಳಿಗೆ ಧರ್ಮದ ಉಪದೇಶ ಕೊಡುವನು ಮತ್ತು ಅವರ ಮಿಥ್ಯಾತ್ವ ಮತ್ತು ಮೋಹದ ವಿಧ್ವಂಸ ಮಾಡುವನು, ಈ ಪ್ರಕಾರವಾಗಿ ಜಂಬೂಸ್ವಾಮಿಯು ಅಂತಿಮ ಕೇವಲಿಯಾಗುವನು ಮತ್ತು ನನ್ನ ವಿಶಾಲವಂಶರೂಪಿ ಶಿಷ್ಯ-ಪರಂಪರೆಯ ಉನ್ನತಿಯಾಗುವುದು.

ಇತಿ ಜಂಬೂಸ್ವಾಮಿಯ-ಪ್ರವ್ರಜ್ಯ ವಿಷಯಕವಾದ ಚತುರ್ಥ ಸಂಧಿ ಸಮಾಪ್ತವಾದುದು.

# ಸಂಧಿ ೫

# ಚಂದನಾ–ತಪಗ್ರಹಣ

## ೧

## ರಾಜಾ ಚೇಟಕ, ಅವನ ಪುತ್ರ–ಪುತ್ರಿಯರು ಹಾಗೂ ಚಿತ್ರಪಟ

"ಹೇ ಭಗವಾನ್, ಶರೀರದಲ್ಲಿ ಚಂದನದ ಸುಂಗಧವುಳ್ಳ, ಹಾಗೂ ಮಿಥ್ಯಾತ್ವ ರೂಪಿ ಅಂಧಕಾರವನ್ನು ದೂರ ಮಾಡಿರುವಂಥಹ ಆ ಆರ್ಯಿಕಾ ಚಂದನಳ ಚರಿತ್ರೆಯನ್ನು ಕೇಳಿಸಿರಿ"ಎಂದು ಧರಾಧೀಶ ಶ್ರೇಣಿಕನು ಕೇಳಿದನು. ರಾಜನ ಈ ಪ್ರಶ್ನೆಯನ್ನು ಕೇಳಿ ಗೌತಮ ಮುನಿವರನು ಹೇಳಿದನು–'ಹೇ ಶ್ರೇಣಿಕನೇ, ನಾನು ಚಂದನಾಳ ವೃತ್ತಾಂತವನ್ನು ಹೇಳುತ್ತೇನೆ, ನೀನು ಕೇಳುವವನಾಗು. ಸಿಂಧು–ಪ್ರದೇಶದಲ್ಲಿ [ನದೀ ಪ್ರಧಾನ ವಿದೇಹ ಹೆಸರಾಂತ ಪ್ರದೇಶ] ವೈಶಾಲಿ ಹೆಸರಿನ ನಗರವಿದೆ. ಅಲ್ಲಿಯ ಮನೆಗಳು ತಮ್ಮ ಶೋಭೆಯಿಂದ ದೇವತೆಗಳ ವಿಮಾನಗಳ ಶೋಭೆಯನ್ನೂ ಸಹ ಗೆಲ್ಲುತ್ತವೆ. ಆ ನಗರದಲ್ಲಿ ಚೇಟಕ ಹೆಸರಿನ ನರೇಶ್ವರನು ನಿವಾಸ ಮಾಡುತ್ತಿದ್ದಾನೆ. ಅವನ ಮಹಾರಾಣಿ ಮಹಾಸತಿ ಸುಭದ್ರೆಯಿಂದ ಅವನಿಗೆ ಧನದತ್ತ, ಧನಭದ್ರ, ಉಪೇಂದ್ರ, ಶಿವದತ್ತ, ಹರಿದತ್ತ, ಕಂಬೋಜ, ಕಂಪನ, ಪ್ರಯಂಗ, ಪ್ರಭಂಜನ ಮತ್ತು ಪ್ರಭಾಸ ಹೆಸರಾಂಕಿತ ಪುತ್ರರಾದರು. ಅವನಿಗೆ ಅತ್ಯಂತ ರೂಪವತಿಯರಾದ ಏಳು ಜನ ಪುತ್ರಿಯರೂ ಆದರು. ಅವರ ಹೆಸರುಗಳು ಈ ರೀತಿ ಇದ್ದವು–ಶ್ರೇಯಂಸಿನೀ ಸುಭಗಾ, ಪ್ರಿಯಕಾರಿಣೀ, ಜನಮನೋಹಾರಿಣಿ, ಮೃಗಾವತಿ, ಸುಪ್ರಭಾದೇವಿ, ಪ್ರಭಾವತಿ, ಚೇಲಿನೀ, ಬಾಲಹಂಸಲೀಲಾಗಾಮಿನಿ, ಜ್ಯೇಷ್ಠಾ ಮತ್ತು ವಿಶೇಷ ರೂಪದಿಂದ ಪೂಜ್ಯಳಾದ ಚಂದನಾ ಈ ಎಲ್ಲಾ ಕನ್ಯೆಯರು ತಮ್ಮ ರೂಪ ಸಂಪತ್ತಿನಿಂದ ಇಂದ್ರನ ಮನಸ್ಸನ್ನೂ ಸಹ ಅನುರಕ್ತ ಮಾಡುತ್ತಿದ್ದರು. ಪ್ರಿಯಕಾರಿಣಿಯ ವಿವಾಹ ಶ್ರೇಷ್ಠ ನಾಥವಂಶದ ಕುಂಡಪುರ ನರೇಶ ಸಿದ್ಧಾರ್ಥನ ಜೊತೆಯಲ್ಲಿ ಮಾಡಿ ಮುಗಿಸಿದರು. ಮಂದಗಾಮಿನಿ ಮೃಗಾವತಿಯನ್ನು ಕೌಶಾಂಬಿಯ ಸೋಮವಂಶದ ರಾಜ ಶತಾನಿಕನಿಗೆ ಕೊಟ್ಟು ವಿವಾಹ ಮಾಡಿದರು. ಚಂದ್ರ ಕಿರಣಗಳ ಸಮಾನ ಹೊಳೆಯುವ ಉಗುರುಗಳನ್ನು ಹೊಂದಿದ ಸುಪ್ರಭೆಯ ವಿವಾಹವು ಸೂರ್ಯವಂಶದಲ್ಲಿ ಉತ್ಪನ್ನವಾದ ದಶರಥ ರಾಜನ ಜೊತೆಯಲ್ಲಿ ಆಯಿತು. ಊರ್ವಶಿ ಮತ್ತು ರಂಭೆಯ ಸಮಾನವಾದ ಪ್ರಭಾವತಿಯು ಉದ್ದಾಯನ ನರೇಶನ ರಾಣಿಯಾದಳು. ಆದರೆ ಮಹೀಪುರದ ರಾಜ ಸಾತ್ಯಕಿಯು ಕಾಮದ ಬಾಣದಿಂದ ಪ್ರೇರಿತನಾಗಿಯೂ ಸಹ ಆ ಕನ್ಯೆಯರ ಪೈಕಿ ಯಾರನ್ನೂ ಸಹ ಪಡೆಯದೆ ಕ್ರುದ್ಧನಾದನು. ಅವನು ದುರ್ಭಾವನೆಯ ವಶವಾಗಿ ಜ್ಯೇಷ್ಠಳನ್ನು ಬಲಪೂರ್ವಕವಾಗಿ ಪ್ರಾಪ್ತಹೊಂದಲು ಅವಳ ತಂದೆಯ ಜೊತೆಯಲ್ಲಿ

ಯುದ್ಧ ಮಾಡಲು ಬಂದು ತಲುಪಿದನು. ಆದರೆ ಅವನು ಯುದ್ಧದಲ್ಲಿ ಚೇಟಕ ರಾಜನಿಂದ ಪರಾಜಿತನಾಗಿ ಓಡಿಹೋದನು. ಚೇಟಕ ರಾಜನ ಖಡ್ಗದ ಏಟನ್ನು ಸಹಿಸುವರು ಯಾರಿದ್ದಾರೆ? ಇದರಿಂದ ರಾಜ ಸಾತ್ಯಕಿಯು ಅತ್ಯಂತ ದುಸ್ಸಹ ವಿರಕ್ತಿಯ ವಶನಾಗಿ ದಮವರ ಮುನಿಯ ಹತ್ತಿರ ಪ್ರವ್ರಜಿತನಾಗಿಹೋದನು.

ಒಂದು ದಿನ ರಾಜ ಚೇಟಕನ ಹತ್ತಿರ ಒಬ್ಬ ಚಿತ್ರಕಾರನು ಬಂದನು ಮತ್ತು ಅವನು ರಾಜಕುಮಾರಿಯರ ಸುಂದರ ಚಿತ್ರಪಟಗಳನ್ನು ತಯಾರಿಸಿದನು (ಸಿದ್ಧಪಡಿಸಿದನು). ತಮ್ಮ ಸೌಂದರ್ಯದಿಂದ ಕಾಮ-ವಿಲಾಸ ಭಾವನೆಗಳನ್ನು ಉತ್ಪನ್ನ ಮಾಡುವ ವಂಥಹ ತನ್ನ ಪುತ್ರಿಯರ ಚಿತ್ರಗಳನ್ನು ರಾಜನು ನೋಡಿದನು. ಆದರೆ ಅವನು ಕದಲೀ-ಕಂದಲ ಸಮಾನವಾದ ಕೋಮಲ ಚೇಲಿನಿಯ ತೊಡೆ (ಜಂಘೆಯ) ಯ ಮೇಲೆ ಮಸಿಯ ಬಿಂದು ಬಿದ್ದಿದ್ದುದನ್ನು ನೋಡಿದನು. ಚಿತ್ರಕಾರನು ರಾಜನ ಮನಃಸ್ಥಿತಿಯನ್ನು ಅರಿತನು. ಅವನು ಚಿತ್ರಶಾಸ್ತ್ರದ ಮರ್ಮವನ್ನು ತಿಳಿಸಿ ಹೇಳುತ್ತಾ ಈ ರೀತಿ ನುಡಿದನು-ಹೇ ಮಹಾರಾಜ, ಈ ಬಿಂದುವಿಲ್ಲದೆ ಈ ಚಿತ್ರ ಶೋಭಾಯಮಾನವಾಗದು. ಇದರ ಮಧ್ಯೆ ಚೇಲಿನಿಯ ತಾಯಿಯು ಹೋಗಿ ಚೇಲಿನಿಯ ಜಂಘಾಸ್ಥಳವನ್ನು ನಿರೀಕ್ಷಣೆ ಮಾಡಿದಳು ಮತ್ತು ಅವಳು ಅಲ್ಲಿಯೂ ಸಹ ತಿಲಮಾತ್ರದ ಕರಿಯ ಬಿಂದುವನ್ನು ನೋಡಿದಳು. ಆಗ ಆ ವಿವೇಕಶಾಲೀ ತಾಯಿಯು ಬಂದು ಈ ಮಾತನ್ನು ರಾಜನಿಗೆ ಹೇಳಿದಳು. ಇದರಿಂದ ನರೇಂದ್ರನು ಬಹಳ ಕೋಪಗೊಂಡನು (ರೂಷ್ಮಗೊಂಡನು). ಅವನ ಕ್ರೋಧದಿಂದ ಭಯಭೀತನಾಗಿ ಆ ಚಿತ್ರಕಾರನು ಸದ್ದಿಲ್ಲದೆ ವೈಶಾಲೀ ನಗರವನ್ನು ಬಿಟ್ಟು ಓಡಿಹೋದನು. ಅವನು ರಾಜಗೃಹವನ್ನು ತಲುಪಿದನು ಮತ್ತು ಅಲ್ಲಿ ಅವನು ರಾಜಕುಮಾರಿ ಚೇಲಿನಿಯ ಚಿತ್ರಪಟವನ್ನು ರಾಜನ ಉದ್ಯಾನ ಮಂದಿರದಲ್ಲಿ ಜಿನ-ಪ್ರತಿಬಿಂಬದ ಹತ್ತಿರ ಇಟ್ಟುಬಿಟ್ಟನು.

## ೨

## ಚಿತ್ರಪಟವನ್ನು ನೋಡಿ ರಾಜ ಶ್ರೇಣಿಕನು ಚೇಲನಳ ಮೇಲೆ ಮೋಹಿತನಾಗುವುದು ಮತ್ತು ರಾಜಕುಮಾರನಿಂದ ಅವಳ ಅಪಹರಣೆ

ಗೌತಮ ಗಣಧರನು, ರಾಜ ಶ್ರೇಣಿಕನಿಗೆ ಹೇಳತೊಡಗಿದನು-ಹೇ ರಾಜನ್, ನೀನು ಆ ಚಿತ್ರಪಟವನ್ನು ನೋಡಿದೆ ಮತ್ತು ಅದರ ವಿಷಯವನ್ನು ತನ್ನ ಕಿಂಕರರನ್ನು ಕೇಳಿದೆ. ಅವರು ಈ ರೀತಿ ತಿಳಿಸಿದರು-ಹೇ ಶತ್ರುಭಯಂಕರ ನರೇಶ, ಈ ಚಿತ್ರಬಿಂಬ ಚೇಟಕ ರಾಜನ ವಿನಯಶೀಲ ಪುತ್ರಿಯರದ್ದಾಗಿವೆ. ಇವರಲ್ಲಿ ಮೊದಲು ನಾಲ್ವರ ವಿವಾಹವಾಗಿಹೋಗಿದೆ, ಆದರೆ ಅವಳಿಗಿಂತ ಚಿಕ್ಕವರಾದ ಮೂವರಲ್ಲಿ ಇಬ್ಬರು ಯೌವನ ಪ್ರಾಪ್ತರಾಗಿದ್ದಾರೆ, ಆದಾಗ್ಯೂ ಇದುವರೆಗೆ ಅವರ ವಿವಾಹ-ಸಂಬಂಧ ಯಾರ ಜೊತೆಯಲ್ಲೂ ಆಗಿಲ್ಲ. ಹೇ ಖಲರೂಪೀ ಅಂಧಕಾರದ ಸೂರ್ಯನೇ, ಎಲ್ಲರಿ

ಗಿಂತ ಚಿಕ್ಕ ಕನ್ಯೆ (ಚಂದನ) ಇನ್ನೂ ಅಬೋಧಳಾಗಿದ್ದಾಳೆ. ತನ್ನ ಕಿಂಕರರ ಈ ವಚನಗಳಿಂದ ನೀನು ಮದನನ ಬಾಣದಿಂದ ಆಹತನಾದೆ.

ಆಗ ನಿನ್ನ ಮಂತ್ರಿಗಳು ನಿನ್ನ ಪುತ್ರನ ಹತ್ತಿರ ಈ ರೀತಿ ಹೇಳಿದರು "ಹಾಯ್, ಹಾಯ್, ಹೇ ಕುಮಾರನೇ, ನಿನ್ನ ಪಿತನು ಕಾಮಾಸಕ್ತನಾಗಿ ಈ ಅವಸ್ಥೆಯನ್ನು ಹೊಂದಿದ್ದಾರೆ. ಹೇಗೆ ಸೂರ್ಯನು ಅತ್ಯಂತ ರಕ್ತವರ್ಣನಾಗಿ ಎಲ್ಲರಿಗೂ ದೃಷ್ಟಿ ಗೋಚರನಾಗುವನೋ ಹಾಗೆ ಅವರು ರಾಜ ಚೇಟಕನ ಪುತ್ರಿಯ ಮೇಲೆ ಅತ್ಯಂತ ಆಸಕ್ತರಾಗಿದ್ದಾರೆ. ಆದರೆ ಅವರ ಪ್ರಸ್ತಾವಿತಶ್ವಸುರ ಅರ್ಥಾತ್ ರಾಜ ಚೇಟಕನು, ನಿಮ್ಮ ಪಿತನು ವಯಸ್ಸಿನಲ್ಲಿ ವೃದ್ಧರಾಗಿರುವುದರಿಂದ ತನ್ನ ಕನ್ಯೆಯನ್ನು ಕೊಡಲು ಒಪ್ಪುತ್ತಿಲ್ಲ ನೀನು ನಿನ್ನ ಬುದ್ಧಿ ಮತ್ತು ಧೈರ್ಯದ ಒಳ್ಳೆ ಪರಿಚಯವನ್ನು ಕೊಡಲು ಒಳ್ಳೆ ಸಮಯ" ಗೌತಮ ಮುನಿಯು ರಾಜ ಶ್ರೇಣಿಕನಿಗೆ ಹೇಳುತ್ತಾರೆ ಏನೆಂದರೆ, ಹೇ ರಾಜನ್, ಮಂತ್ರಿಯ ಉಕ್ತ ಮಾತನ್ನು ಕೇಳಿ ರಾಜಕುಮಾರನು ನಿನ್ನ ಚಿತ್ರಪಟ ವನ್ನು ತಯಾರುಮಾಡಿಸಿದ. ಚಿತ್ರಪಟ ತಯಾರಾದ ಮೇಲೆ ಒಬ್ಬ ಭಟನು ಅದನ್ನು ಕುಮಾರನ ನಿವಾಸಸ್ಥಾನಕ್ಕೆ ತೆಗೆದುಕೊಂಡು ಹೋದನು. ಮತ್ತೆ ಆ ರಾಜಕುಮಾರನು ಪಂಡಿತ ವಣಿಕನ ವೇಷ ಹಾಕಿಕೊಂಡು ವೈಶಾಲಿನಗರವನ್ನು ತಲುಪಿದನು. ರಾಜ ಕನ್ಯೆಯರು ಚಿತ್ರಪಟದಲ್ಲಿ ಲಿಖಿತವಾದ ನವವಯಸ್ಕ ಹಾಗೂ ಸುಂದರ ವೇಷಯುಕ್ತ ಪುರುಷನನ್ನು ನೋಡಿ ಅವನ ಸಂಬಂಧವಾಗಿ ವಿಚಾರಿಸಿದರು. ಆಗ ವಣಿಕ ವೇಷಧಾರಿ ರಾಜಕುಮಾರನು ಹೇಳಿದನು–"ಏನು, ಇವರು ಮಗಧ ನರೇಂದ್ರ ಶ್ರೇಣಿಕರೆಂದು ನಿಮಗೆ ಗೊತ್ತಿಲ್ಲವೆ ?" ಇದನ್ನು ಕೇಳಿ ಇಬ್ಬರೂ ಕನ್ಯೆಯರ ನೇತ್ರಗಳೂ ಮದೋನ್ಮತ ವಾದವು. ಮತ್ತು ಪ್ರೇಮರೂಪಿ ಕೇಶರದಿಂದ ರಂಜಿತವಾದುವು. ಇಬ್ಬರೂ ಅಕ್ಕ ತಂಗಿ ಯರಲ್ಲಿ ಚೇಲಿನಿಯು ಅಧಿಕ ಚತುರಳಾಗಿದ್ದಳು. ಅವಳು ಕಾಮಪೀಡಿತಳಾಗಿ ಹಾಗೂ ರತಿಲೋಭಿಯಾಗಿ ಅಕ್ಕ ಜ್ಯೇಷ್ಠಾಳಿಗೆ ಛಲಪೂರ್ವಕವಾಗಿ ಹೇಳಿದಳು–"ನೀವು ನಿಮ್ಮ ನಿವಾಸಕ್ಕೆ ಹೋಗಿ ಆ ಭೂಷಣಗಳನ್ನು ತೆಗೆದುಕೊಂಡು ಬನ್ನಿ. ಆಗ ನಾವಿಬ್ಬರೂ ಇಲ್ಲಿಂದ ಸದ್ದಿಲ್ಲದೆ ಬಚ್ಚಿಟ್ಟುಕೊಂಡು ಹೊರಟುಹೋಗೋಣ, ಹಾಗೂ ಭ್ರಮರ ಸಮೂಹದ ಸಮಾನ ನೀಲ ಮತ್ತು ಸ್ನಿಗ್ಧ ಹಾಗೂ ಮೃದು ಕೇಶಯುಕ್ತ ಮಗಧೇಶನ ಕಂಠಕ್ಕೆ ನೇತುಬಿದ್ದು ಅವರ ಆಲಿಂಗನ ಮಾಡೇಣ" ಆದರೆ ಜ್ಯೇಷ್ಠಾಳು ಆ ಭೂಷಣ ಗಳನ್ನು ತೆಗೆದುಕೊಂಡು ಹಿಂದಿರುಗಿ ಬಂದಾಗ ಅಲ್ಲಿ ಮದನೋತ್ಸುಕಳಾದ ಚೇಲಿನಿ ಯನ್ನು ನೋಡಲಿಲ್ಲ.

೩

## ಜ್ಯೇಷ್ಠಾಳ ವೈರಾಗ್ಯ, ಚೇಲಿನಿ-ಶ್ರೇಣಿಕರ ವಿವಾಹ ಹಾಗೂ ಮನೋವೇಗವುಳ್ಳ ವಿದ್ಯಾಧರನ ಮೂಲಕ ಚಂದನಾಳ ಅಪಹರಣ, ಮತ್ತೂ ಇರಾವತಿಯ ತೀರದ ಮೇಲೆ ಅವಳ ಪರಿತ್ಯಾಗ

ತನ್ನ ಸಹೋದರಿಯ ವಿಯೋಗದಿಂದ ಶೋಕಸಂತಪ್ತಳಾಗಿ ಜ್ಯೇಷ್ಠಾಳು, ಯಶೋಮತಿ ಎಂಬ ಆರ್ಯಿಕಳ ಹತ್ತಿರ ಹೋಗಿ ಸಮಾಧಾನತಂದುಕೊಂಡಳು ಮತ್ತು ಅವಳಿಂದಲೇ ತಪಶ್ಚರಣದ ದೀಕ್ಷೆ ತೆಗೆದುಕೊಂಡು ಇಂದ್ರಿಯಗಳನ್ನು ಗೆಲ್ಲುತ್ತಾ ಅವಳ ಚರಣಗಳಲ್ಲೇ ಇರತೊಡಗಿದಳು. ಆ ಕಡೆ ಚೇಲಿನಿಯನ್ನು ನಿನ್ನ ಪುತ್ರನು ರಾಜಗೃಹಕ್ಕೆ ಕರೆತಂದನು, ಮತ್ತು ಅವನನ್ನು ನೀನು ಅತ್ಯಂತ ಸ್ನೇಹ ಭಾವದಿಂದ ಅವಲೋಕನೆ ಮಾಡಿದೆ. ನೀನು ಜಯ ಜಯ ಘೋಷದ ಸಮೇತ ಆ ಸುಂದರಿಯನ್ನು ವಿವಾಹವಾದೆ ಮತ್ತು ಸೌಹಾರ್ದಪೂರ್ಣ ಭಾಗ್ಯದಿಂದ ಅವಳನ್ನು ತನ್ನ ಮನೆಗೆ ಕರೆತಂದೆ. ನೀನು ಚೇಲನಾಳನ್ನು ಮಹಾದೇವಿಯ ಸ್ಥಾನದಲ್ಲಿ ಪ್ರತಿಷ್ಠಾಪಿಸಿದೆ. ಈ ರೀತಿ ಅವಳು ರತಿ ಮತ್ತು ನೀನು ಕಾಮದೇವನ ಸಮಾನವಾಗಿ ಸುಖದಿಂದ ಇರತೊಡಗಿದಿರಿ.

ಅಲ್ಲಿ ಚೇಟಕನ ಎಲ್ಲರಿಗಿಂತ ಚಿಕ್ಕ ಪುತ್ರಿ ಚಂದನಳು ಧರ್ಮಭಾವ ಪ್ರೇರಿತಳಾಗಿ ಸುಕ್ಷಾಂತಿ ಎಂಬ ಹೆಸರಿನ ಆರ್ಯಿಕಾಳ ಹತ್ತಿರ ಶ್ರಾವಕ ವ್ರತವನ್ನು ಕೈಗೊಂಡಳು. ಸಮ್ಯಕ್ತ್ವಭಾವದಿಂದ ಸುಂದರ–ಗುಣ–ಪ್ರಚುರ ವೇತಾಢ್ಯಗಿರಿಯ ದಕ್ಷಿಣ ಶ್ರೇಣಿಯಲ್ಲಿ ಸ್ಥಿತ ಸುವರ್ಣನಾಭ ಎಂಬ ಪುರದಲ್ಲಿ ಮನೋವೇಗನೆಂಬ ವಿಧ್ಯಾದರನು ಇದ್ದನು. ಒಂದು ದಿನ ಅವನು ನಿತ್ಯವೂ ವಸಂತ ಋತುವು ಇರುತ್ತಿದ್ದ ಮತ್ತು ಚಂದನ ವೃಕ್ಷಗಳ ಸುಗಂಧವಿರುತ್ತಿದ್ದ ಉಪವನಕ್ಕೆ ತನ್ನ ಗೃಹಿಣಿಯ ಜೊತೆಯಲ್ಲಿ ಆಕಾಶದಲ್ಲಿ ವಿಹರಿಸುತ್ತಾ ಬಂದನು. ಅಲ್ಲಿ ಅವನು ಚಂದನ ಕುಮಾರಿಯನ್ನು ನೋಡಿದನು. ಅವಳನ್ನು ನೋಡುತ್ತಲೇ ಅವನು ಹಿಂದಿರುಗಿ ಹೊರಟು ತನ್ನ ಗೃಹಿಣಿಯನ್ನು ಮನೆಯಲ್ಲಿ ಬಿಟ್ಟು ಮತ್ತೆ ಪುನಃ ಅದೇ ಉಪವನಕ್ಕೆ ಹೋಗಿ ಕನ್ಯೆಯ ಅಪಹರಣ ಮಾಡಿದನು. ಅವಳನ್ನು ಕರೆದುಕೊಂಡು ತನ್ನ ಮನೆಗೆ ಪುನಃ ಹೋಗುತ್ತಿದ್ದಾಗ ಅವನು ಆಕಾಶದಿಂದ ಇಳಿಯುತ್ತಿದ್ದ ಆಲೋಕಿನಿ ವಿಧ್ಯಾದೇವಿಯನ್ನು ನೋಡಿದನು. ಮನೋವೇಗ–ನಿನ್ನ ಪತ್ನಿಯು ನೀನು ಮಾಯಾಚಾರಿಯೆಂದು ತಿಳಿದುಕೊಂಡಿದ್ದಾಳೆ ಮತ್ತು ರೋಷಪೂರ್ಣವಾಗಿ ನಿನ್ನ ವಿದ್ಯೆಯನ್ನು ತನ್ನ ಎಡಗಾಲಿನಿಂದ ಒದ್ದು ತಿರಸ್ಕರಿಸಿದ್ದಾಳೆ. ನೀನು ಈ ಪ್ರಕಾರವಾಗಿ ಈ ಕುಮಾರಿಯನ್ನು ಏಕೆ ಅಪಹರಿಸಿದೆ ? ಇದರಿಂದ ನಿನ್ನ ಗೃಹಿಣಿ ಕೋಪಾಗ್ನಿಯಿಂದ ಪ್ರಜ್ವಲಿತಳಾಗುತ್ತಿದ್ದಾಳೆ. ಎಂದು ಆ ದೇವಿಯು ಹೇಳಿದಳು. ಇದನ್ನು ಕೇಳಿ ಮನೋವೇಗನು

ನಿತ್ಯವೂ ತನ್ನ ಹೃದಯದಲ್ಲಿ ವಿರಾಜಮಾನವಾಗಿರುವ ತನ್ನ ಕಾಂತೆಗೆ ಭಯಭೀತನಾದನು. ಆ ವಿಧ್ಯಾಧರನು ವಿಶಾಲ ಇರಾವತಿಯ ತೀರದ ಮೇಲೆ ಸ್ಥಿತಭೂತರಮಣ ಎಂಬ ಹೆಸರಿನ ವನದ ಮಧ್ಯೆ ಫಣೀಶ್ವರ (ನಾಗೇಶ್ವರ ಅಥವಾ ಗರುಡ) ವಿದ್ಯೆಯನ್ನು ಸಿದ್ಧ ಮಾಡಿಕೊಂಡನು.

೪

## ವನದಲ್ಲಿ ಚಂದನಳ ತ್ಯಾಗ, ಭಿಲ್ಲರ ಮೂಲಕ ರಕ್ಷಣೆ ಹಾಗೂ ಕೌಶಾಂಬಿಯ ಸೇಠ್ ಧನದತ್ತನ ಮನೆಗೆ ಆಗಮನ

ಮನೋವೇಗನು ಪತ್ರಲಘು ಎಂಬ ತನ್ನ ವಿದ್ಯೆಯ ಬಲದಿಂದ ಚಂದನಳನ್ನು ಆ ವನದಲ್ಲಿ ಎಸೆದನು ಮತ್ತು ಅವಳು ಅದರದೇ ಪ್ರಭಾವದಿಂದ ಭೂಮಿ ತಳದ ಮೇಲೆ ಇಳಿದಳು. ಅವಳು ತನ್ನ ಚಿತ್ತದಲ್ಲಿ ಪಂಚಾಕ್ಷರ ಮಂತ್ರದ ಧ್ಯಾನಮಾಡುತ್ತಾ ಮತ್ತು ನಿರ್ಮಲ ಧರ್ಮಧ್ಯಾನವನ್ನು ಉತ್ಪನ್ನಮಾಡತೊಡಗಿದಳು.

ರಾತ್ರಿ ವ್ಯತೀತವಾಗಿ ಸೂರ್ಯನ ಉದಯವಾದಾಗ ಒಬ್ಬ ಶ್ಯಾಮಾಂಗ ವನಚರನು ಅಲ್ಲಿಗೆ ಬಂದನು. ಅವನ ಹೆಸರು ಕಾಲ ಎಂದಿತ್ತು. ಚಂದನಳು ಅವನಿಗೆ ಜಗತ್ತಿನ ಆಶ್ರಯಭೂತ ಜಿನವಚನಗಳ ಉಪದೇಶ ಮಾಡಿದಳು. ಹಾಗೂ ಸೂರ್ಯನ ಕಿರಣಗಳ ಸಮಾನ ಕಾಂತಿಯುಕ್ತ ಆಭರಣಗಳನ್ನೂ ಕೊಟ್ಟಳು. ಅವನು ಈ ಪ್ರಕಾರವಾಗಿ ಸಂತುಷ್ಟನಾಗಿ ಆ ಸುಂದರಿಯನ್ನು ಭೀಮಶಿಖರವೆಂಬ ಪರ್ವತದ ಹತ್ತಿರ ಒಂದು ಭಯಂಕರೀ ಎಂಬ ಹಳ್ಳಿಯಲ್ಲಿ ಮದ್ಯರಸ-ಪಾನಮಾಡುವ ಸಿಂಹನೆಂಬ ಭಿಲ್ಲರಾಜನಿರುತ್ತಿದ್ದ ಕಡೆ ಕರೆದುಕೊಂಡು ಹೋದನು. ಕಾಲ-ವನಚರನು ಬಾಲಿಕೆಯನ್ನು ಅವನಿಗೇ ಸಮರ್ಪಿಸಿದನು ಮತ್ತು ಅವನೂ ಸಹ ಕಾಮಾಸಕ್ತನಾಗಿ ಅವಳನ್ನು ಬಚ್ಚಿಟ್ಟುಕೊಂಡನು. ಆ ಪರಮೇಶ್ವರಿಯು ಅಲ್ಲಿ ಕಾಯೋತ್ಸರ್ಗ ಮುದ್ರೆಯಲ್ಲಿ ಧ್ಯಾನ ಮಾಡತೊಡಗಿದಳು. ಆ ಅವಸ್ಥೆಯಲ್ಲಿ ಆ ವನಕೇಸರೀ ವನಚರನು ಅವಳನ್ನು ಆಲಿಂಗಿಸಲು ಉದ್ಯುತನಾದಾಗ ಅವನು ಬೇರುಕಿತ್ತ ವೃಕ್ಷದ ಸಮಾನವಾಗಿ ಸ್ಥಬ್ದವಾಗಿ ಹೋದನು ಮತ್ತು ಶಾಸನ ದೇವತೆಯು ಅವನನ್ನು ಈರೀತಿ ನಿಂದಿಸಿತು—ಕಿರಾತನೇ, ನೋಡು, ಎಚ್ಚರಿಕೆ! ನೀನು ಆ ಪುತ್ರಿಗೆ ನಿನ್ನ ಕೈ ತಗುಲಿಸಬೇಡ. ನಿನ್ನನ್ನು ಮೃತ್ಯುವಿನ ಬಾಯಲ್ಲಿ ಹಾಕಿಕೊಳ್ಳಬೇಡ. ಇದನ್ನು ಕೇಳಿ ಆ ಭಿಲ್ಲರಾಜನು ಭೀತನಾಗಿ ಮೌನಿಯಾದನು ಮತ್ತು ಆ ದೇವತೆಯ ಚರಣಯುಗಳಗಳಲ್ಲಿ ಬಂದು ಬಿದ್ದನು. ತತ್ಪಶ್ಚಾತ್ ಆ ನಿಷಾದನ ಮಾತೆಯು ಅವಳಿಗೆ ಸ್ವಾದಿಷ್ಟ ಕಂದ-ಮೂಲ ಹಾಗೂ ಹಣ್ಣುಗಳನ್ನು ಕೊಟ್ಟು ಪೋಷಣೆ ಮಾಡತೊಡಗಿದಳು.

ಈ ಪ್ರಕಾರವಾಗಿ ಅವಳು ಸ್ವಲ್ಪದಿನಗಳ ತನಕ ಇದ್ದಾದ ಮೇಲೆ ಒಂದು ದಿನ ವತ್ಸದೇಶದ ಕೌಶಾಂಬಿ ನಗರದ ವೃಷಭಸೇನನೆಂಬ ಧನವಂತ ವಣಿಕನು ಅಲ್ಲಿಗೆ

ಬಂದನು. ಅವನ ಮಿತ್ರವೀರನೆಂಬ ಒಬ್ಬ ಭಕ್ತ ಕಿಂಕರನು ವನರಾಜ ಸಿಂಹನ ಮಿತ್ರನಾಗಿದ್ದನು.

ಆದ್ದರಿಂದ ಅವನು ಸುಕೃತದ ಜಲಪ್ರವಾಹ ರೂಪ ಭಿಲ್ಲನ ಮನೆಗೆ ಬಂದನು. ವನರಾಜನು ಆ ಕಮಲನಾಳದ ಸಮಾನ ಕೋಮಲವಾದ ಭುಜಗಳುಳ್ಳ ರಾಜಕನ್ಯೆಯನ್ನು ಅವನಿಗೆ ಅರ್ಪಿಸಿದನು ಮತ್ತು ಆ ಭೃತ್ಯನು ಅವಳನ್ನು ತನ್ನ ಕುಲರೂಪಿ ಆಕಾಶದ ಚಂದ್ರ ವೃಷಭಸೇನನೆಂಬ ವಣಿಕನ ಹತ್ತಿರ ಕರೆದುಕೊಂಡು ಬಂದನು. ಒಂದು ದಿನ ಅವಳು ಸೇಠನ ನೀರಡಿಕೆಯನ್ನು ನೋಡಿ ತನ್ನ ಕೇಶವನ್ನು ಕಟ್ಟಿಕೊಂಡು ಜಲದ ಕಲಶವನ್ನು ಎತ್ತಿಕೊಂಡು ಅವನ ಹತ್ತಿರ ಬಂದಳು.

೫೫

### ಚಂದನಳನ್ನು ಸೇಠಾನಿ (ಸೇಠನ ಪತ್ನಿಯು) ಈರ್ಷೆಯಿಂದ ಬಂಧಿಸುವದು ಮಹಾವೀರನಿಗೆ ಆಹಾರದಾನ ಮತ್ತು ತಪ-ಗ್ರಹಣ

ಈ ಅವಸ್ಥೆಯಲ್ಲಿ ಅವಳನ್ನು ದೃಷ್ಟ, ದುಷ್ಟ, ಕಷ್ಟದಾಯಿ ಮತ್ತು ಕ್ರೋಧೀ, ಸುಭದ್ರಾ ಎಂಬ ಸೇಠಾನಿಯು ನೋಡಿದಳು. ಚಂದನಳು ಪಾಪವೃತ್ತಿಯಿಂದ ಮುಕ್ತಳೂ ಮತ್ತು ನಿಃಶಾಲ್ಯವಾಗಿದ್ದೂ ಕೂಡ ಆ ದುಷ್ಟ ಸೇಠಾನಿಯು ಅವಳ ತಲೆ ಬೋಳಿಸಿದಳು ಮತ್ತು ಅವಳ ಕಾಲುಗಳಲ್ಲಿ ಲೋಹದ ಸಂಕೋಲೆಯನ್ನು ಕಟ್ಟಿದಳು. ಅವಳು ಪ್ರತಿದಿನ ಅವಳಿಗೆ ಗಂಜಿಯಿಂದ ಕೂಡಿದ ಅನ್ನವನ್ನು ತಿನ್ನಲು ಕೊಡುತ್ತಿದ್ದಳು. ಈರೀತಿ ಅವಳನ್ನು ದಂಡಿಸುತ್ತಿದ್ದಾಗ, ಸಂಸಾರದ ಭ್ರಮಣವನ್ನು ಛಿನ್ನ ಮಾಡುವ ಪರಮೇಷ್ಠಿ ಜಿನಭಗವಾನನು ಅಲ್ಲಿಗೆ ಭಿಕ್ಷದ ನಿಮಿತ್ತ ಬಂದನು. ಅವನನ್ನು ಕುಳ್ಳಿರಿಸಿ ಚಂದನಳು ಅದೇ ಗಂಜಿಯುಳ್ಳ ಅನ್ನದ ಆಹಾರವನ್ನು ವಿಧಿಪೂರ್ವಕವಾಗಿ ಕೊಟ್ಟಳು. ಈ ಪಾತ್ರದಾನರೂಪಿ ವೃಕ್ಷ ತಕ್ಷಣದಲ್ಲೆ ಫಲಿತವಾಯಿತು ಮತ್ತು ಆಕಾಶದಿಂದ ಪುಷ್ಪ ಮೊಗ್ಗುಗಳ ಮಳೆಯಾಯಿತು. ದುಂದುಭಿಗಳು ಬಾರಿಸತೊಡಗಿದವು. ಹಾಗೂ ಬಹಳ ಮಾಣಿಕ್ಯಗಳು ಮಿಣುಕುತ್ತಾ ಪ್ರಚುರ ಮಾತ್ರದಲ್ಲಿ ಅಲ್ಲಿ ಬಿದ್ದವು.

ದೇವತೆಗಳು ಬಂದು ಆ ದೇವಿಗೆ ರತ್ನಭರಿತ ನಾನಾ ಪ್ರಕಾರದ ಆಭೂಷಣಗಳನ್ನು ಪ್ರದಾನ ಮಾಡಿದರು ಮತ್ತು ಅವಳ ಚರಣಗಳಿಗೆ ವಂದಿಸಿದರು. ಆ ದೇವತೆಗಳ ಘೋಷಣೆ ಮತ್ತು ಕೋಲಾಹಲ ಧ್ವನಿಯಿಂದ ಹಾಗೂ ಜಯ–ಜಯದ ಶಬ್ದ ನಿನಾದದಿಂದ ಆಕೃಷ್ಟಳಾಗಿ ರಾಣಿ ಮೃಗಾವತಿಯು ತನ್ನ ಪುತ್ರರ ಸಹಿತ ಅಲ್ಲಿಗೆ ಬಂದಳು ಮತ್ತು ಅವಳು ತನ್ನ ಚಿಕ್ಕ ತಂಗಿಯು ತನ್ನ ಗುಣಗಳಿಂದ ದೊಡ್ಡವಳಾದ ಕಾರಣ ನಮಿಸಿದಳು. ಆ ಪಾಪಿಣಿ ವಣಿಕ ಪತ್ನಿಯು ಅವಳ ಜೊತೆ ನಡೆಸಿದ್ದ ಕೆಟ್ಟ ವ್ಯವಹಾರಗಳನ್ನು ಚಂದನಳು ತಿಳಿಸಲಿಲ್ಲ. ಸೇಠ ಮತ್ತು ಸೇಠಾಣಿ ಇಬ್ಬರೂ ಅವಳ

ಚರಣಗಳಿಗೆ ನಮಿಸಿದರು ಮತ್ತು ತಾವು ಪಾಪದಿಂದ ಪೀಡಿತರಾಗಿದ್ದುದಾಗಿಯೂ ಈಗ ನಾವು ನಿನ್ನ ಶರಣದಲ್ಲಿ ಪ್ರವಿಷ್ಟರಾಗಿದ್ದೇವೆಂದೂ, ಹೇ ಪರಮೇಶ್ವರಿ, ಈಗ ನಮ್ಮಂಥಹ ಪಾಪಿಷ್ಠರನ್ನು ರಕ್ಷಿಸಬೇಕೆಂದೂ ಕೇಳಿಕೊಂಡರು. ಆಗ ಚಂದನಳು ಹೇಳಿದಳು ಈ ಸಂಸಾರದಲ್ಲಿ ಯಥಾರ್ಥತ ಯಾರು ದುರ್ಜನರು ಮತ್ತು ಯಾರು ಸಜ್ಜನರಾಗಿದ್ದಾರೆ? ಧರ್ಮದಿಂದಲೇ, ಎಲ್ಲರಿಗೂ ಒಳ್ಳೆಯದಾಗುವುದು, ಮತ್ತು ಪಾಪವೇ ಜನರಿಗೆ ಕೆಟ್ಟದ್ದನ್ನು ಮಾಡುವುದಾಗುತ್ತದೆ. ಈ ವಾರ್ತೆಯು ಹತ್ತೂ ದಿಶೆಯಲ್ಲಿ ಹರಡಿತು. ಆಗ ರಾಜ್ಯಶ್ರೀಯ ಧನೀ ಚಂದನಳ ಬಂಧು–ಬಾಂಧವರೂ ಸಹ ಪರಮಾನಂದ ಸಹಿತರಾಗಿ ಅಲ್ಲಿಗೆ ಬಂದರು. ಅವರು ಪರಮಾತ್ಮ ವೀರ ಭಗವಾನನ ವಂದನೆ ಮಾಡಿದರು. ಆ ಜಿನ ಭಗವಾನನ ಚರಣಕಮಲಗಳಲ್ಲಿ ಕುಳಿತು ಒಂದು ಮತ್ತು ಅನೇಕ ಭೇದರೂಪವಾದ ಹನ್ನೆರಡು ಪ್ರಕಾರದ ಮಹಾನ್ ಘೋರ ತಪಗಳನ್ನು ಅದೇ ಕ್ಷಣದಲ್ಲಿ ಚಂದನಳು ಸ್ವೀಕಾರ ಮಾಡಿದಳು.

ಇತಿ ಚಂದನಾ–ತಪಗ್ರಹಣ ವಿಷಯಕವಾದ ಐದನೆಯ ಸಂಧಿ ಸಮಾಪ್ತವಾದುದು.




# ಸಂಧಿ ೬

## ಚಿಲಾತಪುತ್ರ-ಪರೀಷಹ-ಸಹನ

೧

### ಚಿಲಾತಪುತ್ರನ ಜನನ

ಉಜ್ಜಂಗುಲಿ (ಒಂದು ಪಕ್ಷಿ) ಯು ಒಂದು ಚಾಲಿನಿಯ ಸಮಾನ ಸರ್ವಾಂಗದಲ್ಲಿ ತೂತನ್ನು ಮಾಡಿತು. ಆದರೂ ಸಹ ಧೀರ ಮನಸ್ಸಿನ ಚಿಲಾತಪುತ್ರ ಶ್ರವಣನು ತನ್ನ ನಿರ್ದೋಷ ತಪಸ್ಯಾ ಕಾರ್ಯದಿಂದ ವಿಚಲಿತನಾಗಲಿಲ್ಲ. ಪ್ರಾಚೀನ ಕಾಲದಲ್ಲಿ ಮಗಧದೇಶದಲ್ಲಿ ಗುಣವಾನ-ಗುನಹಿಲ (ಗುಣಧೀರ) ಎಂಬ ಹೆಸರಿನ ಸಾರ್ಥವಾಹ ವಣಿಕನು ಇದ್ದನು. ಒಂದು ದಿನ ಅವನು ತನ್ನ ಸಾರ್ಥನ ಸಹಿತವಾಗಿ ವನಮಾರ್ಗದಲ್ಲಿ ಹೋಗುತ್ತಿದ್ದನು. ಆಗ ಒಂದು ಗ್ರಾಮದಲ್ಲಿ ಅವನು ಭಿಕ್ಷೆಗೆಂದು ಬಂದ ತಪಧರ ಎಂಬ ಹೆಸರಿನ ಕಾಮವಿಜಯೀ ಮುನಿಯನ್ನು ನೋಡಿದನು. ವಣಿಕನ ಹತ್ತಿರ ಆ ಸಮಯದಲ್ಲಿ ಯಾವ ತರಹದ ತಯಾರಿಸಿದ ಅನ್ನವಿರವಿಲ್ಲ. ಆದ್ದರಿಂದ ಆ ಸಮಭಾವವುಳ್ಳ ಮುನಿಗೆ ಬೆಲ್ಲ ಮತ್ತು ತಿಲಪಟ್ಟಿಯ ಆಹಾರ ಕೊಟ್ಟನು. ಈ ಪಾತ್ರದಾನದ ಫಲಸ್ವರೂಪದಿಂದ ಅವನು ಸತ್ತಮೇಲೆ ಪ್ರಥಮ ದ್ವೀಪ ಅರ್ಥಾತ್ ಜಂಬೂದ್ವೀಪದ ಶೋಭಾಯಮಾನವಾಗಿದ್ದ ಹೇಮವತ್ ಎಂಬ ಕ್ಷೇತ್ರದಲ್ಲಿ ಒಂದು ಕೋಶ-ಪ್ರಮಾಣವಾದ ಶರೀರಯುಕ್ತ ಹಾಗೂ ಪಲ್ಯೋಪಮ ಕಾಲದವರೆಗೂ ಜೀವಿತವಾಗಿರುವಂತಹ ಮಾನವನಾಗಿ ಉತ್ಪನ್ನವಾದನು. ಮತ್ತೆ ಅವನು ನಂದನ ವನದಲ್ಲಿ ದೇವನಾದನು. ಮತ್ತು ಅಲ್ಲಿಂದ ಚತ್ಯುನಾಗಿ ಮಗಧ ಮಂಡಲದ ರಾಜಗೃಹ ನಗರದಲ್ಲಿ ರಾಜ ಪ್ರಶ್ರೇಣಿಕನ ಚಿಲಾತದೇವಿಯ ಮೂಲಕ ಉತ್ಪನ್ನನಾಗಿ ಹಾಗೂ ರೂಪದಿಂದ ಜನಗಳ ಮನ ಮತ್ತು ಕಣ್ಣುಗಳಿಗೆ ಆನಂದದಾಯಿಯಾದ ಜಿಲಾತ ಪುತ್ರ ಎಂಬ ಹೆಸರಿನ ರಾಜಕುಮಾರನಾದನು. ಒಂದು ದಿನ ರಾಜ ಪ್ರಶ್ರೇಣಿಕನು ಕ್ರುದ್ಧನಾಗಿ ರಾಜಪುತ್ರ ಉದಾಯನಿಗೆ ಉಜ್ಜಯನಿಪುರಿಯ ರಾಜ ಪ್ರಧ್ಯೋತನನ್ನು ಯುದ್ಧದಲ್ಲಿ ಗೆದ್ದು ಮತ್ತು ಅವನನ್ನು ಬಂಧಿಸಿ ತನ್ನ ಹತ್ತಿರ ಕರೆದುಕೊಂಡು ಬರಬೇಕೆಂದು ಆದೇಶ ನೀಡಿ ಉಜ್ಜಯನಿಪುರಿಗೆ ಅವನನ್ನು ಕಳುಹಿಸಿದನು.

೨

### ಚಿಲಾತಪುತ್ರನಿಗೆ ರಾಜ್ಯ ಪ್ರಾಪ್ತಿ

ಈ ಮಧ್ಯೆ ಪ್ರದ್ಯೋತನು ಗೌರ ಉರಗಪುರದ ಸ್ವಾಮಿಯನ್ನು ಯುದ್ಧದಲ್ಲಿ ಬಂಧಿಸಿದನು. ಅವನ ಬಂಧನದ ಸುದ್ದಿಯನ್ನು ಕೇಳಿ ಮಗಧ ನರೇಶನ ವಿಜಯ

ಎಂಬ ಹೆಸರಿನ ಪುತ್ರನು ಸಾರ್ಥವಾಹನ ವೇಷಧರಿಸಿ ಛಲಪೂರ್ವಕವಾಗಿ ಅವನನ್ನು ಬಿಡಿಸಿದನು ಮತ್ತು ರಾಜಗೃಹಕ್ಕೆ ಕರೆದುಕೊಂಡು ಬಂದನು. ಇದರಿಂದ ಪ್ರದ್ಯೋತನು ಕೋಪಗೊಂಡು ಪ್ರದ್ಯೋತನು ತನ್ನ ದಲ–ಬಲ ಸಹಿತವಾಗಿ ಮಗಧ ದೇಶದ ಮೇಲೆ ಆಕ್ರಮಣ ಮಾಡಿದನು. ಈ ಮಾತನ್ನು ಕೇಳಿ ಮಗಧ ನರೇಂದ್ರನಿಗೆ ಚಿಂತೆಯು ಉತ್ಪನ್ನವಾಯಿತು ಮತ್ತು ಅವನು ರಾಜಧಾನಿಯಲ್ಲಿ ಯಾರು ನನ್ನ ವೈರಿಯನ್ನು ಹಿಡಿದು ನನಗೆ ತೋರಿಸುವರೋ ಅವರಿಗೆ ಅವರು ಏನನ್ನು ಕೇಳುವರೋ ಅವನ್ನು ಕೊಡುವುದಾಗಿ ಡಂಗೂರ ಹೊಡೆಸಿದನು. ಪ್ರದ್ಯೋತನು ಜಲಕ್ರೀಡೆಯಾಡುತ್ತಿದ್ದಾಗ ಜಿಲಾತಪುತ್ರನು ಅವನ ಮೇಲೆ ಬಿದ್ದು ಅವನನ್ನು ಬಂಧಿಸಿ ರಾಜಗೃಹಕ್ಕೆ ಕರೆದು ಕೊಂಡು ಹೋದನು. ರಾಜನು ಸಂತುಷ್ಟನಾಗಿ ತನ್ನ ಪುತ್ರನ ಸನ್ಮಾನ ಮಾಡಿದನು. ಮಗಧರಾಜನು ಪ್ರಸನ್ನತಾಪೂರ್ವಕವಾಗಿ ಚಿಲಾತಪುತ್ರನಿಗೆ ಕೇಳಿದಷ್ಟು ದಾನ ಹಾಗೂ ನಗರದಲ್ಲಿ ಸ್ವಚ್ಛಂದವಾಗಿ ವಿಹರಿಸಲು ಅವಕಾಶ ಕೊಟ್ಟನು.

ಇದಾದ ಬಹಳ ಕಾಲದ ನಂತರ ರಾಜಾ ಪ್ರಶೇಣಿಕನು ಬಹಳ ವಯಸ್ಸಾದ ಮೇಲೆ ಅವನು ಮನೆ, ಪುರ ಮತ್ತು ಪರಿಜನರ ತ್ಯಾಗಮಾಡಿ ಸಾವಿರಾರು ಭವಗಳ (ಜನ್ಮಗಳ) ಪಾಪಗಳ ಹರಣಮಾಡುವ ತಪಶ್ಚರಣವನ್ನು ಸ್ವೀಕರಿಸಿದನು ಮತ್ತು ರಾಜ್ಯಕ್ಕೆ ಚಿಲಾತಪುತ್ರನನ್ನು ಪ್ರತಿಷ್ಠಿತ ಮಾಡಿದನು.

೩

## ಚಿಲಾತಪುತ್ರನು ರಾಜ್ಯದಿಂದ ನಿಷ್ಕ್ರಮಿಸುವುದು, ವನವಾಸಕ್ಕೆ ಹೋಗುವುದು ಹಾಗೂ ಶ್ರೇಣಿಕನ ರಾಜ್ಯಾಭಿಷೇಕ

ರಾಜ್ಯಭಾರ ಮಾಡುತ್ತಾ ಚಿಲಾತಪುತ್ರನಿಗೆ ಒಂದು ಆಪತ್ತು ಬಂದಿತು. ಏಕೆಂದರೆ ಜನರು ಅವನಿಂದ ಸಂತಪ್ತರಾಗಿದ್ದರು. ಅವನ ಅನ್ಯಾಯವನ್ನು ನೋಡಿ ನೀತಿವಂತ ಮಂತ್ರಿಗಳ ಮತ್ತು ಸಾಮಂತರ ಚಿತ್ತವು ಅವನಿಂದ ದೂರವಾಗಿದ್ದವು. ಅವರು ತಮ್ಮಲ್ಲೇ ಆಲೋಚಿಸಿ ಎಲ್ಲರ ಮನಸ್ಸಿಗೂ ಸರಿಹೊಂದುವಂಥಹ ನಿರ್ಣಯ ಕೈಗೊಂಡರು. ಅವರುಗಳು ಕಾಂಚೀಪುರದಿಂದ ಶ್ರೇಣಿಕನನ್ನು ಕರೆಸಿದರು. ಸಮಸ್ತ ಪರಿಜನರು ಒಂದೆಡೆ ಸೇರಿದರು ಮತ್ತು ಅವರು ದುರ್ಬುದ್ಧಿಯುಳ್ಳ ಚಿಲಾತಪುತ್ರನನ್ನು ನಗರದಿಂದ ಹೊರದೂಡಿದರು. ಅವನು ತನ್ನ ಮಾತಾಮಹನ ಹತ್ತಿರ ಹೋಗಿ ವನದಲ್ಲಿ ಒಂದು ಪ್ರಬಲ ಕೋಟೆಯನ್ನು ಕಟ್ಟಿದನು. ಅವನು ರಾಜ್ಯಭ್ರಷ್ಟನಾಗಿ ಅಲ್ಲಿ ಅನೀತಿಪೂರ್ವಕವಾದ ಚೋರವೃತ್ತಿಯಿಂದ ಜೀವನ ಯಾಪನೆ ಮಾಡತೊಡಗಿದನು. ಅವನಿಗೆ ಹೇಗೆ ರಾಮನಿಗೆ ಲಕ್ಷ್ಮಣನು ಅತ್ಯಂತ ಪ್ರಿಯನಾಗಿದ್ದನೋ ಹಾಗೆ ಭದ್ರ ಮಿತ್ರನೆಂಬ ಪ್ರಿಯಮಿತ್ರನಿದ್ದನು. ಅವನ ರುದ್ರಮಿತ್ರನೆಂಬ ಮಾವನಿಗೆ ಒಬ್ಬ ಸುಖ ದಾಯಕ ಸುಭದ್ರ ಎಂಬ ಪುತ್ರಿಯಿದ್ದಳು. ಚಿಲಾತಪುತ್ರನು ಅವಳ ಪರಿಣಯ ಮಾಡಿಕೊಳ್ಳಲಾಗುತ್ತಿರಲಿಲ್ಲ. ಏಕೆಂದರೆ ಅವಳನ್ನು ಬೇರೆ ಬಲವಾನನಿಗೆ ವಾಗ್ದಾನ

ಮಾಡಿಕೊಟ್ಟಾಗಿತ್ತು. ಈ ಮಾತನ್ನು ಕೇಳಿ ಚಿಲಾತಪುತ್ರನು ಸಾವಿರಾರು ಸುಭಟರನ್ನು ಒಂದುಗೂಡಿಸಿದನು ಮತ್ತು ಅವರೊಡನೆ ಅಲ್ಲಿಗೆ ಬಂದು ಬಲಪೂರ್ವಕವಾಗಿ ಕನ್ಯೆಯ ಅಪಹರಣ ಮಾಡಿದನು. ಜನಗಳು ನೋಡುತ್ತಾ ಇದ್ದ ಹಾಗೆಯೇ ಆ ಇಬ್ಬರೂ ಅಲ್ಲಿಂದ ಹೊರಟು ಹೋದರು.

೪

## ಚಿಲಾತಪುತ್ರನ ಮೂಲಕ ಕನ್ಯಾಪಹರಣೆ, ಶ್ರೇಣಿಕನ ಮೂಲಕ ಆಕ್ರಮಣ ಮಾಡಲ್ಪಟ್ಟ ಮೇಲೆ ಅದರ ಘಾತ ಹಾಗೂ ವೈಭಾರಗಿರಿಯ ಮೇಲೆ ಮುನಿಯ ದರ್ಶನ

ಈ ಮಾತನ್ನು ಕೇಳಿ ರಾಜ ಶ್ರೇಣಿಕನು ಸೇನೆಯ ಸಹಿತವಾಗಿ ಅವನನ್ನು ಹಿಂಬಾಲಿಸತೊಡಗಿದನು. ರಾಜ ಮತ್ತು ಕುದುರೆಯ ಸವಾರರು ಅಲ್ಲಿಗೆ ಇನ್ನೂ ಬರುವಷ್ಟರಲ್ಲಿಯೇ ಅವನು ಆ ಕನ್ಯೆಯ ಜೊತೆಯಲ್ಲಿ ವಿವಾಹ ಮಾಡಿಕೊಂಡುಬಿಟ್ಟನು. ಯದ್ಯಪಿ ಅವನ ಹತ್ತಿರವೂ ಬಹಳಷ್ಟು ಭಯಂಕರ ಶೂರ-ವೀರರಿದ್ದಾಗ್ಯೂ ಕೂಡ ಒಬ್ಬ ಚೋರನು ರಾಜನನ್ನು ಹೇಗೆ ಎದುರಿಸಬಲ್ಲನು? ಅವರಲ್ಲಿ ಎಷ್ಟೋಮಂದಿ ಭೀತ ಗ್ರಸ್ತರಾದರು ಮತ್ತು ಸೆರೆಹಿಡಿಯಲ್ಪಟ್ಟರು. ಹಾಗೂ ಎಷ್ಟೊ ಜನರನ್ನು ಯಮರಾಜನ ಪಲ್ಲಕ್ಕಿಯಲ್ಲಿ ಹಾಕಲಾಯಿತು. ಸೇನೆಯ ಮೂಲಕ ನಡೆಯಲ್ಪಟ್ಟ ಆ ಭಾರೀ ಸಂಹಾರವನ್ನು ನೋಡಿ ಚಿಲಾತಪುತ್ರನು ಈ ಕನ್ಯೆಯು ನಮ್ಮವಳಾಗಿ ಹೋದ ಕಾರಣ ಅವಳು ಅನ್ಯರ ವಶಳಾಗಲು ಬಿಡಬಾರದು ಎಂದು ವಿಚಾರ ಮಾಡಿದನು. ಈ ರೀತಿ ವಿಚಾರಮಾಡಿ ಅವನು ಆ ಕನ್ಯೆಯನ್ನು ಹತ್ಯೆ ಮಾಡಿದನು. ಅವಳು ಸತ್ತು ಅದೇ ವನದಲ್ಲಿ ವ್ಯಂತರ ದೇವಿಯಾದಳು. ಮತ್ತು ಚಿಲಾತಪುತ್ರನು ಪ್ರಾಣಭಯದಿಂದ ಓಡಿ ದುರ್ಗಮ ಮತ್ತು ಉಚ್ಚವಾದ ವೈಭಾರ ಪರ್ವತವನ್ನು ಏರಿದನು. ಆ ಪುಣ್ಯ ಭೂಮಿಯಲ್ಲಿ ಅವನಿಗೆ ಭವಭಯಹಾರಕ ಮುನಿದತ್ತನೆಂಬ ಮುನಿಯ ಸಂಘ ಸಹಿತ ದರ್ಶನವಾಯಿತು. ಚಿಲಾತಪುತ್ರನು ಭಯದಿಂದ ಕಂಪಿಸುತ್ತಾ ಶರೀರ ಸಹಿತ ಪಾಪದಿಂದ ವಿರಕ್ತನಾಗಿ ಮುನಿಗೆ ನಮಸ್ಕರಿಸಿದನು ಮತ್ತು ಅವನನ್ನು ಈ ರೀತಿ ಕೇಳಿದನು—

೫

## ಮುನಿಯ ಉಪದೇಶವನ್ನು ಕೇಳಿ ಚಿಲಾತಪುತ್ರನು ಪ್ರವ್ರಜ್ಯನಾಗುವಿಕೆ ವ್ಯಾಂತರಿಯ ಮೂಲಕ ಉಪಸರ್ಗ ಹಾಗೂ ಸತ್ತು ಅಹಮಿಂದ್ರ ಪದ-ಪ್ರಾಪ್ತಿ

ಹೇ ಸಾಧು, ನನಗೆ ಸಂಕ್ಷೇಪದಲ್ಲಿ ಜಿನದೇವನು ಹೇಳಿರುವ ಉಪದೇಶವನ್ನು ಹೇಳು. ಆಗ ಆ ಮುನೀಶ್ವರನು ಅವನಿಗೆ ಎಲ್ಲದರ ಸಾರಭೂತವಾದ ಮತ್ತು ಸುಖ

ಕಾರಿಯಾದ ಉಪದೇಶವನ್ನು ಹೇಳಿದನು. ಅದು ಈ ಪ್ರಕಾರವಿದೆ– ಹೇ ಪುರುಷ್ಶರ, ನೀನು ಯಾವುದನ್ನು ಇಚ್ಛಿಸುತ್ತಿರುವೆಯೋ ಅದನ್ನು ಇಚ್ಛಿಸಬೇಡ. ನೀನು ಯಾವುದನ್ನು ಬಯಸುವುದಿಲ್ಲವೋ ಅದನ್ನು ಇಚ್ಛಿಸು. ನೀನು ಈ ಸಂಸಾರರೂಪಿ ಮಹಾ ಸಮುದ್ರವನ್ನು ದಾಟಲು ಬಯಸುವುದಾದರೆ ಯಾವುವು ಇಂದ್ರಿಯಗಳ ವಿಷಯ ಮುಂತಾದ ಪರಭಾವವಾಗಿವೆಯೋ ಅವನ್ನು ಬಿಡು ಮತ್ತು ಯಾವುವು ವಿಷಯರಹಿತ ಆತ್ಮಭಾವವೋ ಅವನ್ನು ಗ್ರಹಿಸು. ಮುನಿಯ ಈ ಉಪದೇಶವನ್ನು ಕೇಳಿ ಚಿಲಾತ ಪುತ್ರನಿಗೆ ವೈರಾಗ್ಯ ಉತ್ಪನ್ನವಾಯಿತು ಮತ್ತು ಸಂಕ್ಷೇಪದಲ್ಲಿ ಹೇಳಬೇಕೆಂದರೆ ಅವನು ಪ್ರವ್ರಜ್ಯ ಧಾರಣೆ ಮಾಡಿದನು. ತನ್ನ ಆಯುಸ್ಸು ಸ್ವಲ್ಪವೇ ಉಳಿದಿದೆಯೆಂದು ಮುನಿಯಿಂದ ಅರಿತು ಅವನು ವಿಶೇಷ ಸಂತೋಷದಿಂದ ಪ್ರಾಯೋಗ್ಯ ಮರಣವೆಂಬ ಸಮಾಧಿಸ್ಥನಾದನು. ಆಗ ರಾಜ ಶ್ರೇಣಿಕನು ಅಲ್ಲಿಗೆ ತನ್ನ ಸೈನ್ಯ ಸಮೇತವಾಗಿ ಬಂದನು. ಅವನು ತನ್ನ ಸಹೋದರನು ಸಾಧುವಾಗಿರುವುದನ್ನು ನೋಡಿ ಆಗ 'ನೀನು ಬಹಳ ಒಳ್ಳೆಯದನ್ನು ಮಾಡಿರುವೆ' ಎಂದು ಪ್ರಶಂಸೆ ಮಾಡಿದನು ಹಾಗೂ ಪೂಜೆ, ಅರ್ಚನೆ ಮತ್ತು ಪ್ರಣಾಮ ಮಾಡಿ ಅಲ್ಲಿಂದ ಹೊರಟನು. ಇಲ್ಲಿ ಈ ಮಧ್ಯೆ ಆ ವ್ಯಂತರಿಯು ಅವನನ್ನು ನೋಡಿದನು ಮತ್ತು ವೈರದ ವಶನಾಗಿ ಅವನು ಉಪದ್ರವ ಕೊಟ್ಟನು. ಅವನು ಚೀಲ ಪಕ್ಷಿಯ ರೂಪ ಧಾರಣೆ ಮಾಡಿ ಧ್ಯಾನಸ್ಥನಾಗಿದ್ದವನ ತಲೆಯ ಮೇಲೆ ಕೂತು ಅವನ ಕಣ್ಣುಗಳನ್ನು ತೆಗೆದು ಬಿಟ್ಟನು. ದೊಡ್ಡ–ದೊಡ್ಡ ಮುಂಡವುಳ್ಳ ಕೀಟಗಳ ಮೂಲಕ ಅವನ ಶರೀರವನ್ನು ಚಲನೀಯ ಸಮಾನವಾಗಿ ಹರಿದು ಹಾಕಿದನು. ಇಂತಹ ಪ್ರಾಣಾಂತಕಾರಿ ಮಹಾನ್ ದುಃಖದ ವೇದನೆಯನ್ನು ಸಹಿಸಿಕೊಂಡೂ ಸಹ ಸಮಾಧಿಯಲ್ಲೇ ತಲ್ಲೀನನಾಗಿ ಚಿಲಾತಪುತ್ರ ಮುನಿಯು ನಿರಂತರ ಸುಖದಾಯಿ ಪಂಚ ಅನುತ್ತರ ವಿಮಾನಗಳಲ್ಲಿ ಸಿದ್ಧವಿಮಾನದಲ್ಲಿ ಅಹಮಿಂದ್ರ ದೇವನಾಗಿ ಹೋದನು.

ಇತಿ ಚಿಲಾತಪುತ್ರ–ಪರೀಷಹ ವಿಷಯುಕ ಆರನೆಯ ಸಂಧಿ ಸಮಾಪ್ತ

# ಸಂಧಿ ೭

## ಶ್ರೇಣಿಕ-ರಾಜ್ಯ-ಲಾಭ

೧

**ಜಂಬೂದ್ವೀಪ, ಭರತಕ್ಷೇತ್ರ, ಮಗಧದೇಶ, ರಾಜಗೃಹಪುರ, ರಾಜ ಉಪಶ್ರೇಣಿಕ, ರಾಣಿ ಸುಪ್ರಭಾ, ಪುತ್ರ ಶ್ರೇಣಿಕ, ಸೀಮಂತ ನರೇಶ ಅಭಿಧರ್ಮನ ಪ್ರೇಷಿತ ಅಶ್ವದ ಮೂಲಕ ರಾಜನ ಅಪಹರಣ ಮತ್ತು ವನದಲ್ಲಿ ಕಿರಾತರಾಜನ ಪುತ್ರಿ ತಿಲಕಾವತಿಯೊಂದಿಗೆ ವಿವಾಹ.**

ಸಿದ್ಧಿರೂಪಿ ವಧುವಿನ ವರ ಹಾಗೂ ದುಶ್ಚರಿತ್ರನನ್ನು ದೂರದಿಂದಲೇ ಅಪಹರಿಸುವ ಜಿನೇಂದ್ರನಿಗೆ ಪ್ರಮಾಣ ಮಾಡಿ ನಾನು ಜನಗಳ ಮನಮೋಹಕ ಸುಹಾವನೀ ಕಥಾರೂಪ ಶ್ರೇಣಿಕ ಚರಿತ್ರೆಯನ್ನು ವರ್ಣನೆ ಮಾಡುತ್ತೇನೆ. ಅದನ್ನು ಕೇಳುವಂತಹವನಾಗು. ಜಂಬೂದ್ವೀಪದ ದಕ್ಷಿಣ ಭಾಗದಲ್ಲಿ ಶೋಭಾಯಮಾನವಾದ ಭರತಕ್ಷೇತ್ರವಿದೆ ಮತ್ತು ಅದರ ಮಗಧ ದೇಶದಲ್ಲಿ ಸಂದರ ರಾಜಗೃಹ ಎಂಬ ಹೆಸರಿನ ನಗರವಿದೆ. ಅಲ್ಲಿ ಸ್ವಲ್ಪವೂ ಸಹ ಯಾವ ದೋಷವೂ ಇಲ್ಲ, ಮತ್ತು ಎಲ್ಲ ಗುಣಗಳೂ ಅಲ್ಲಿವೆ. ಅಲ್ಲಿ ಶತ್ರುಗಳ ಗರ್ವವನ್ನು ನಾಶಮಾಡುವ ಪರಮಕೀರ್ತಿವಾನ ರಾಜ ಉಪಶ್ರೇಣಿಕನು ರಾಜ್ಯವಾಳುತ್ತಿದ್ದನು. ಅವನಿಗೆ ಅತ್ಯಂತ ಶೀಲವತಿ ರಾಣಿ ಸುಪ್ರಭಾ ದೇವಿಯಿದ್ದಳು. ಅವಳಿಂದ ಶ್ರೇಣಿಕ ಕುಮಾರನು ಉತ್ಪನ್ನನಾದನು. ಇವನು ನಾನಾ ಗುಣಗಳ ನಿವಾಸಭೂತನೂ ಮತ್ತು ಸಾಕ್ಷಾತ್ ಕಾಮದೇವನ ಸಮಾನವಾಗಿ ಸಂದರನಾಗಿದ್ದನು. ಒಂದು ದಿನ ಅವನ ಸೀಮಾಂತವರ್ತಿರಾಜ ಅಭಿಧರ್ಮನು ಪೂರ್ವ ವೈರವನ್ನು ಸ್ಮರಿಸಿಕೊಂಡು ಮಗಧರಾಜನಿಗೆ ಒಂದು ಪ್ರಚಂಡ ವೇಗವುಳ್ಳ ದುಷ್ಟ ಅಶ್ವವನ್ನು ಕಳುಹಿಸಿದನು. ಆ ಅಶ್ವವನ್ನು ನೋಡಿ ರಾಜನಿಗೆ ಮನದಲ್ಲಿ ಬಹಳ ಸಂತೋಷವಾಯಿತು, ಹಾಗೂ ಅವನು ತನ್ನ ಪರಿಜನರ ಸಹಿತವಾಗಿ ಅಶ್ವವನ್ನು ಚೆನ್ನಾಗಿ ಹೊಗಳಿದನು. ಬಲಪೂರ್ವಕವಾಗಿ ಆ ದುರ್ಜೇಯ ರಾಜನು ಕುತೂಹಲವಶನಾಗಿ ಆ ಅಶ್ವದ ಮೇಲೆ ಆರೂಢನಾಗಿ ಆಚೆ ಮೈದಾನಕ್ಕೆ ಹೋದನು. ತಕ್ಷಣವೇ ಆ ಅಶ್ವವು ರಾಜನನ್ನು ಅಪಹರಿಸಿಕೊಂಡು ಒಂದು ಭೀಷಣ ವನದಲ್ಲಿ ತೆಗೆದುಕೊಂಡು ಹೋಯಿತು. ತುರಗವನ್ನು ಬಿಟ್ಟು ರಾಜನು ಒಂದು ವೃಕ್ಷದ ಕೆಳಗೆ ಕುಳಿತಿದ್ದಾಗ ಅಲ್ಲಿಯ ಕಿರಾತರಾಜನು ಅವನನ್ನು ನೋಡಿದನು. ಆ ಯಮದಂಡ ಎಂಬ ಕಿರಾತನು, ದುಷ್ಟರಿಗೆ ಯಮ-ನಿವಾಸದ ಸಮಾನವಾಗಿದ್ದ ಆ ರಾಜನಿಗೆ ನಮಸ್ಕರಿಸಿ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು ಮತ್ತು ಅವನನ್ನು ಒಳ್ಳೆ ರೀತಿಯಲ್ಲಿ ಸನ್ಮಾನ ಮಾಡಿದನು.

ಕಿರಾತನ ಸುಂದರ ಯೌವನವತಿ ಪುತ್ರಿಯನ್ನು ನೋಡಿ ರಾಜನು ಅವಳ ಮೇಲೆ ಮೋಹಿತನಾದನು. ಆಗ ಕಿರಾತರಾಜನು ಅವನ ಪುತ್ರಿಯ ಮಗನಿಗೇ ರಾಜ್ಯ ಕೊಡಬೇಕೆಂದು ರಾಜನ ಹತ್ತಿರ ಶಪಥಬಂಧ ಮಾಡಿಕೊಂಡನು. ಇಂತಹ ಕಟ್ಟು-ನಿಟ್ಟಾದ ನಿಬಂಧನೆಯನ್ನು ಮಾಡಿ ಅವನು ತನ್ನ ಮನೋಹರ ಪೀನ ಪಯೋಧರ ಚಂದ್ರಮುಖೀ ಪುತ್ರಿ-ತಿಲಕಾವತಿಯ ವಿವಾಹವನ್ನು ರಾಜನ ಜೊತೆಯಲ್ಲಿ ಮಾಡಿದನು ಹಾಗೂ ಅವಳ ಜೊತೆಯಲ್ಲಿ ಸುಖೀಭೂತ ರಾಜನನ್ನು ಕರೆದುಕೊಂಡು ಅವನ ನಗರಕ್ಕೆ ಹಿಂತಿರುಗಿಸಿದನು. (ಪ್ರೇಷಿತ ಮಾಡಿದನು)

೨

## ಕಿರಾತ ಕನ್ಯೆಯಿಂದ ಚಿಲಾತಪುತ್ರನ ಜನನ, ರಾಜನ ಮೂಲಕ ರಾಜಕುಮಾರರ ಪರೀಕ್ಷೆ

ತನ್ನ ರಾಜಧಾನಿ ರಾಜಗೃಹವನ್ನು ತಲುಪಿ ರಾಜ ಉಪಶ್ರೇಣಿಕನು ತನ್ನ ಈ ಹೊಸ ಪತ್ನಿಯ ಜೊತೆಯಲ್ಲಿ ರತಿಸುಖವನ್ನು ಅನುಭವಿಸುತ್ತಾ ಇರತೊಡಗಿದನು. ಬಹಳ ಸಮಯವಾದಮೇಲೆ ಅವನಿಗೆ ಮದನನ ಸಮಾನವಾದ ಸುಂದರ ಪುತ್ರನು ಉತ್ಪನ್ನವಾದನು. ಪಿತನು ತನ್ನ ಈ ಪುತ್ರನ ಹೆಸರನ್ನು ಚಿಲಾತಪುತ್ರನೆಂದಿಟ್ಟನು. ಯಥಾಸಮಯಕ್ಕೆ ಕುಮಾರನು ತನ್ನ ತರುಣಾವಸ್ಥೆಯನ್ನು ಪ್ರಾಪ್ತ ಹೊಂದಿದನು.

ಒಂದು ದಿನ ಆ ಇಂದ್ರ ಸಮಾನವಾದ ರಾಜನು ಒಬ್ಬ ನೈಮಿತ್ತಿಕನ ಹತ್ತಿರ ತನ್ನ ಈ ಅನೇಕ ಪುತ್ರರಲ್ಲಿ ಯಾರು ನನ್ನ ನಂತರ ರಾಜ್ಯದ ಭಾರವನ್ನು ಸಂಭಾಳಿಸಲು ಸಮರ್ಥನಾಗುವನು ಎಂದು ಕೇಳಿದನು. ಸಮಸ್ತ ವಿಷಯಗಳನ್ನು ಅರಿತಿರುವ ಆ ನೈಮಿತ್ತಕನು ಈ ರೀತಿ ಹೇಳಿದನು-"ಹೇ ರಾಜನ್, ಯಾವ ರಾಜಪುತ್ರನು ರಾಜ ಸಿಂಹಾಸನದಮೇಲೆ ಕೂತು ಭೇರಿಯನ್ನು ಬಾರಿಸುತ್ತಾ ಹಾಗೂ ನಾಯಿಗಳಿಗೂ ಸಹ ಸ್ವಲ್ಪ ತಿನ್ನಲು ಕೊಡುತ್ತಾ ಪಾಯಸದ ಭೋಜನವನ್ನು ಮಾಡುವನೋ ಅವನೇ ತನ್ನ ಶ್ರೇಷ್ಠ ಬುದ್ಧಿಯನ್ನು ಪ್ರಕಾಶಮಾನ ಮಾಡುವ, ಭಯಂಕರ ಶತ್ರುಗಳನ್ನು ತ್ರಸ್ತರಾಗಿ ಮಾಡುವ, ನಿನ್ನ ರಾಜ್ಯವನ್ನು ಸಂಭಾಳಿಸುವ ಯೋಗ್ಯ ಪುತ್ರನಾಗುವನು ಇದರಲ್ಲಿ ಸಂದೇಹವಿಲ್ಲ." ಇದನ್ನು ಕೇಳಿ ಒಂದು ಶುಭ ದಿನದಲ್ಲಿ, ಶುಭಕರಣ ಮತ್ತು ಶುಭ ಲಗ್ನದಲ್ಲಿ ಪರೀಕ್ಷೆಯ ಸಲುವಾಗಿ ತನ್ನ ಎಲ್ಲಾ ಐನೂರು ಪುತ್ರರನ್ನೂ ಕರೆಸಿದನು. ಅವರು ಬಂದು ರಾಜನಿಗೆ ಪ್ರಣಾಮಮಾಡಿ ಕುಳಿತರು. ಆಗ ರಾಜನು ಪ್ರತಿಯೊಬ್ಬರೂ ತಮ್ಮ ಆಸೆಗೆ ತಕ್ಕಂತೆ ಯಾವ ಯಾವ ವಸ್ತುವನ್ನಾದರೂ ನಿಃಶಂಕೆಯಿಂದ ತೆಗೆದುಕೊಳ್ಳಬಹುದು ಎಂದು ಹೇಳಿದನು. ರಾಜನ ಈ ಮಾತನ್ನು ಕೇಳಿ ಆ ರಾಜಕುಮಾರರು ಪ್ರಸನ್ನಮುಖರಾದರು. ಕೆಲವರು ಆಭೂಷಣ ತೆಗೆದುಕೊಂಡರು, ಕೆಲವರು ಕುದುರೆ, ಆನೆ, ರತ್ನವನ್ನು ತೆಗೆದುಕೊಂಡರು. ಮತ್ತೆ ಕೆಲವರು ಉತ್ತಮ

ಗಂಧ ಹಾಗೂ ತಾಂಬೂಲವನ್ನು ತೆಗೆದುಕೊಂಡರು. ಬೇರೆ ಕೆಲವರು ವಿಚಿತ್ರ-ವಿಚಿತ್ರವಾದ ಉತ್ತಮ ವಸ್ತುಗಳನ್ನು ತೆಗೆದುಕೊಂಡರು. ಕೆಲವರು ಸುಂದರ ಪುಷ್ಪವನ್ನು ತಮ್ಮದಾಗಿರಿಸಿಕೊಂಡರು.

೩

## ರಾಜಪುತ್ರ ಶ್ರೇಣಿಕನು ಪರೀಕ್ಷೆಯಲ್ಲಿ ಸಫಲನಾಗುವಿಕೆ, ಆದರೆ ಭ್ರಾತೃ-ವೈರದ ಆಶಂಕೆಯಿಂದ ಅವನ ನಿರ್ವಾಸನೆ

ಆದರೆ ರಾಜಕುಮಾರ ಶ್ರೇಣಿಕನು ಮಣಿ-ಸಮೂಹಗಳ ಕಿರಣಗಳಿಂದ ದೀಪ್ತಿಮಾನ ಸಿಂಹಾಸನದ ಮೇಲೆ ತನ್ನ ಸುಂದರವಾದ ಕೈಯಲ್ಲಿ ಭೇರಿಯನ್ನು ತೆಗೆದುಕೊಂಡು ಹೋಗಿ ಕೂತನು. ಬಾಣಸಿಗರು ಕಾರ್ತಿಕೇಯ ಸದೃಶರಾದ ಆ ಎಲ್ಲಾ ಕುಮಾರರನನ್ನು ಕ್ರಮವಾಗಿ ಕುಳ್ಳಿರಿಸಿದರು ಮತ್ತು ರಾಜನ ಆದೇಶಾನುಸಾರವಾಗಿ ಅವರಿಗೆ ಸ್ವರ್ಣದ ಥಾಲಿಗಳಲ್ಲಿ ಸ್ವಾದಿಷ್ಟ ಖೀರನ್ನು ಬಡಿಸಿದರು. ಯಾವಾಗ ಅವರು ತಮ್ಮ ಭೋಜನವನ್ನು ಪ್ರಾರಂಭ ಮಾಡಿದರೋ ಅದೇ ಕ್ಷಣದಲ್ಲಿ ಸಿಂಹದ ಸಮಾನವಾಗಿ ನಾಲಿಗೆಯನ್ನು ಚಪ್ಪರಿಸುತ್ತಾ ಇರುವ ಶ್ವಾನಗಳನ್ನು ಬಿಡಲಾಯಿತು. ಎಲ್ಲಾ ರಾಜಕುಮಾರರು ಆ ಭಯಂಕರ ಶ್ವಾನಗಳು ಬರುತ್ತಿರುವುದನ್ನು ನೋಡಿ ಭಯದಿಂದ ಓಡಿದರು. ಆದರೆ ಒಬ್ಬ ಮಾತ್ರ-ಗಂಭೀರ ಮತ್ತು ಧೀರ ಶ್ರೇಣಿಕ ಕುಮಾರನು ಭಯದ ಭಾವನೆಯಿಂದ ಮುಕ್ತನಾಗಿಯೇ ಇದ್ದು ತನ್ನ ಆಸನದಲ್ಲಿ ಕುಳಿತೇ ಇದ್ದನು. ಅವನು ವಿನೋದಪೂರ್ವಕವಾಗಿ ಭೇರಿಯನ್ನು ಬಜಾಯಿಸುತ್ತಲೇ ಇದ್ದನು ಮತ್ತು ನಗುತ್ತಾ ಸ್ವಲ್ಪ-ಸ್ವಲ್ಪ ಭೋಜನವನ್ನು ನಾಯಿಗಳಿಗೂ ಸಹ ಕೊಡುತ್ತಿದ್ದನು. ಈ ಪ್ರಕಾರವಾಗಿ ಆ ವಿಶಾಲ ಬುದ್ಧಿವಾನ ಕುಮಾರನು ವಿಶ್ವಸ್ತ ಭಾವದಿಂದ ತನ್ನ ಭೋಜನವನ್ನು ಮುಗಿಸಿದನು. ಇದನ್ನು ನೋಡಿ ಭೂಪಾಲನು ಈ ರಾಜಕುಮಾರನೆ ರಾಜ್ಯವಾಳಲು ಯೋಗ್ಯನು ಎಂದು ನಿಶ್ಚಯಿಸಿದನು. ಜೊತೆಯಲ್ಲೆ ಯಾವ ರಾಜಕುಮಾರನು ಅನಂತ ವಿದ್ಯೆಗಳ ಧನಿಯಾಗಿರುವನೋ ಮತ್ತು ರಾಜ್ಯ ನಡೆಸಲು ಯೋಗ್ಯನೂ ಆಗಿರುವನೋ ಅಂತಹವನನ್ನು ಸಮಸ್ತ ಪ್ರಯತ್ನಪೂರ್ವಕವಾಗಿ ಸಂರಕ್ಷಣೆ ಮಾಡಬೇಕೆಂದು ತನ್ನ ಮನದಲ್ಲಿ ವಿಚಾರ ಮಾಡಿಕೊಂಡನು. ಹೀಗೆ ಚಿಂತಿಸಿ ಆ ನೀತಿಜ್ಞ ಧರಾಧೀಶನು ದಾಯಾದಿಗಳ (ರಾಜ್ಯದ ಭಾಗೀದಾರ ಭ್ರಾತ್ರರು) ಮಧ್ಯೆ ವೈರದ ಭಯದಿಂದ ಶ್ರೇಣಿಕನನ್ನು ಅವನು ನಾಯಿಗಳ ಎಂಜಲು ಭೋಜನ ಮಾಡಿರುವ ಪಾಪದ ಘೋಷಣೆ ಹೊರಡಿಸಿ ಅವನನ್ನು ನಗರದಿಂದ ಹೊರಗೆ ಅಟ್ಟಿದ್ದನು. ಹಾಗೂ ಯಾರಾದರೂ ಅವನಿಗೆ ತಮ್ಮ ಬಳಿ ಇರಲು ಸ್ಥಳ ಕೊಟ್ಟಿದ್ದಾದರೆ ಅವರ ಸಮಸ್ತ ಧನ ಮತ್ತು ಪ್ರಾಣಗಳನ್ನೂ ಸಹ ನಿಶ್ಚಯರೂಪವಾಗಿ ಹರಣ ಮಾಡುವೆನು ಎಂದು ಕೂಡ ಘೋಷಿಸಿದನು. ಖಲ ಪುರುಷರ ಮನವನ್ನೂ ಕೂಡ ಪ್ರಸನ್ನ-

ಮಾಡುವಂತಹ ಘೋಷಣೆಯನ್ನು ಮಾಡಿ ರಾಜನು ಕ್ಷಣದಲ್ಲಿ ಶ್ರೇಣಿಕ ಕುಮಾರನನ್ನು ನಗರದಿಂದ ಹೊರದೂಡಿದನು. ಆಗ ಆ ಗಜಗಾಮಿ ರಾಜಕುಮಾರನು ಹಸಿವು ಮತ್ತು ಬಾಯಾರಿಕೆಯಿಂದ ತ್ರಸ್ತನಾಗುತ್ತಾ ನಂದಗ್ರಾಮವನ್ನು ತಲುಪಿದನು.

೪

## ಚಿಲಾತಪುತ್ರನ ರಾಜ್ಯಾಭಿಷೇಕ ಮತ್ತು ಅನ್ಯಾಯದ ಕಾರಣದಿಂದ ಮಂತ್ರಿಗಳ ಮೂಲಕ ಶ್ರೇಣಿಕನ ಕರೆತರುವಿಕೆ

ಇಲ್ಲಿ ರಾಜ ಉಪಶ್ರೇಣಿಕನು ಭೋಗದಲ್ಲಿ ಆಸಕ್ತನಾಗಿದ್ದು ಒಂದು ದಿನ ತನ್ನ ರಾಜ್ಯಭಾರವನ್ನು ಚಿಲಾತಪುತ್ರನಿಗೆ ವಹಿಸಿಕೊಟ್ಟನು ಮತ್ತು ಧೀರತಾಪೂರ್ವಕನಾಗಿ ಆತ್ಮಕಲ್ಯಾಣದ ಕಾರ್ಯ ಅರ್ಥಾತ್ ದೀಕ್ಷಾ-ಗ್ರಹಣವನ್ನು ತೆಗೆದುಕೊಂಡನು. ಚಿಲಾತಪುತ್ರನು ರಾಜನೇನೋ ಆದನು ಆದರೆ ಅವನು ಉಚಿತ ಕಾರ್ಯವನ್ನು ಯಾವಾಗಲೂ ಮಾಡುತ್ತಿರಲಿಲ್ಲ. ಆಗ ಮಂತ್ರಿಗಳು ಶ್ರೇಣಿಕ ಕುಮಾರನನ್ನು ಪತ್ತೆ ಮಾಡಿದರು ಮತ್ತು ಅವನು ಈಗ ಕಾಂಚೀಪುರವನ್ನು ಹೋಗಿ ತಲುಪಿದ್ದಾನೆಂದು ತಿಳಿದು ಒಬ್ಬ ಬುದ್ಧಿವಾನ ದೂತನನ್ನು ಕಾಂಚೀಪುರಕ್ಕೆ ಕಳುಹಿಸಿದರು. ಅವನು ಸುಪ್ರಭೆಯ ಪುತ್ರ ಶ್ರೇಣಿಕ ರಾಜಕುಮಾರನ ಹತ್ತಿರ ಹೋಗಿ ನಿನ್ನ ತಂದೆಯಾದರೋ ಚಿಲಾತಪುತ್ರನನ್ನು ರಾಜ್ಯದ ಮೇಲೆ ಕೂರಿಸಿ ತ್ರಿಗುಪ್ತಿಧಾರಿ ಮುನಿಯಾದ, ಮತ್ತು ಈಗ ರಾಜ್ಯ ಮಾಡುತ್ತಾ ಚಿಲಾತಪುತ್ರನು ಯಮನ ಸಮಾನವಾಗಿ ಪ್ರಜೆಗಳನ್ನು ಸಂತಪ್ತವಾಗಿ ಮಾಡುತ್ತಿದ್ದಾನೆ" ಎಂಬ ವೃತ್ತಾಂತವನ್ನು ತಿಳಿಸಿದನು. ಬಹಳ ಹೇಳುವುದರಿಂದ ಏನೂ ಪ್ರಯೋಜನವಿಲ್ಲ, ತಾವು ಶೀಘ್ರವಾಗಿ ನಮ್ಮ ಜೊತೆ ಹೊರಟು ರಾಜ್ಯವನ್ನು ಸಂಭಾಳಿಸಿರಿ ಮತ್ತು ಪ್ರಜೆಗಳ ಕಷ್ಟವನ್ನು ನಿವಾರಿಸಿರಿ. ಯಾವ ರೀತಿ ಲೋಕಪ್ರಿಯ ಪದ್ಮಿನಿಯು ಸೂರ್ಯನು ಅಸ್ತನಾದ ಮೇಲೆ ದೋಷಾಕರ ಅರ್ಥಾತ್ ನಿಶಾಧೀಶ ಚಂದ್ರನಿಂದ ಪರಪೀಡಿತಳಾಗುತ್ತಾ ಪ್ರಭಾಕರ ಸೂರ್ಯ ದೇವನ ಸ್ಮರಣೆ ಮಾಡುವಳೋ, ಅದೇ ಪ್ರಕಾರವಾಗಿ ಪ್ರಜೆಗಳು ಪರಮ ಆದರ ಭಾವದಿಂದ ನಿಮ್ಮನ್ನು ಪ್ರತೀಕ್ಷೆ ಮಾಡುತ್ತಿದ್ದಾರೆಂದು ಆ ದೂತನು ಅರಿಕೆ ಮಾಡಿಕೊಂಡನು.

೫

## ಚಿಲಾತಪುತ್ರನ ನಿರ್ವಾಸನೆ, ಮತ್ತು ಶ್ರೇಣಿಕನ ರಾಜ್ಯಾಭಿಷೇಕ

ಶ್ರೇಣಿಕ ಕುಮಾರನು ತನ್ನ ಹೊಸ ಪತ್ನಿ ಅಭಯಮತಿ ಮತ್ತು ವಸುಮಿತ್ರಾ ಎಂಬ ಪ್ರಿಯ ಪತ್ನಿಯರನ್ನು ಮತ್ತು ಪುರೋಹಿತರನ್ನು ಕೇಳಿ ತನ್ನ ಪೂರ್ವ ನಿವಾಸ

ರಾಜಗೃಹಕ್ಕೆ ಬಂದನು. ಬರುತ್ತಿದ್ದ ಹಾಗೆಯೇ ಅವನು ಅನೀತಿವಾನ ಚಿಲಾತ ಪುತ್ರನನ್ನು ಪರಾಜಿತಗೊಳಿಸಿ ಅಲ್ಲಿಂದ ಹೊರದೂಡಿದನು. ಮತ್ತೆ ಒಂದು ಶುಭ ದಿನದಂದು ಸಮಸ್ತ ಸುಹೃದ ಮತ್ತು ಸುಜನರು ಆ ಸುಂದರ ಬುದ್ಧಿಶಾಲಿ, ಶತ್ರುರೂಪಿ ಗಜ ಸಮೂಹವನ್ನು ನಷ್ಟಮಾಡುವ ರಾಜಕುಮಾರನಿಗೆ ರಾಜಪಟ್ಟವನ್ನು ಕಟ್ಟಿದರು. ತನ್ನ ಮಧುರ ವಚನಗಳಿಂದ ಎಲ್ಲ ಜನರನ್ನು ಸಂತುಷ್ಟರನ್ನಾಗಿ ಮಾಡುತ್ತಾ ರಾಜ ಶ್ರೇಣಿಕನು ರಾಜಸಿಂಹಾಸನದ ಮೇಲೆ ಪ್ರತಿಷ್ಠಿತನಾದನು ಮತ್ತು ದಿವ್ಯಭೋಗಗಳನ್ನು ಉಪಭೋಗಿಸತೊಡಗಿದನು.

ಇತಿ ಶ್ರೇಣಿಕ-ರಾಜ್ಯ-ಲಾಭ ವಿಷಯಕ
ಸಪ್ತಮ ಸಂಧಿ ಸಮಾಪ್ತ

# ಸಂಧಿ ೮

# ಶ್ರೇಣಿಕ-ಧರ್ಮ-ಲಾಭ ಮತ್ತು ತೀರ್ಥಂಕರ ಗೋತ್ರ-ಬಂಧ

## ೧

### ರಾಜ ಶ್ರೇಣಿಕನ ಆಖೇಟ-ಯಾತ್ರೆ, ಮುನಿದರ್ಶನ ಹಾಗೂ ಭಾವ ಪರಿವರ್ತನೆ

ಒಂದು ದಿನ ರಾಜ ಶ್ರೇಣಿಕನು ತನ್ನ ಕಿಂಕರ ಸಹಿತನಾಗಿ ಬೇಟೆಗೆಂದು ಹೊರಟನು. ವನವನ್ನು ತಲುಪಿದ ಕ್ಷಣದಲ್ಲೇ ಅವನು ಆತ್ಮ ಮತ್ತು ಪರರನ್ನು ಸಮದೃಷ್ಟಿಯಿಂದ ನೋಡುವ ಅವಧಿಜ್ಞಾನಧಾರಿ ಯಶಸ್ವೀ ಪರಮ ಮುನೀಂದ್ರ ಯಶೋಧರನು ಕರ್ಮಗಳ ನಷ್ಟ ಮಾಡುವ ಪ್ರತಿಮಾ ಯೋಗದಲ್ಲಿ ಸ್ಥಿತನಾಗಿದ್ದುದನ್ನು ನೋಡಿದನು. ಅವನನ್ನು ನೋಡಿ ರಾಜನು ಈ ರೀತಿ ಯೋಚಿಸಿದನು-ಅರೇ! ಕಾರ್ಯ ವಿನಾಶ ಮಾಡುವ ಈ ಅನಿಷ್ಟ-ಅಪಶಕುನವು ನನಗೆ ಏಕೆ ಕಾಣಿಸಿತು? ಈ ಪ್ರಕಾರವಾಗಿ ಅತ್ಯಂತ ಕ್ರೋಧದ ವಶೀಭೂತನಾಗಿ ರಾಜನು ಆ ಪರಮೇಶ್ವರ ಮುನೀಂದ್ರನ ವಧೆ ಮಾಡಲು ಅವನ ಮೇಲೆ ಯಮರಾಜನ ಸಮಾನವಾದ ಐನೂರು ಶ್ವಾನಗಳನ್ನು ಬಿಟ್ಟನು. ಆದರೆ ಮುನಿಯ ಮಹಾತ್ಮೆಯಿಂದ ಅವು ವಿನಯಯುಕ್ತವಾದುವು ಮತ್ತು ಅವನ ಪ್ರದಕ್ಷಿಣೆ ಮಾಡಿ ಅವನ ಸಮ್ಮುಖದಲ್ಲಿ ಕುಳಿತವು. ಇದನ್ನು ನೋಡಿ ರಾಜನು ತನ್ನ ಕೈಯಲ್ಲಿ ಧನುಷ್ಯನ್ನು ತೆಗೆದುಕೊಂಡು ತೀವ್ರವಾದ ಬಾಣಗಳನ್ನು ಬಿಟ್ಟನು. ಆದರೆ ಆ ಬಾಣಗಳ ಸಮೂಹವೂ ಕೂಡ ಪುಷ್ಪ ಪುಂಜಗಳಾಗಿ ಮುನಿರಾಜನ ಚರಣಗಳಲ್ಲಿ ಬಿದ್ದವು. ಆಗ ರಾಜನು ಬಂದು ಮೃತ ಸರ್ಪವನ್ನು ತೆಗೆದುಕೊಂಡು ಅವನ ಕಂಠದಲ್ಲಿ ಹಾಕಿದನು ಆದರೆ ಮುನೀಶ್ವರನು ತನ್ನ ತಪಶ್ಚರಣದ ಮೂಲಕ ಪಾಪ ಮಲವನ್ನು ದೂರೀಕರಿಸಿದ್ದನು. ಮುನಿಯ ವಧೆ ಮಾಡುವ ಭಾವನೆಯ ಕಾರಣದಿಂದ ಅದೇ ಸಮಯದಲ್ಲಿ ರಾಜನು ಸಪ್ತಮ ನರಕದಲ್ಲಿ ಉತ್ಪನ್ನವಾಗುವ ಆಯು-ಬಂಧ ಮಾಡಿದನು. ಆದರೆ ಅದೇ ಸಮಯದಲ್ಲಿ ಮುನಿಯ ಉಕ್ತ ಆಶ್ಚರ್ಯವನ್ನು ನೋಡಿ ಅವನ ಮನವು ಉಪಶಮ ಭಾವದಿಂದ ವ್ಯಾಪ್ತವಾಯಿತು ಮತ್ತು ಅವನು ಮುನಿಗೆ ನಮಿಸಿದನು. ಆ ಭಗವಾನ್ ಮುನಿಯಾದರೋ ಶತ್ರು ಮತ್ತು ಮಿತ್ರರ ಪ್ರತಿ ಸಮದೃಷ್ಟಿ ಇಡುತ್ತಿದ್ದನು. ರಾಜನು ಉಪಶಾಂತ ಮನನಾದದ್ದನ್ನು ಅರಿತು ಮುನಿಯು ಪುಣ್ಯ ಪ್ರಕಾಶಿಯಾದ ಉತ್ತಮ ಭಾಷೆಯಲ್ಲಿ ಆಶೀವಾದದ ಉಚ್ಚಾರಣೆ ಮಾಡಿದನು.

೨

## ಶ್ರೇಣಿಕ ರಾಜನು ಜೈನ-ಶಾಸನದ ಭಕ್ತನಾಗಿ ರಾಜಧಾನಿಗೆ ಹಿಂತಿರುಗಿದನು

ರಾಜ ಶ್ರೇಣಿಕನು ಯಶೋಧರ ಮುನಿಯಿಂದ ದುಷ್ಕೃತ್ಯ ಕರ್ಮರೂಪಿ ಇಂಧನವನ್ನು ಉರಿಸುವ ಅಗ್ನಿಯ ಸಮಾನವಾದ ಅನೇಕ ಪ್ರಕಾರದ ಧರ್ಮ ಶ್ರವಣ ಮಾಡಿದನು. ಮುನಿಯ ಆ ಅನುಪಮ ವಚನವನ್ನು ಕೇಳಿ ರಾಜನು ಮತ್ತೆ-ಮತ್ತೆ ತನ್ನನ್ನು ತಾನೇ ನಿಂದಿಸಿಕೊಂಡನು. ಅವನು ಈಗ ಜಿನ-ಶಾಸನದಲ್ಲಿ ಮನಸ್ಸನ್ನು ಲೀನಗೊಳಿಸಿದನು. ಮತ್ತು ಅವನಿಗೆ ಕ್ಷಾಯಿಕ ಸಮ್ಯಕ್ ದರ್ಶನದ ಲಾಭದ ಪ್ರಾಪ್ತಿಯಾಯಿತು. ಆಕಾಶದಲ್ಲಿ ದೇವತೆಗಳು ಅವನ ಅಭಿವಂದನೆ ಮಾಡಿದರು. ಇದರಿಂದ ರಾಜನಿಗೆ ಮತ್ತಷ್ಟು ಅಧಿಕ ಆನಂದವಾಯಿತು. ಮತ್ತೆ ಆ ಶ್ರವಣಮುನಿ ಯಶೋಧರನನ್ನು ವಂದಿಸಿ ರಾಜನು ತನ್ನ ಭವನಕ್ಕೆ ಹಿಂದಿರುಗಿದನು. ಅವನು ತನ್ನ ಮನಸ್ಸಿನಿಂದ ಮಿಥ್ಯಾ ಮತವನ್ನು ದೂರಬಿಟ್ಟು ಸಜ್ಜನರನ್ನು ಪಾಲಿಸುತ್ತಾ, ಸುಖ ಪೂರ್ವಕವಾಗಿ ರಾಜ್ಯವಾಳತೊಡಗಿದನು. ಚೇಲನ ಮಹಾದೇವಿಯ ಜೊತೆ ಅವನು ಸೀತೆಯ ಜೊತೆ ರಾಮನ ಸದೃಶವಾಗಿ ಅಲಂಕೃತನಾಗಿ ದೃಷ್ಟಿಗೋಚರನಾಗುತ್ತಿದ್ದನು. ಒಂದು ದಿನ ಅವನು ನರ-ಸಮೂಹದಿಂದ ತುಂಬಿರುವ ತನ್ನ ಸಭಾ ಭವನದಲ್ಲಿ ಕುಳಿತಿರುವಾಗ ವನಪಾಲನು ಬಂದು ತನ್ನ ಕರಗಳನ್ನು ಜೋಡಿಸಿ, "ಹೇ ಮಹಾರಾಜ, ದೇವತೆಗಳ ಮತ್ತು ಮನುಷ್ಯರ ಮೂಲಕ ನಮಿತ ಜ್ಞಾನ-ದಿವಾಕರ, ದೇವರ ದೇವ, ಪರಮೇಶ್ವರ ಮಹಾವೀರನ ಆಗಮನವಾಗಿದೆ" ಎಂದು ವಿನಂತಿಸಿದನು.

೩

## ಮಹಾವೀರನು ವಿಪುಲಾಚಲದ ಮೇಲೆ ಬರುವ ಸೂಚನೆ ಮತ್ತು ಶ್ರೇಣಿಕನು ಅವನನ್ನು ವಂದಿಸಲು ಹೋಗುವುದು

ವನಫಾಲನು ಈ ರೀತಿ ಹೇಳಿದನು—ಹೇ ಸ್ವಾಮಿ, ತ್ರಿಲೋಕದ ಜನರ ಶರಣಭೂತ ಇಂದ್ರನ ಮೂಲಕ ಯಾರ ಸಮೋಶರಣದ ರಚನೆಯಾಗುತ್ತದೆಯೋ, ಯಾರು ದುರ್ಜಯ ಕೆಲಸ ಮತ್ತು ಕಷಾಯದ ರಣವನ್ನು ಗೆದ್ದಿರುವರೋ, ಜನ್ಮ-ಜರಾ ಮತ್ತು ಮೃತ್ಯುವನ್ನು ದೂರ ಮಾಡಿರುವನೋ ಹಾಗೂ ಯಾರು ದುರ್ಗತಿಯ ದುಃಖರೂಪಿ ಕೆಸರನ್ನು ಒಣಗಿಸಲು ಗ್ರೀಷ್ಮಕಾಲದ ದಿನದ ಸಮಾನವಾಗಿರುವರೋ, ಇಂಥಹ ವೀರ ಜಿನೇಂದ್ರನು ವಿಪುಲಾಚಲ ಗಿರಿಯ ಮೇಲೆ ಬಂದು ವಿರಾಜಮಾನರಾಗಿದ್ದಾರೆ. ಈ ಮಾತನ್ನು ಕೇಳಿ ರಾಜಶ್ರೇಣಿಕನು ತನ್ನ ಸಮಸ್ತ ದೇಹದ ಆಭೂಷಣಗಳನ್ನು ವನಪಾಲಕನಿಗೆ ಕೊಟ್ಟುಬಿಟ್ಟನು ಮತ್ತು ತತ್ಕಾಲದಲ್ಲೇ ತನ್ನ ಸಿಂಹಾಸನವನ್ನು ಬಿಟ್ಟು ಸದ್ವಿನಿಯದಿಂದ ತನ್ನನ್ನು ಅಲಂಕೃತ ಮಾಡಿಕೊಂಡು

ಅವನು ಏಳು ಪಾದ ಮುಂದೆ ಬಂದನು. ಅವನು ಪ್ರಸನ್ನನಾಗಿ ಅದೇ ದಿನ ಭಗವಾನನಿಗೆ ವಂದಿಸಲು ಹೋಗಲು ನಿಶ್ಚಯ ಮಾಡಿಕೊಂಡನು. ಅವನು 'ಜಯ ದೇವ' ಎಂದು ಹೇಳುತ್ತಾ ಪ್ರಸನ್ನ ಮನದಿಂದ ಭೂಮಿತಲದ ಮೇಲೆ ಅಷ್ಟಾಂಗ ಪ್ರಣಾಮ ಮಾಡಿದನು, ಮತ್ತು ವಂದನಾ-ಯಾತ್ರೆಯ ಸೂಚನೆಯ ಸಲುವಾಗಿ ಭೇರಿ ಹೊಡೆಸಿದನು ಮತ್ತು ಅದರ ಧ್ವನಿಯಿಂದ ಸಮಸ್ತ ಭುವನವನ್ನು ಪರಿಪೂರಿತ ಮಾಡಿದನು. ಎಲ್ಲಾ ಜನರು ಒಂದೇಕಡೆ ಸೇರಿದ ಮೇಲೆ, ರಾಜನು ಶ್ರದ್ಧಾ ಪೂರ್ವಕನಾಗಿ ವಂದನಾಭಕ್ತಿಯಿಂದ ಪ್ರೇರಿತನಾಗಿ ಉತ್ಸವ ಸಹಿತವಾಗಿ ಹೊರಟನು. ಹೋಗುತ್ತಾ-ಹೋಗುತ್ತಾ ಆ ರಾಜಲಕ್ಷ್ಮೀಯ ನಿಧಾನನಾದ ರಾಜಶ್ರೇಣಿಕನು ಪರ್ವತದ ಭೂಮಿಯ ಸಮೀಪವಾದ ವನವನ್ನು ತಲುಪಿದನು. ಅಲ್ಲಿಂದ ರಾಜನು ಅವನಂತೆಯೇ ಸಮಾನವಾದ ಶ್ರೇಷ್ಠವಂಶ (ಉತ್ತಮ ಕುಲ ಅಥವಾ ಒಳ್ಳೆ ಬಿದಿರು ವೃಕ್ಷಗಳು) ದಿಂದ ಯುಕ್ತವಾದ ಆ ಪರ್ವತವನ್ನು ನೋಡಿದನು. ಅದು ಪ್ರಶಂಸಾ ಪಾತ್ರವೂ, ಆನೆ, ಕುದುರೆ, ಚಾಮರ ಮತ್ತು ಶೋಭೆಯಿಂದ ಯುಕ್ತವಾಗಿದ್ದಿತು, ಧಾರಧಾರಕ ಹಾಗೂ ರತ್ನಗಳ ಸಾರವಾಗಿದ್ದಿತು.

೪

## ಮಹಾವೀರನ ಉಪದೇಶವನ್ನು ಕೇಳಿ ರಾಜ ಶ್ರೇಣಿಕನಿಗೆ ಕ್ಷಾಯಿಕ ಸಮ್ಯಕ್ತ್ವದ ಉತ್ಪತ್ತಿ

ರಾಜನು ಸಮತಾಭಾವದಿಂದ ಯುಕ್ತವಾಗಿ ಭಗವಾನನಿಗೆ ಪ್ರಣಾಮಮಾಡಿದನು ಮತ್ತು ಅವನ ಚರಣಗಳ ಭಕ್ತಿಯ ಭಾರದಿಂದ ಪ್ರೇರಿತನಾಗಿ ಅವನ ಸ್ತುತಿ ಮಾಡಿದನು. ಭಗವಾನನೂ ಸಹ ರಾಜನ ಶುಭಗತಿಯ ಕಡೆಗೆ ಹೋಗುವ ಸಲುವಾಗಿ ಧರ್ಮ ಹಾಗೂ ದುರ್ಗತಿ-ಗಮನದ ಹೇತುಭೂತವಾದ ಅಧರ್ಮದಲ್ಲಿ ಭೇದವನ್ನುಂಟು ಮಾಡುವ ಉಪದೇಶ ಮಾಡಿದನು. ಈ ಉಪದೇಶವನ್ನು ಕೇಳಿ ರಾಜನಿಗೆ ಶಾಶ್ವತ ಸುಖದ ಮೂಲವಾದ ಕ್ಷಾಯಿಕ ಸಮ್ಯಕ್ತ್ವವು ಪ್ರಾಪ್ತವಾಯಿತು. ಅವನು ಈ ಮೊದಲು ಸಾಧುವನ್ನು ವಧಿಸುವ ಭಾವದಿಂದ ಏಳನೆಯ ನರಕದ ಆಯುವಿಗೆ ಬಂಧಿತ ನಾಗಿದ್ದನೋ, ಈಗ ಆ ಬಂಧನವನ್ನು ಕತ್ತರಿಸಿ ಹಾಕಿ, ನಿರ್ಮಲ ಭಾವದಿಂದ ತನ್ನ ಸಮ್ಯಕ್ ದರ್ಶನದ ಬಲದ ಮೂಲಕ ಅದನ್ನು ಪ್ರಥಮ ನರಕದ ಆಯುಬಂಧವನ್ನಾಗಿ ಮಾರ್ಪಡಿಸಿದನು. ಇದರ ಅತಿರಿಕ್ತವಾಗಿ ಅವನು ತನ್ನ ವಿಶೇಷ ಸಂವೇಗ ಭಾವದಿಂದ ಮನೋಹರವಾದ ತೀರ್ಥಂಕರ ನಾಮ-ಕರ್ಮವನ್ನು ಗಳಿಸಿದನು. ಗೌತಮ ಗಣ ದರನು ರಾಜ ಶ್ರೇಣಿಕನಿಗೆ ಈ ರೀತಿ ಹೇಳಿದನು-ಹೇ ರಾಜನ್, ಯಾವಾಗ ಭುವನ ಪತಿಗಳ ಮೂಲಕ ಯಾರ ಚರಣಾರವಿಂದಕ್ಕೆ ನಮನವಾಗುತ್ತದೆಯೋ ಅವರು ಸನ್ಮತಿ ಜಿನೇಂದ್ರ ನಿರ್ವಾಣವನ್ನು ಪಡೆಯುವರು. ಆಗ ಅವನ ಮೂರು ವರ್ಷ, ಎಂಟು ಮಾಸ

ಮತ್ತು ಹದಿನೈದು ದಿವಸಗಳ ಸಮಯ ಮಾತ್ರ ಚತುರ್ಥಕಾಲದ-ಶೇಷವು ಉಳಿಯು ವುದು. ಆಗ ನೀನು ವಯೋವೃದ್ಧನಾಗಿ ನಿನ್ನ ಮೃತ್ತ್ಯುವಾಗುವುದು ಮತ್ತು ನೀನು ದುಃಖದ ಗಣಿಯಾದ ಪ್ರಥಮ ಪೃಥ್ವಿಯ ಸೀಮಂತ ಎಂಬ ಹೆಸರಿನ ನರಕದಲ್ಲಿ ಹೋಗಿ ಉತ್ಪನ್ನವಾಗುವೆ. ಅಲ್ಲಿ ನೀನು ನಿರಂತರ ದುಃಖದ ವೃಷ್ಟಿಯನ್ನು ಸಹಿಸುತ್ತಾ ಚೌರಾಸಿ ಸಹಸ್ರ ವರ್ಷಗಳವರೆಗೆ ನರಕೀಯದ ರೂಪದಲ್ಲಿರುವೆ. ಅಲ್ಲಿಂದ ಅವ ಸರ್ಪಿಣಿಯ ತೃತೀಯ ಕಾಲದಲ್ಲಿ ತನ್ನ ಎಲ್ಲಾ ದುಃಖ-ಜಾಲವನ್ನು ದೂರ ಮಾಡಿ ಹೊರಗೆ ಬರುವೆ ಮತ್ತು ಚಂದ್ರನ ಸಮಾನವಾಗಿ ಉಜ್ವಲ ಕೀರ್ತಿಯುಕ್ತ ಸರ್ವಸುಖ ಕಾರಿ ಜಗದ್ಗುರು ಮಹಾಪದ್ಮನೆಂಬ ತೀರ್ಥಂಕರನಾಗುವೆ.

ಇತಿ ಶ್ರೇಣಿಕ-ಧರ್ಮಲಾಭ ಹಾಗೂ ತೀರ್ಥಂಕರ-ಗೋತ್ರ ಬಂಧ
ವಿಷಯಕ ಅಷ್ಟಮ ಸಂಧಿ ಸಮಾಪ್ತ.



# ಸಂಧಿ ೯

## ಶ್ರೇಣಿಕನ-ಧರ್ಮ-ಪರೀಕ್ಷೆ

೧

### ಶ್ರೇಣಿಕನ ಸಮ್ಯಕ್ತ್ವದ ಪರೀಕ್ಷೆಯ ಸಲುವಾಗಿ ದೇವನು ಧೀವರರೂಪ ಧಾರಣೆ ಮಾಡುವುದು

ಕವಿಯು ಹೇಳುತ್ತಾನೆ-ಈಗ ನಾನು ಇಲ್ಲಿ ಉಪಗೂಹನ ಗುಣದ ದೃಷ್ಟಾಂತ ಸ್ವರೂಪ ರಾಜ ಶ್ರೇಣಿಕನ ವಿಷಯಕ ಆಖ್ಯಾನವನ್ನು ಹೇಳುತ್ತೇನೆ. ಇದು ಸಮ್ಯಕ್ತ್ವದಲ್ಲಿ ಉತ್ಪನ್ನವಾಗುವ ದೋಷದ ನಿವಾರಣೆ ಮಾಡುವಂಥಹದ್ದಾಗಿದೆ. ಒಂದು ಸಾರಿ ಶ್ರುತಜ್ಞಾನ ಮತ್ತು ಅವಧೀಜ್ಞಾನದ ಸಾಮರ್ಥ್ಯವನ್ನು ಇಟ್ಟಿರುವ ಹಾಗೂ ಮಿಥ್ಯಾ ಧರ್ಮರೂಪಿ ಗಜೇಂದ್ರನಿಗೆ ಮೃಗೇಂದ್ರನ ಸಮನಾಗಿ ಸುರೇಂದ್ರನು ಚತುರ್ವಿಧ ದೇವ ನಿಕಾಯಗಳ ಮಧ್ಯೆ ಕುಳಿತು ಸಭಾಸದರ ಮನೋರಂಜನೆಗೆಂದು ಧರ್ಮಕಥೆಯನ್ನು ಹೇಳಿದನು ಮತ್ತು ಪ್ರಶ್ನೆ-ಮಾಡುವವರ ಭ್ರಾಂತಿಯನ್ನು ದೂರ ಮಾಡಿದನು. ಈ ಸಂಬಂಧದಲ್ಲಿ ಅವನು ಪೃಥ್ವಿತಲದ ಮೇಲೆ ಪ್ರಸ್ತುತವಿರುವ ರಾಜ ಶ್ರೇಣಿಕನನ್ನು ಧೃಢ ಸಮ್ಯಕ್ತ್ವ ಧಾರಿ ಎಂದು ಕರೆದು ಅವನ ಪ್ರಶಂಸೆಮಾಡಿದನು. ಅದನ್ನು ಕೇಳಿ ಒಬ್ಬ ದೇವನಿಗೆ ಇದರ ಸತ್ಯತೆಯ ಮೇಲೆ ವಿಶ್ವಾಸ ಹುಟ್ಟಲಿಲ್ಲ. ಆದ್ದರಿಂದ ಇದರ ಪರೀಕ್ಷೆಯ ಸಲುವಾಗಿ ತನ್ನ ವಿಮಾನವನ್ನು ಆಕಾಶದಲ್ಲಿ ಚಲಿಸುತ್ತಾ ಆ ದೇವನು ಅಲ್ಲಿಗೆ ಬಂದನು. ರಾಜಶ್ರೇಣಿಕನು ತನ್ನ ಸೇನಾ ಸಹಿತವಾಗಿ ಎಲ್ಲಿಗೋ ಹೋಗುತ್ತಿದ್ದುದನ್ನು ಅವನು ನೋಡಿದನು. ಆಗ ಆ ದೇವನು ಚಾಮರವನೆಂಬ ವಿಖ್ಯಾತ ಋಷಿಯ ರೂಪಧಾರಣೆ ಮಾಡಿಕೊಂಡು ತನ್ನ ಕೈಗಳಲ್ಲಿ ಜಾಲವನ್ನು ಹಿಡಿದುಕೊಂಡು ರಾಜನ ಮಾರ್ಗದಲ್ಲಿದ್ದ ಒಂದು ಸರೋವರದಲ್ಲಿ ಮೀನುಗಳನ್ನು ಹಿಡಿಯತೊಡಗಿದನು. ಮಗಧೇಶ್ವರು ಅಲ್ಲಿಗೆ ಬಂದಾಗ ಅವನು ಒಬ್ಬ ಋಷಿ ಜಾಲವನ್ನು ಹರಡಿ ಮೀನುಗಳನ್ನು ಹಿಡಿಯುತ್ತಿದುದನ್ನೂ ಮತ್ತು ಅವನ್ನು ಒಂದು ಭಾರ ಹೊರುವ ಬುಟ್ಟಿಯಲ್ಲಿ ಹಾಕಿಡುತ್ತಿದ್ದುದನ್ನೂ ನೋಡಿದನು. ಇದನ್ನು ನೋಡಿ ರಾಜನು ಅವನಿಗೆ ಪ್ರಣಾಮ ಮಾಡಿದನು ಮತ್ತು ವಿನಯ ಪೂರ್ವಕವಾಗಿ ಈ ರೀತಿ ಹೇಳಿದನು-ಹೇ, ಮುನಿರಾಜನೇ, ನನ್ನಂಥ ದಾಸನಿದ್ದೂ ಕೂಡ, ನಿಮಗೆ ಸ್ವಯಂ ಈ ಅಧರ್ಮ ಕಾರ್ಯ ಮಾಡುವುದು ಉಚಿತವಲ್ಲ. ಒಂದು ವೇಳೆ ನೀವು ಮತ್ಸ್ಯಗಳಲ್ಲಿ ಆಸಕ್ತಿಯುಳ್ಳವರಾಗಿದ್ದಲ್ಲಿ ತಾವು ಒಂದುಕಡೆ ಬನ್ನಿ ನಾನು ನಿಮ್ಮ ಈ ಮತ್ಸ್ಯವಧೆಯ ಕಾರ್ಯವನ್ನು ಮಾಡಿಕೊಡುತ್ತೇನೆ.

೨

## ದೇವಮುನಿಯ-ಧೀವರ-ಕರ್ಮದಿಂದ ಜನರಲ್ಲಿ ದಿಗಂಬರ ಧರ್ಮದ ಪ್ರತಿ ಅಸೂಯೆ ಹಾಗೂ ಶ್ರೇಣಿಕನ ಮೂಲಕ ಅದರ ನಿವಾರಣೆ

ರಾಜನ ಆ ಮಾತುಗಳನ್ನು ಕೇಳಿ ಆ ದೇವನು ರಾಜನ ಸಮ್ಯಕ್ತ್ವಭಾವವು ಸರ್ವಥಾ ವಿಶುದ್ಧವಾಗಿದೆಯೆಂದು ತನ್ನ ಮನದಲ್ಲಿ ಅರಿತನು. ಆದರೂ ಕೂಡ ಅದನ್ನು ತೋರ್ಪಡಿಸದೆ ನಟನೆ ಮಾಡುತ್ತಾ ಈ ರೀತಿ ಹೇಳಿದನು—"ಹೇ ರಾಜೇಂದ್ರನೇ, ನಮಗೆ ಇಷ್ಟೆ ಮತ್ಸ್ಯಗಳಿಂದ ಪ್ರಯೋಜನವುಂಟು, ನಮಗೆ ಮತ್ತೆ ಬೇಕಾಗಿಲ್ಲ." ಆಗ ರಾಜನು ಆ ವಿರಕ್ತ ಆರ್ಯಿಕನ ಕೈಗಳಿಂದ ಮತ್ಸ್ಯಗಳನ್ನು ತೆಗೆದುಕೊಂಡು ತನ್ನ ಸೇವಕನ ವಶಕ್ಕೆ ಕೊಟ್ಟನು. ಮತ್ತೆ ಅವನಿಗೆ ನಮಸ್ಕರಿಸಿ ಮಗಧ ನರೇಶನು ತನ್ನ ಮನೆಗೆ ಹೊರಟನು ಹಾಗೂ ಆ ಸಂಯಮಿ ಮತ್ತು ಸಂಯಮಿನಿ ಇಬ್ಬರಿಗೂ ಬೀಳ್ಕೊಟ್ಟನು. ಆ ಮುನಿ ಮತ್ತು ಅರ್ಜಿಕಳ ಅಧರ್ಮ ಕಾರ್ಯವನ್ನು ನೋಡಿ ಜನರು ದಿಗಂಬರ ಧರ್ಮದೊಂದಿಗೆ ಅಸೂಯೆ ಪಡಲಾರಂಭಿಸಿದರು. ಈ ಮಾತನ್ನು ತಿಳಿದು ಆ ಬುದ್ಧಿವಾನ ರಾಜನು ಒಂದು ದಿನ, ಒಂದು ನಿದರ್ಶನ (ಉದಾಹರಣೆ) ಉಪಸ್ಥಿತ ಮಾಡಿ ತೋರಿಸಿದನು. ಅವನು ಜೀವನವೃತ್ತಿ ಸಂಬಂಧವಾದ ಲೇಖಪತ್ರಗಳನ್ನು ತನ್ನ ನಾಮ-ಮುದ್ರೆಯಿಂದ ಅಂಕಿತ ಮಾಡಿ ಹಾಗೂ ಅವನ್ನು ಮಲದಿಂದ ವಿಲಿಪ್ತ ಮಾಡಿ ಎಲ್ಲಾ ರಾಜಪುತ್ರರಿಗೂ ವಿತರಣೆ ಮಾಡಿದನು. ಅವರು ಆ ದಾನಪತ್ರಗಳನ್ನು ಪಡೆದು ಮನದಲ್ಲಿ ಯಾವ ಪ್ರಕಾರದ ಅಸೂಯೆಯ-ಭಾವವನ್ನು ಧಾರಣೆ ಮಾಡದೆ ಕೈಗಳನ್ನು ಜೋಡಿಸಿ ರಾಜನಿಗೆ ನಮಿಸಿದರು ಮತ್ತು ದಾನಪತ್ರಗಳನ್ನು ತಮ್ಮ ಮುಕುಟಯುಕ್ತ ಹಾಗೂ ಚಂಪಕ ಪುಷ್ಪಗಳ ವಾಸನೆಯಿಂದ ಸುಗಂಧಿತವಾದ ತಲೆಯ ಮೇಲೆ ಇಟ್ಟುಕೊಂಡರು. ಇದನ್ನು ನೋಡಿ ರಾಜನು ಆ ಎಲ್ಲಾ ಶ್ರೇಷ್ಠ ಸಾಮಂತರನ್ನು, ನೀವುಗಳು ನನ್ನ ಮಲಿನ ಮುದ್ರೆಯನ್ನು ನಿಮ್ಮ ತಲೆಯ ಮೇಲೆ ಹೇಗೆ ಇಟ್ಟುಕೊಂಡಿರಿ ಎಂದು ಕೇಳಿದನು.

೩

## ಮಲಿನ ಮುದ್ರೆಗಳ ಉದಾಹರಣೆಯಿಂದ ಸಾಮಂತರ ಶಂಕೆಯ-ನಿವಾರಣೆ ಹಾಗೂ ದೇವರ ಮೂಲಕ ರಾಜನಿಗೆ ವರದಾನ

ರಾಜನು ಈ ರೀತಿ ಕೇಳಿದ್ದರಿಂದ ಶತ್ರು-ಚಕ್ರವನ್ನು ಗೆಲ್ಲುವ ಹಾಗೂ ತಮ್ಮ ಸ್ವಾಮಿಯ ಭಕ್ತರೂ ಆದ ಆ ಎಲ್ಲಾ ಸಾಮಂತರು ವಿನಯಪೂರ್ವಕವಾಗಿ ಈ ರೀತಿ ಉತ್ತರಿಸಿದರು—ಹೇ ದೇವ, ಯಾವ ರೀತಿ ನಮ್ಮ ಈ ಶರೀರವು ಮಲಿನವಾಗಿದ್ದೂ ಕೂಡ ಚೇತನಾಗುಣದ ಕಾರಣದಿಂದ ಶ್ರೇಷ್ಠವೆಂದು ಪರಿಗಣಿಸಲ್ಪಡುತ್ತದೆಯೋ, ಹಾಗೆಯೇ

ನಿಮ್ಮಿಂದ ಕೊಡಲ್ಪಟ್ಟ ಈ ಮುದ್ರಾಂಕಿತ ಪತ್ರಗಳು ಮಲಿನವಾಗಿದ್ದೂ ಕೂಡ ನಮ್ಮ ಜೀವನದ ಸಾಧನವಾಗಿವೆ. ಆದ್ದರಿಂದ ಇವು ಎಲ್ಲಾ ಪ್ರಕಾರದಿಂದ ಪೂಜನೀಯ ಮತ್ತು ವಂದನೀಯವಾಗಿವೆ." ಅವರ ಈ ಮಾತುಗಳನ್ನು ಕೇಳಿ ತನ್ನ ಕುಲರೂಪಿ ಕುಮುದಕ್ಕೆ ಚಂದ್ರನ ಸಮನಾಗಿ ಪ್ರಸನ್ನ ಮಾಡುವಂಥಹ ಶ್ರೇಣಿಕ ನರೇಂದ್ರನು ಮುಗುಳ್ನಗುತ್ತಾ ಹೇಳಿದನು—ಇದು ಹೀಗಿದ್ದರೆ, ನಾನು ಸಮಸ್ತ ದುಷ್ಕರ್ಮಗಳನ್ನು ಗೆಲ್ಲುವ ಜಿನೇಂದ್ರ ಭಗವಾನನ ಮುದ್ರಾಧಾರಣೆ ಮಾಡುವ, ಧೀವರ ಮುನಿಗೂ ಸಹ ಗುರು ವಿನಯಪೂರ್ವಕವಾಗಿ, ಅಸೂಯೆಯನ್ನು ಬಿಟ್ಟು, ನಮಸ್ಕಾರ ಮಾಡಿದರೆ ನೀವು ಯಾವ ಕಾರಣದಿಂದ ನನ್ನ ಉಪಹಾಸ ಮಾಡುವಿರಿ? ರಾಜನ ಈ ದೃಷ್ಟಾಂತದಿಂದ ಆ ಎಲ್ಲಾ ಸಾಮಂತರು ಧರ್ಮದ ಮರ್ಮಯುಕ್ತ ಮಾತನ್ನು ಅರಿತರು. ಅವರು ರಾಜನಿಗೆ ಪ್ರಣಾಮ ಮಾಡಿದರು ಮತ್ತು ಸಮತಾಭಾವ ಸಹಿತ ವಾಗಿ ತಮ್ಮ ಸ್ವಾಮಿಯನ್ನು ಒಪ್ಪಿಸಿದರು. ಆಗ ಅವರು ಈ ರೀತಿ ಹೇಳಿದರು— ಹೇ ರಾಜರಾಜೇಶ್ವರ, ಹೇ ಪಾಪವಿದ್ವೇಶಿ, ತಾವೇ ಧನ್ಯರು, ನಿಮ್ಮ ಮನವು ಧರ್ಮ ದಲ್ಲಿ ಈ ಪ್ರಕಾರವಾಗಿ ಅಚಲವಾಗಿದೆ. ಈ ಜಿನಧರ್ಮವು ನಿರ್ದೋಷ ಮತ್ತು ಎಲ್ಲಕ್ಕೂ ಹೆಚ್ಚಾಗಿ ಜಗತ್-ಪೂಜ್ಯವಾಗಿದೆ. ಯಾರಾದರು ದೋಷದಲ್ಲಿ ಅನಾ ಸಕ್ತರಾಗಿದ್ದರೆ ಅವರಿಗೆ ಅದು ಗಮ್ಯವೇಕೆ ಆಗುವುದಿಲ್ಲ? ಈ ಎಲ್ಲವನ್ನು ನೋಡಿ ಕೇಳಿ ಆ ದೇವನು ಅಲ್ಲಿಗೆ ಬಂದನು ಮತ್ತು ಸಮಸ್ತ ಜನಸಮೂಹದ ಮಧ್ಯೆ ರಾಜನಿಗೆ ಹೇಳಿದನು—ಹೇ ಭಾವೀ ತೀರ್ಥಂಕರನೇ, ನಿನ್ನ ವರ್ಣನೆಯನ್ನು ಯಾವ ರೀತಿ ದೇವರಾಜನು ಮಾಡಿದ್ದನೋ, ಅದಕ್ಕಿಂತಲೂ ಸ್ಪಷ್ಟತಃ ಬಹಳಷ್ಟು ಅಧಿಕವಾಗಿ ನಿನ್ನ ಧರ್ಮಾನುರಾಗವಿದೆ. ಈ ರೀತಿ ಹೇಳಿ ರಾಜನ ಪೂಜೆ ಮಾಡಿ ಹಾಗೂ ತನ್ನ ಪೂರ್ವ ವೃತ್ತಾಂತವನ್ನು ಹೇಳಿ ಆ ದೇವನು ರಾಜನಿಗೆ ಒಂದು ಸುಂದರವಾದ ಹಾರವನ್ನು ಕೊಟ್ಟು ದೇವಲೋಕಕ್ಕೆ ಹೊರಟುಹೋದನು. ಈ ವೃತ್ತಾಂತವನ್ನು ನೋಡಿ ಎಲ್ಲಾ ಜನರೂ ಮಿಥ್ಯಾತ್ವದಿಂದ ವಿರಕ್ತರಾದರು ಹಾಗೂ ಜೈನಧರ್ಮದಲ್ಲಿ ಅನುರಕ್ತರಾದರು. ಬೇರೆ ಯಾರಾದರು ಸಹ ಧರ್ಮಾವಲಂಬಿ ಶಾಶ್ವತ ಸುಖರೂಪ ಮೋಕ್ಷಕ್ಕೋಸ್ಕರ ಉತ್ಕಂಠಿತರಾಗಿದ್ದರೆ ಅವರೂ ಸಹ ಸದಾ ಇದೇ ಪ್ರಕಾರವಾಗಿ ಉಪಗೂಹನ ಅಂಗದ ಪಾಲನೆ ಮಾಡಬೇಕು.

ಇತಿ ಶ್ರೇಣಿಕ-ಧರ್ಮ-ಪರೀಕ್ಷೆ ವಿಷಯಕವಾದ ನವಮ ಸಂಧಿ ಸಮಾಪ್ತ

# ಸಂಧಿ ೧೦

## ಶ್ರೇಣಿಕ-ಪುತ್ರ ವಾರಿಷೇಣನ ಯೋಗ-ಸಾಧನೆ

೧

### ವಾರಿಷೇಣನ ಧಾರ್ಮಿಕ ವೃತ್ತಿ, ವಿಧ್ಯುಚ್ಚರ ಚೋರನ ಪ್ರೇಯಸಿ ಗಣಿಕಾಸುಂದರಿಗೆ ಚೇಲನ ರಾಣಿಯ ಹಾರ ಪಡೆಯಲು ಉನ್ಮಾದ

ಸ್ವಲ್ಪ ಸಮಯ ಕಳೆದ ಮೇಲೆ ಲಕ್ಷ್ಮೀಯ ಮೂಲಕ ಸೇವಿತಳಾದ ಚೇಲನಾ ದೇವಿಯು ವಾರಿಷೇಣನೆಂಬ ಪುತ್ರನಿಗೆ ಜನ್ಮ ಕೊಟ್ಟಳು. ಇವನು ಮುಂದೆ ಪಾಪ-ವಿನಾಶಕನೂ ಹಾಗೂ ಗುಣಗಳ ನಿಧಾನನೂ ಆದನು. ರಾಜಗೃಹದಲ್ಲಿ ನೀತಿಯಿಂದ ಸಮಸ್ತ ರಾಜರನ್ನು ನೀತಿಯ ಮಾರ್ಗದಿಂದ ತನ್ನ ವಶಕ್ಕೆ ಬರುವಂತೆ ಮಾಡುವ ರಾಜಾ ಶ್ರೇಣಿಕನ ಈ ವಾರಿಷೇಣನೆಂಬ ಪುತ್ರನು ದರ್ಶನ, ಜ್ಞಾನ ಮತ್ತು ಚಾರಿತ್ರ್ಯ ದಿಂದ ಸಂಪನ್ನವಾದ ಪರ್ವೋಪವಾಸದ ಪಾಲನೆ ಮಾಡುವುದರಲ್ಲಿ ಪ್ರಸಿದ್ಧನಾದನು. ಒಂದು ಬಾರಿ ಅವನು ಒಂದು ವಸ್ತ್ರಧಾರಣೆ ಮಾಡಿ ಸ್ಮಶಾನದಲ್ಲಿ ರಾತ್ರಿಯ ಸಮಯ ಪಾಪ-ವಿನಾಶಕ ಪ್ರತಿಮಾಯೋಗದಲ್ಲಿ ಸ್ಥಿತನಾಗಿದ್ದನು. ಅದೇ ನಗರದಲ್ಲಿ ಜನ ಗಳಿಗೆ ಕಷ್ಟವನ್ನು ಕೊಡುವ ವಿಧ್ಯುಚ್ಚೋರನೆಂಬ ಕಳ್ಳನಿರುತ್ತಿದ್ದನು. ಅವನು ಸ್ಥಂಭನ, ಮೋಹನ ಮುಂತಾದ ಬಹಳಷ್ಟು ವಿದ್ಯೆಗಳನ್ನು ತಿಳಿದಿದ್ದನು, ಮತ್ತು ಅಂಜನಸಿದ್ಧ (ಅಂಜನದ ಮೂಲಕ ಅದೃಶ್ಯವಾಗುವ ಕಲೆಯ ಜ್ಞಾತ) ನಾಗಿದ್ದನು. ಅವನು ಸಾಕ್ಷಾತ್ ಯಮರಾಜನೋ ಎನ್ನುವಹಾಗಿದ್ದನು. ಅವನು ದೊಡ್ಡ ಸಾಹಸಿಯೂ ಹಾಗೂ ಅನೇಕ ವ್ಯಸನೆಗಳ ವಶೀಭೂತನೂ ಆಗಿದ್ದನು. ಇವನ ಪ್ರೇಮವು ನಗರದ ಪ್ರಸಿದ್ಧ ವೇಶ್ಯೆ ಗಣಿಕಾಸುಂದರಿಯ ಜೊತೆ ಇದ್ದಿತು. ಒಂದು ದಿನ ಅವನು ತನ್ನ ಪ್ರೇಯಸಿಯ ನೇತ್ರಗಳ ಸುಖದ ನಿವಾಸಕ್ಕೆ ಹೋದಾಗ ಅಲ್ಲಿ ಅವನು ತನ್ನ ಪ್ರೇಯಸಿಯ ಉದಾರಮನವನ್ನು ನೋಡಿದನು. ಅವಳ ಮನ ಚಂದ್ರನ ಬೆಳದಿಂಗಳ ರಹಿತವಾದ ರಾತ್ರಿಯ ಹಾಗಿದ್ದಿತು. ಚೋರನು ಅವಳನ್ನು ಸಂತೈಸಿ ಕೇಳಿದನು ; ಹೇ ಸುಂದರಮುಖೀ, ನೀನು ವಿನಾಕಾರಣವಾಗಿ ನನ್ನ ಮೇಲೆ ಏಕೆ ಕೋಪಗೊಂಡಿರುವೆ ? ಇದನ್ನು ಕೇಳಿ ಗಣಿಕಾಸುಂದರಿಯು ಹೇಳಿದಳು—ಹೇ ನನ್ನ ದುರ್ಲಭ ವಲ್ಲಭನೇ, ನನಗೆ ನಿನ್ನ ಮೇಲೆ ಯಾವ ತರಹದ ಕ್ರೋಧವೂ ಇಲ್ಲ. ಆದರೆ ಉದ್ಯಾನವನದಲ್ಲಿ ನಾನು ಚೇಲನಾದೇವಿಯ ಕೊರಳಿನಲ್ಲಿ ಮಹಾಕಾಂತಿ ಯುಳ್ಳ ಮತ್ತು ಸುಂದರವಾದ ಹಾರವನ್ನು ನೋಡಿದೆ. ಇದರಿಂದ ನನಗೆ ಅದನ್ನು ಪಡೆಯುವ ಉನ್ಮಾದವುಂಟಾಗಿದೆ ಮತ್ತು ಅನ್ಯಭೋಗ ಮತ್ತು ಧನಲಾಭದ ಯಾವ ಇಚ್ಛೆಯೂ ಇಲ್ಲದಾಗಿದೆ. ಹೇ ಪ್ರಿಯ, ಅದೇ ಉದ್ವೇಗದಿಂದ ಎಲ್ಲವನ್ನೂ ಬಿಟ್ಟು

ಕುಳಿತಿದ್ದೇನೆ. ತನ್ನ ಪ್ರೇಯಸಿಯ ಈ ಮಾತನ್ನು ಕೇಳಿ ಜನರಿಗೆ ದುಃಖವನ್ನುಂಟು ಮಾಡುವ ಆ ಚೋರನು ತನ್ನ ಪ್ರೇಯಸಿಗೆ ಧೈರ್ಯವನ್ನು ಕೊಟ್ಟನು. ಅವನು ಹೇಳಿದನು–ಹೇ ದೇವಿ ಏಳು, ಶೃಂಗರಿಸಿಕೋ ಮತ್ತು ಚಿಂತೆಯನ್ನು ಬಿಡು. ಆ ಒಂದು ಹಾರದ ಮಾತೊಂದೇ ಏಕೆ, ಮತ್ತೂ ಯಾವ ವಸ್ತುವನ್ನಾದರೂ ಕೇಳು ನಾನು ನಿನಗೆ ತಂದುಕೊಡಬಲ್ಲೆ.

೨

**ವಿಧ್ಯುಚ್ಚರ ಚೋರನ ಮೂಲಕ ರಾಣಿಯ ಹಾರದ ಅಪಹರಣೆ ಹಾಗೂ ರಾಜಪುರುಷರು ಅವನನ್ನು ಹಿಂಬಾಲಿಸಿದ್ದುದರಿಂದ ಧ್ಯಾನಸ್ಥ ವಾರಿಷೇಣನ ಹತ್ತಿರ ಹಾರವನ್ನು ಎಸೆದು ಪಲಾಯನ, ವಾರಿಷೇಣ ನನ್ನು ಕೊಂದುಹಾಕಲು ರಾಜನ ಆದೇಶ**

ತನ್ನ ಆ ಹಂಸಗಾಮಿನೀ ಭಾಮಿನಿಯ ಚಿತ್ತವನ್ನು ಈ ಪ್ರಕಾರವಾಗಿ ಪ್ರಸನ್ನ ಪಡಿಸಿ ವಿಧ್ಯುಚ್ಚರ ಚೋರನು ಅರ್ಧರಾತ್ರಿಯ ಸಮಯದಲ್ಲಿ ಧನಲೋಭದಿಂದ ರಾಜ ಮಹಲಿನಲ್ಲಿ ನುಗ್ಗಿದನು ಮತ್ತು ರಾಣಿಯ ಹಾರ ತೆಗೆದುಕೊಂಡು ಅಲ್ಲಿಂದ ಹೊರಟು ಓಡಿದನು. ಅವನ ಪಾದಗಳ ಶಬ್ದವನ್ನು ಕೇಳಿ ರಾಜನ ಯುದ್ಧದ ಸೇವಕರು ಕ್ರೋಧದಿಂದ ಯಮರಾಜನ ಸಮಾನವಾಗಿ ಅವನ ಹಿಂದೆ ಓಡಿದರು. ಚೋರನ ಕೈಯಲ್ಲಿ ಯಾವ ಒಂದು ಹಾರವಿತ್ತೋ, ಅದರ ಪ್ರಕಾಶದ ಮಾರ್ಗದಿಂದ ಅವರು ಅವನ ಹಿಂದೆ ಬಿದ್ದರು. ಅವರು ಬೆದರಿಸುತ್ತಾ ಕೂಗುತ್ತಿದ್ದರು ಮತ್ತು ಬಾಣಜಾಲ ವನ್ನು ಬಿಡುತ್ತಿದ್ದರು. ಆ ಚೋರನು ಸ್ಮಶಾನವನ್ನು ತಲುಪಿದಾಗ ಅಲ್ಲಿ ಅವನು ಕಾಯೋತ್ಸರ್ಗ ಮುದ್ರೆಯಲ್ಲಿ ಸ್ಥಿತನಾಗಿ, ತನ್ನಲ್ಲಿ ತಾನೇ ಆತ್ಮಧ್ಯಾನ ಮಾಡುತ್ತಿದ್ದ ವಾರಿಷೇಣನನ್ನು ನೋಡಿದನು. ಆ ಪಾಪಿ ಚೋರನು ಶ್ಯೇನ ಪಕ್ಷಿಯ ಸಮಾನ ವಾಗಿ ವಾರಿಷೇಣನ ಚರಣದಲ್ಲಿ ತನ್ನಲ್ಲಿದ್ದ ಆ ಚಂದ್ರಹಾಸ ಹಾರವನ್ನು ಎಸೆದು, ಒಂದು ಸಿದ್ಧ ಕ್ಲೇಶದ ಸಮಾನವಾಗಿ ಅದೃಶ್ಯವಾಗಿ ಕಾದು ನಿಂತನು. ರಾಜಸೇವಕರು ಹಾರವನ್ನು ನೋಡಿದರು ಮತ್ತು ಅದನ್ನು ತೆಗೆದುಕೊಂಡು ಅವರು ರಾಜನ ಬಳಿಗೆ ಹೋದರು. ಅವರು ರಾಜನಿಗೆ ಎಲ್ಲಾ ವೃತ್ತಾಂತವನ್ನು ಹೇಳಿದರು. ಅವರ ಮಾತನ್ನು ಕೇಳಿ ರಾಜನು ತನ್ನ ತಲೆಯನ್ನಾಡಿಸಿ, ವಾರಿಷೇಣನ ತಲೆಯನ್ನು ಕತ್ತರಿಸಿ ಹಾಕಲು ತನ್ನ ಭಟರಿಗೆ ಹೇಳಿ ಕಳುಹಿಸಿದನು. ದುಷ್ಟ ಪುತ್ರರಿಂದ ಏನು ಲಾಭ? ಕುತ್ಸಿತ ಶಾಸ್ತ್ರವನ್ನು ಕೇಳುವುದರಿಂದ ಏನು ಹಿತವಾಗುತ್ತದೆ? ರಾಜನ ವಾಣಿಯನ್ನು ಕೇಳಿ ಆ ಕಿಂಕರರು ಕೈಗಳಲ್ಲಿ ಖಡ್ಗವನ್ನು ತೆಗೆದುಕೊಂಡು ತತ್ಕಾಲ ದಲ್ಲೇ ವಾರಿಷೇಣನು ಶುದ್ಧ ಭಾವನೆಯಿಂದ ಯುಕ್ತವಾಗಿ ಧ್ಯಾನಮಗ್ನನಾಗಿದ್ದ ಸ್ಥಳ ವನ್ನು ತಲುಪಿದರು. ನಾಲ್ಕೂ ಕಡೆಗಳಿಂದ ಭಟರು ಮುತ್ತಿಕೊಂಡು ಸಮುದ್ರ ತಟ ದಲ್ಲಿರುವ ಪರ್ವತವು ಜಲದ ಕಲ್ಲೋಲದಿಂದ ತತ್ತರಿಸುವ ಹಾಗೆ ಆರ್ಭಟಿಸಿದರು.

೩

## ದೇವತೆಗಳ ಮೂಲಕ ವಾರಿಷೇಣನ ರಕ್ಷೆ, ರಾಜನು ಸಂತೈಸಿದರೂ ಕೂಡ ಮುನಿದೀಕ್ಷೆ ಮತ್ತು ಪಲಾಸಖೇಡ ಗ್ರಾಮದಲ್ಲಿ ಆಹಾರ-ಗ್ರಹಣ

ರಾಜನ ಆದೇಶಾನುಸಾರವಾಗಿ ಅವನ ದಾಸರು ರೋಷಪೂರ್ವಕವಾಗಿ ಯಾವ ಯಾವ ಅಸ್ತ್ರ-ಶಸ್ತ್ರವನ್ನು ಬಿಟ್ಟರೂ, ಅವೆಲ್ಲಾ ವಾರಿಷೇಣನ ಧರ್ಮಫಲದಿಂದ ಕಮಲಪುಷ್ಪವಾಗಿ ಧರಾತಲದ ಮೇಲೆ ಬಿದ್ದವು. ಆಗ—ರಾಜ-ಪುರುಷರು ಅವನ ಕಂಠದ ಮೇಲೆ ಖಡ್ಗದಿಂದ ಪ್ರಹಾರ ಮಾಡಿದರು, ಅದು ಮೇಘ ಪರ್ವತದ ಉಪಕಂಠ ಭೂಮಿಯ ಮೇಲೆ ಮಿಂಚಿನ ಪ್ರಹಾರದ ಹಾಗಿದ್ದಿತು. ಆದರೆ ಆ ಖಡ್ಗವೂ ಸಹ ಸುಖದಾಯಿ ಪುಷ್ಪಮಾಲೆಯಾಗಿ ತಪರೂಪಿ ವಧುವು ಅವನ ಕೊರಳಿಗೆ ಸ್ವಯಂವರ-ಮಾಲೆ ಅರ್ಪಿತಮಾಡಿದಳೋ ಎನ್ನುವ ಹಾಗೆ ಅವನ ಕೊರಳಲ್ಲಿ ಬಿದ್ದಿತು. ಆ ಸಮಯದಲ್ಲೇ ಆಕಾಶದಲ್ಲಿ ದುಂದುಭಿಗಳು ಮೊಳಗಿದವು ಮತ್ತು ದೇವತೆಗಳು ಬಂದು ಅವನ ಚರಣಗಳನ್ನು ಪೂಜಿಸಿದರು. ಈ ಅತಿಶಯದ ವೃತ್ತಾಂತವನ್ನು ಕೇಳಿ ರಾಜನಿಗೆ ಬಹಳ ದುಃಖವಾಯಿತು ಮತ್ತು ಅವನು ಸ್ವಯಂ ಹೋಗಿ ತನ್ನ ಪುತ್ರನನ್ನು ಸಂತೈಸಿದನು. ಆದರೂ ಸಹ ಆ ಕುಲಭೂಷಣ ವಾರಿಷೇಣನು ಮನೆಯಲ್ಲಿರಲಿಲ್ಲ. ಅವನು ಕ್ರೋಧವಿನಾಶಕ ಮಹಾಋಷಿಯಾದನು.

ತನ್ನ ದೀಕ್ಷೆಯ ವ್ರತದ ಪಾಲನೆಯನ್ನು ಮಾಡುತ್ತಾ ಒಂದು ದಿನ ವಾರಿಷೇಣ ಮುನಿಯು ಭಿಕ್ಷೆಗೆಂದು ಪಲಾಸಖೇಡ ಎಂಬ ಗ್ರಾಮಕ್ಕೆ ಹೋದನು. ಅಲ್ಲಿ ಅವನ ಬಾಲ್ಯದ ಜೊತೆಗಾರ ಪುಷ್ಪಡಾಲನೆಂಬ ಬ್ರಾಹ್ಮಣನು ಇರುತ್ತಿದ್ದನು. ಅವನು ವಾರಿಷೇಣನು ಗ್ರಾಮಕ್ಕೆ ಬರುತ್ತಿದ್ದುದನ್ನು ನೋಡಿ ಅವನನ್ನು ಆಮಂತ್ರಿಸಿದನು ಮತ್ತು ಆಹಾರವನ್ನು ಕೊಟ್ಟನು. ಅವನು ಮುನಿಯ ಬಾಯಿಂದ ತನ್ನನ್ನು ಕರೆಸಿಕೊಳ್ಳಲ್ಪಡಲು ಆಸೆ ಪಟ್ಟನು. ಆದ್ದರಿಂದ ತನ್ನ ಭಾರ್ಯೆಯನ್ನು ಕೇಳಿ ಮುನಿಯ ಜೊತೆ ಗ್ರಾಮದಿಂದ ಹೊರಟನು. ಅವನು ಸಾವಿರಾರು ರಮ್ಯ ಪ್ರದೇಶಗಳ ವರ್ಣನೆ ಮಾಡುತ್ತಾ ಹೋಗುತ್ತಿದ್ದನು. ಬಹಳ ದೂರ ಹೋದ ಮೇಲೆ ಅವನು ಮುನಿಯ ಚರಣಗಳಿಗೆ ಪ್ರಣಾಮ ಮಾಡಿದನು. ಇದರಿಂದ ಕೂಡ ಆ ಸಂಯಮಿ ಮುನಿಯು ಅವನಿಗೆ ಹಿಂದಿರುಗಿ ಹೋಗಲು ಹೇಳಲಿಲ್ಲ. ಮತ್ತೆ ಅವರಿಬ್ಬರೂ ಒಂದು ಋಷಿ-ಆಶ್ರಮವಿದ್ದ ಸ್ಥಾನದ ಹತ್ತಿರ ತಲುಪಿದರು. ಅಲ್ಲಿದ್ದ ಯಾರೋ ಒಬ್ಬನು ವ್ಯಂಗ್ಯಾತ್ಮಕವಾಗಿ ಈ ರೀತಿ ಹೇಳಿದನು-ನೋಡು, ಈ ಗುಣರೂಪಿ ಮಣಿಗಳ ಗಣಿ ವಾರಿಷೇಣ ಮುನಿಯ ಒಬ್ಬ ಸಹಚರನು ತಪಶ್ಚರಣದ ದೀಕ್ಷೆ ತೆಗೆದುಕೊಳ್ಳಲು ಇಲ್ಲಿಗೆ ಬಂದಿದ್ದಾನೆ.

೪

## ಪುಷ್ಪಡಾಲ ಬ್ರಾಹ್ಮಣನ ದೀಕ್ಷೆ, ಮೋಹೋತ್ಪತ್ತಿ ಮತ್ತು ಅದರ ನಿವಾರಣೆ

**ಪೂರ್ವೋಕ್ತ** ಮಾತನ್ನು ಕೇಳಿ ಆ ಬ್ರಾಹ್ಮಣನು ಲಜ್ಜಿತನಾದನು ಮತ್ತು ಅವನು ಪ್ರವ್ರಜ್ಯ ಗ್ರಹಣ ಮಾಡಿದನು. ಆದಾಗ್ಯೂ ಅವನಿಗೆ ತನ್ನ ಹೆಂಡತಿಯ ಭೋಗವಿಲಾಸಗಳ ಸ್ಮರಣೆ ಹಾಗೇ ಇದ್ದಿತು. ಅವನು ತನ್ನ ಮಿತ್ರರ ಜೊತೆ ಹನ್ನೆರಡು ವರ್ಷಗಳವರೆಗೆ ವಿಹಾರ ಮಾಡಿದನು ಮತ್ತು ನಂತರ ಅವನು ಭಗವಾನ್ ಮಹಾವೀರನ ಸಮವಶರಣಕ್ಕೆ ಹೋಗಿ ತಲುಪಿದನು. ಅಲ್ಲಿ ಅವನು ವೀರ ಜಿನೇಂದ್ರನಿಗೆ ನಮಿಸಿದನು ಮತ್ತು ಅವರಿಬ್ಬರೂ ಮುನಿವೃಂದದ ಮಧ್ಯೆ ಹೋಗಿ ಕೂತರು. ಅವರು ಅಲ್ಲಿ ಧರ್ಮದ ಮೂಲಕ ಶುಭಕರ್ಮ ಮತ್ತು ಅಧರ್ಮದ ಮೂಲಕ ಅಶುಭ ಕರ್ಮದ ಆಗಮನದ ಉಪದೇಶವನ್ನು ಕೇಳಿದರು ಮತ್ತು ಆಮೇಲೆ ಅವರು ಅಲ್ಲಿಂದ ಹೊರಗೆ ಹೊರಟು ಬಂದರು. ಅವರು ಹೋಗುತ್ತಿದ್ದಾಗ ಒಂದು ಸ್ಥಾನದಲ್ಲಿದ್ದ ಲತಾಗೃಹ-ಮಂಡಪದಲ್ಲಿ ದೇವಗಣಗಳ ತಾಂಡವ ನೃತ್ಯದ ಜೊತೆಯಲ್ಲಿ ಯಾರ ಮೂಲಕವೋ ಹಾಡುತ್ತಿದ್ದ ಒಂದು ಗೀತೆಯು ಕೇಳಬಂದಿತು ಅದು ಈ ಪ್ರಕಾರವಾಗಿದ್ದಿತು. ತನ್ನ ಪತಿಯು ಪ್ರವಾಸಕ್ಕೆ ಹೋದದ್ದರಿಂದ ಅವನ ಮೈಲಿ ಕುಚೈಲಿ मैली-कुचैली ಪ್ರಿಯ ಹಾಗೂ ಉದಾಸಮನ ಪತ್ನಿಯು ವಿರಹದಿಂದ ಉರಿಯುತ್ತಾ ಹೇಗೆ ಜೀವಂತವಾಗಿರಬಲ್ಲಳು? ಈ ಗೀತೆಯನ್ನು ಕೇಳಿ ಆ ದ್ವಿಜ-ಮುನಿಯ ಮನದಲ್ಲಿ ಚಿಂತೆಯ ಶೂಲ ಚುಚ್ಚಲಾರಂಭಿಸಿತು ಮತ್ತು ಅವನು (ಬ್ರಾಹ್ಮಣ) ತನ್ನ ಪ್ರಿಯೆಯ ಹತ್ತಿರ ಹೋಗಲು ತನ್ನ ಗ್ರಾಮದ ಕಡೆ ಹೊರಟನು. ಅವನು ವಿಚಲಿತ-ಮನನಾದದ್ದನ್ನು ಅರಿತು ಅವನ ಚತುರ-ಮಿತ್ರನು ಅವನನ್ನು ನಂಬಿಸಿ ತನ್ನ ನಗರದ ಕಡೆ ಕರೆದುಕೊಂಡು ಹೋದನು. ತನ್ನ ಪುತ್ರನು ಮಿತ್ರಸಹಿತವಾಗಿ ಬರುತ್ತಿದ್ದುದನ್ನು ನೋಡಿ ರಾಣಿ ಚೇಲನಳು ಅಕಸ್ಮಾತ್ತಾಗಿ ಎದ್ದು ಅವರನ್ನು ಸ್ವಾಗತಿಸಿದಳು. ಅವರಿಗೆ ನಮಿಸಿದಳು ಮತ್ತು ಪರೀಕ್ಷಿಸುವ ಸಲುವಾಗಿ ರಮಣೀಯ ಆಸನವನ್ನು ಅವರಿಗೆ ಕುಳಿತುಕೊಳ್ಳಲು ಕೊಟ್ಟಳು. ಆದರೆ ವಾರಿಷೇಣನು ತ್ಯಾಗಿಗಳಿಗೆ ಯೋಗ್ಯವಾದಂಥ ಆಸನದ ಮೇಲೆಯೇ ಕುಳಿತನು. ಅವನು ತನ್ನ ಅಂತಃಪುರದ ಸ್ತ್ರೀಯರನ್ನು ಕರೆಸಿದನು ಮತ್ತು ಈ ರೀತಿ ಹೇಳಿದನು– "ಹೇ ಮಿತ್ರನೇ, ಇವರಲ್ಲಿ ಯಾರು ನಿನಗೆ ಮನೋಜ್ಞವಾಗಿ ತೋರುವರೋ, ಅವರನ್ನು ರಾಜ್ಯ ಸಹಿತವಾಗಿ **ಗ್ರಹಿಸು** ग्रहण करो **ವರಿಸು**. ಹೇಳು! ಇವರ ಮುಂದೆ ಆ ಏಕಮಾತ್ರ ದೀನ-ಹೀನ ಹಾಗೂ ದುರ್ಗತಿಯಿಂದ ಕ್ಷೀಣವಾಗಿರುವ ಬ್ರಾಹ್ಮಣಿಯಿಂದ ಏನು ಲಾಭ? ನನಗೆ ತಿಳಿಸು." ವಾರಿಷೇಣನ ಈ ಮಾತನ್ನು ಕೇಳಿ ಆ ಬ್ರಾಹ್ಮಣನು ಬಹಳ ಲಜ್ಜಿತನಾದನು. ಅವನು ತನ್ನ ಮನದ ದುರ್ಭಾವನೆಗಳನ್ನು ಬಿಟ್ಟುಬಿಟ್ಟನು ಮತ್ತು ಧರ್ಮದಲ್ಲಿ ಧೃಢಮನನಾದನು. ಆ ದಿನದಿಂದ ಹಿಡಿದು ಅವನು ನಿಜವಾದ

ಸಂಯಮಿಯಾದನು ಮತ್ತು ತನ್ನ ಪಾಪ-ಭಾವನೆಯ ಆಲೋಚನಾರೂಪಿ ತೀರ್ಥದಲ್ಲಿ ಸ್ನಾನಮಾಡಿಬಿಟ್ಟನು.

ಈ ಪ್ರಕಾರವಾಗಿ ಬೇರೆಯವರ ಮೂಲಕವೂ ಸಹ ಯಾರ ಮನವು ಧರ್ಮದಿಂದ ವಿಚಲಿತವಾದರೆ ಅದನ್ನು ಅವಶ್ಯವಾಗಿ ಉತ್ತಮ ಉಕ್ತಿಗಳು ಮತ್ತು ಉದಾಹರಣೆಗಳಿಂದ ಪಾಪ ವಿನಾಶಕ ಸ್ಥಿತಿಕರಣ ಮಾಡಿಕೊಳ್ಳಬೇಕು.

ಇತಿ ಶ್ರೇಣಿಕ ಪುತ್ರ ವಾರಿಷೇಣನ ಯೋಗಸಾಧನೆ ವಿಷಯಕ
ದಶಮ ಸಂಧಿ ಸಮಾಪ್ತ

# ಸಂಧಿ ೧೧

# ಶ್ರೇಣಿಕಪುತ್ರ ರಾಜಕುಮಾರನ ದೀಕ್ಷೆ

## ೧

## ಶ್ರೇಣಿಕ ಪತ್ನಿ ಧನಶ್ರೀಯ ಗರ್ಭಾವತರಣೆ, ದೋಹಲಾ ಮತ್ತು ರಾಜಕುಮಾರನ ಜನನ

ಜೈನಧರ್ಮದ ಈ ಪ್ರಭಾವವನ್ನು, ನೋಡಿ ಒಬ್ಬ ತಿರ್ಯಂಚನೂ ಸಹ ಸಹಸ್ರಸ್ಸಾರ ಸ್ವರ್ಗದಲ್ಲಿ ದೇವನಾದನು. ಅಲ್ಲಿ ತನ್ನ ಹದಿನೆಂಟನೆಯ ಸಾಗರೋಪಮ ಆಯುಸ್ಸಿನ ನಂತರ ಅವನು ಮಗಧ ದೇಶದ ರಾಜಗೃಹ ನಗರದಲ್ಲಿ ಶ್ರೇಣಿಕ ರಾಜನ ನವಯೌವನ ಪತ್ನಿ ಧನಶ್ರೀಯ ಉದರದಲ್ಲಿ ಅವತೀರ್ಣನಾದನು. ರಾಣಿಯು ತನ್ನ ಸ್ವಪ್ನದಲ್ಲಿ ಒಂದು ನಾಗ (ಆನೆ) ವನ್ನು ನೋಡಿದಳು ಮತ್ತು ತದನುಸಾರವಾಗಿ ತನ್ನ ಗರ್ಭದ ಐದನೆಯ ಮಾಸದಲ್ಲಿ ಅವಳಿಗೆ ಒಂದು ದೋಹಲೆಯು ಉತ್ಪನ್ನವಾಯಿತು. ತನ್ನ ಪರಿಜನರ ಸಹಿತವಾಗಿ ಶೋಭಾಯಮಾನವಾದ ಹಾಗೂ ಭ್ರಮರಸಮೂಹ ಗಳಿಂದ ಯುಕ್ತವಾದ ಆನೆಯ ಮೇಲೆ ಆರೂಢಳಾಗಿ, ಆಕಾಶವು ಮೇಘಾಚ್ಛಾದಿತ ವಾಗಿದ್ದು ಶುದ್ಧ ಜಲವೃಷ್ಟಿಯಾಗುತ್ತಿರುವಾಗ, ಈ ಮಹಾನ್ ಉತ್ಸವದ ಜೊತೆಯಲ್ಲಿ ವನಕ್ಕೆ ಹೋಗಿ ಕ್ರೀಡೆಯಾಡಬೇಕೆಂದು ಅವಳು ಇಚ್ಛಿಸಿದಳು. ತನ್ನಪ್ರಿಯ ಪತ್ನಿಯ ಈ ಇಚ್ಛೆಯನ್ನು ಅರಿತು ಪ್ರಿಯಾನುರಾಗಿ ರಾಜ ಶ್ರೇಣಿಕನು ಚಿಂತೆ ಗೊಳಗಾದನು. ಆದರೆ ಈ ದೋಹಲೆಯ ಪೂರ್ತಿ ಮಾಡಲು ಅಭಯಕುಮಾರನು ತನ್ನ ಸದ್‌ಭಾವಪೂರ್ಣ ವಿದ್ಯಾಧರಮಿತ್ರನನ್ನು ಸ್ಮರಿಸಿದನು. ಅನಂತರ ಒಂದು ಶುಭದಿನ ಆ ಧನ್ಯ ಪುಣ್ಯಶಾಲಿ ಪುರುಷನು ಉತ್ಪನ್ನವಾದನು. ಅವನು ಎಲ್ಲ ಜನರ ಮನಸ್ಥಿತಿಯಲ್ಲಿ ಹರ್ಷವನುಂಟುಮಾಡಿದನು. ದೇವಿಯು ತನ್ನ ಸ್ವಪ್ನದಲ್ಲಿ ಒಂದು ಗಜವನ್ನು ನೋಡಿದ್ದಳು. ಆದ್ದರಿಂದ ಆ ಪುತ್ರನಿಗೆ ಗಜಕುಮಾರನೆಂದು ಹೆಸರಿಡಲಾಯಿತು. ಬೆಳೆಯುತ್ತಾ ಗಜಪುತ್ರನು ಯೌವನ ಪ್ರಾಪ್ತನಾದನು. ಅವನು ಸಮಸ್ತ ಕಲೆಗಳಲ್ಲಿ ಕುಶಲನೂ, ಮದನನ ಸಮಾನವಾಗಿ ಸುರೂಪನೂ ಹಾಗೂ ಜಿನೇಶ್ವರನ ಚರಣಕಮಲಗಳಲ್ಲಿ ಭ್ರಮರದ ಸಮಾನ ಸೇವಕನಾದನು.

## ೨

## ಗಜಕುಮಾರನ ದೀಕ್ಷೆ, ದಂತೀಪುರದ ಯಾತ್ರೆ ಹಾಗೂ ಅಲ್ಲಿ ಪರ್ವತದ ಮೇಲೆ ಆತಾಪನ ಯೋಗ

ಒಂದು ದಿನ ಅಲ್ಲಿಗೆ ವೀರ ಜಿನೇಂದ್ರನ ಆಗಮನವಾಯಿತು. ಅವನನ್ನು ನಮಸ್ಕರಿಸಲು ರಾಜ ಶ್ರೇಣಿಕನು ಅವನ ಬಳಿ ಹೋದನು. ಆ ಸಮಯದಲ್ಲಿ ವಿಸ್ತಾರ

ಪೂರ್ವಕವಾಗಿ ಧರ್ಮೋಪದೇಶದ ಶ್ರವಣಮಾಡಿ ಗಜಕುಮಾರನು ಅಲ್ಲೇ ದೀಕ್ಷೆ ತೆಗೆದುಕೊಂಡನು. ಮತ್ತೆ ಅವನು ತೀರ್ಥಂಕರರ ಆಜ್ಞಾನುಸಾರವಾಗಿ ಸಂಚರಿಸುತ್ತಾ ಕಲಿಂಗ ದೇಶದ ದಂತೀಪುರವೆಂಬ ನಗರವನ್ನು ತಲುಪಿದನು. ನಗರದ ಪಶ್ಚಿಮ ದಿಕ್ಕಿನಲ್ಲಿ ಪರ್ವತದ ಶಿಖರದ ಮೇಲೆ ಆ ಶ್ರೇಷ್ಠ ಮತ್ತು ಪೂಜ್ಯ ದಿಗಂಬರ ಮುನಿ ಗಜಕುಮಾರನು ಯೋಗ-ನಿರೋಧ ಮಾಡಿ ಆತಾಪನ ಯೋಗದಲ್ಲಿ ಸ್ಥಿತನಾದನು. ಭವ್ಯಜನಗಳು ಹೋಗಿ ಅವನಿಗೆ ಪ್ರಣಾಮ ಮಾಡಿದರು. ತನ್ನ ವೈರಿರೂಪಿ ದಾನವರಿಗೆ ನರಸಿಂಹನೋಪಾದಿಯಲ್ಲಿದ್ದ. ಆ ನಗರದ ರಾಜ ನರಸಿಂಹನು ಗಜಕುಮಾರ ಮುನಿಯು ತೀವ್ರ ತಾಪವನ್ನು ಸಹಿಸುತ್ತಿರುವುದನ್ನು ನೋಡಿದನು ಮತ್ತು ಈ ಮುನಿಸಂಘದಲ್ಲಿ ಈ ಮುನಿಯು ಈ ಪ್ರಕಾರವಾಗಿ ಏಕೆ ತಾಪವನ್ನು ಸಹಿಸುತ್ತಿರುವನು ಎಂದು ತನ್ನ ಮಂತ್ರಿ ಬುದ್ಧದಾಸನನ್ನು ಪ್ರಶ್ನಿಸಿದನು. ಇದಕ್ಕೆ ಆ ದುಷ್ಟ ಮಂತ್ರಿಯು—ಈ ಬಡಪಾಯಿ ಅನಾಥನು ವಾತರೋಗದಿಂದ ಅತ್ಯಂತ ಪೀಡಿತನಾಗಿದ್ದಾನೆ ಮತ್ತು ಇದಕ್ಕೋಸ್ಕರ ಈ ತೀವ್ರ ಸೂರ್ಯನ ಶಾಖದಲ್ಲಿ ಸ್ಥಿತನಾಗಿದ್ದಾನೆ ಎಂದು ಉತ್ತರಿಸಿದನು.

೩

## ಶಿಲಾ-ತಾಪದಿಂದ ಉಪಸರ್ಗ, ಗಜಕುಮಾರನ ಮೋಕ್ಷ ಮತ್ತು ರಾಜ ಹಾಗೂ ಮಂತ್ರಿಯ ಜೈನಧರ್ಮ ಗ್ರಹಣ

ಮಂತ್ರಿಯ ಈ ಮಾತನ್ನು ಕೇಳಿ ರಾಜನು ಮುನಿಯ ಶರೀರದ ಈ ವಾತ ರೋಗವನ್ನು ಯಾವ ಪ್ರಕಾರವಾಗಿ ಅಳಿಸಿಹಾಕಬಹುದು ಎಂದು ಮಂತ್ರಿಯನ್ನು ಕೇಳಿದನು. ಆಗ ಅಮಾತ್ಯನು ಈ ರೀತಿ ಹೇಳಿದನು—ಮಹಾರಾಜ, ಇವನು ಕುಳಿತುಕೊಳ್ಳುವ ಶಿಲೆಯನ್ನು ತಪ್ತಾಯಮಾನ ಮಾಡಬೇಕಾಗುವುದು. ಆಗ ರಾಜನು ತಕ್ಷಣದಲ್ಲೇ ಮುನಿಯ ರೋಗವನ್ನು ನಿವಾರಿಸುವ ಈ ಪ್ರತೀಕಾರವನ್ನು ಮಾಡಿಬಿಡು ಎಂದು ಮಂತ್ರಿಗೆ ಹೇಳಿದನು. ಮಂತ್ರಿಯೂ ಸಹ ರಾಜನ ಆದೇಶವನ್ನು ಪಡೆದು ಆ ಶಿಲೆಯನ್ನು ಚೆನ್ನಾದ ಅಗ್ನಿಯ ಮೂಲಕ ಕಾಯಿಸಿಬಿಟ್ಟನು. ಈ ಕಡೆ ರಾಜಕುಮಾರ ಮುನಿಯು ನಗರದಲ್ಲಿ ಆಹಾರನಿಮಿತ್ತವಾಗಿ ತಿರುಗಾಡಿ ಬಂದು ಶುದ್ಧ ಚರಿತ್ರವಾದ ಅವನು ಅದೇಕಾದಿದ್ದ ಶಿಲೆಯ ಮೇಲೆ ಆಸೀನನಾದನು. ಆ ಉಪಸರ್ಗವನ್ನು ಧೈರ್ಯದಿಂದ ಸಹಿಸಿ ಅವನು ಮೋಕ್ಷಗಾಮಿ ಮತ್ತು ಅಶರೀರಿ ಸಿದ್ಧನಾದನು. ಆ ಸಮಯದಲ್ಲಿ ಅವನ ನಿರ್ವಾಣ ಉತ್ಸವಕ್ಕೆಂದು ಯಾವ ದೇವರುಗಳ ಆಗಮನವಾಯಿತೋ, ಅವರನ್ನು ನೋಡಿ ಬುದ್ಧದಾಸ ಮಂತ್ರಿಯ ಮನದಲ್ಲಿ ಕೂಡ ಉಪಶಮ ಭಾವವು ಉತ್ಪನ್ನವಾಯಿತು ಮತ್ತು ಅವನು ಆ ಜಿನ ಭಗವಾನನ ಭಕ್ತನಾಗಿಬಿಟ್ಟನು. ರಾಜ ನರಸಿಂಹನೂ ಕೂಡ ತನ್ನ ಗುಣಶಾಲಿ

ಪುತ್ರ ನರಪಾಲನಿಗೆ ರಾಜ್ಯವನ್ನು ಸಮರ್ಪಿಸಿ ಬೇರೆ ಒಂದು ಸಹಸ್ರ ರಾಜರ ಸಹಿತ ವಾಗಿ ಪ್ರವ್ರಜಿತನಾದನು, ಮತ್ತು ಅವನು ತನ್ನ ತಪಸ್ಸಿನ ಮೂಲಕ ಅತ್ಯಂತ ಪ್ರಸಿದ್ಧನಾದನು. ಅವನು ಚಂದ್ರನ-ಸಮನಾಗಿ ಉಜ್ವಲಕಾಯನಾಗಿ, ದೇವ ಸಮೂಹದ ಮೂಲಕ ಪ್ರಶಂಸಿತನಾಗುತ್ತಾ ಯಥಾ ಸಮಯದಲ್ಲಿ ಪಾಪಗಳಿಂದ ಮುಕ್ತನಾಗಿ ಗ್ರೈವೇಯಕ ಸ್ವರ್ಗದಲ್ಲಿ ದೇವನಾದನು.

ಇತಿ ಶ್ರೇಣಿಕ ಸುತ ಗಜಕುಮಾರನ ದೀಕ್ಷೆ
ವಿಷಯಕ ಹನ್ನೊಂದನೇ ಸಂಧಿ ಸಮಾಪ್ತ



# ಸಂಧಿ ೧೨

# ತೀರ್ಥಂಕರನ ಧರ್ಮೋಪದೇಶ

## ೧

## ಭವ್ಯರ ಪ್ರಾರ್ಥನೆಯ ಮೇರೆಗೆ ಜಿನೇಂದ್ರನ ಉಪದೇಶ–ಜೀವಿಗಳ ಭೇದ–ಪ್ರಭೇದ

ಯಾವಾಗ ಜಿನೇಶ್ವರ ಭಗವಾನನು ಭವ್ಯಜನಗಳು ಕೈಗಳನ್ನು ಜೋಡಿಸಿ, ತಲೆಬಾಗಿ (ಸಿರವನ್ನು ಬಾಗಿಸಿ) ಪ್ರಣಾಮ ಮಾಡುತ್ತಾ, ಭಕ್ತಿಪೂರ್ವಕವಾಗಿ, ಹರ್ಷದಿಂದ, ಪ್ರಫುಲ್ಲ ಮುಖದಿಂದ ಹಾಗೂ ಸಂಸಾರದ ದುಃಖಗಳಿಂದ ಉದ್ವಿಗ್ನರಾಗಿ ಅಲ್ಲಿ ಒಂದುಗೂಡಿರುವದನ್ನು ನೋಡಿದನು. ಅವನು ತನ್ನ ಬಾಯಿಂದ ಹೊರಡುತ್ತಿದ್ದ ಧೀರ ಮತ್ತು ದಿವ್ಯ ಧ್ವನಿಯಿಂದ, ನಾಗಗಳು, ಮನುಷ್ಯರು ಮತ್ತು ದೇವತೆಗಳನ್ನು ಸಂತುಷ್ಟರನ್ನಾಗಿ ಮಾಡುತ್ತಾ ತತ್ವಗಳ ಸ್ವರೂಪವನ್ನು ವರ್ಣನೆ ಮಾಡಿದನು. ಅವನು ಈ ರೀತಿ ವಿವರಿಸಿದನು—ಸಂಸಾರದ ಸಮಸ್ತ ತತ್ವಗಳು ಮುಖ್ಯತಃ ಎರಡು ಭಾಗಗಳಲ್ಲಿ ಹಂಚಬಹುದಾಗಿದೆ. ಒಂದು ಜೀವ ಮತ್ತು ಎರಡನೆಯದು ಅಜೀವ. ಪುನಃ ಜೀವವು ಎರಡು ಪ್ರಕಾರದ್ದಾಗಿದೆ—ಸಭವ ಅರ್ಥಾತ್ ಸಂಸಾರದಲ್ಲಿ ಭ್ರಮಣ ಮಾಡುವ, ಮತ್ತು ಎರಡನೆಯದು ಅಭವ ಅರ್ಥಾತ್ ನಿರ್ವಾಣ ಪ್ರಾಪ್ತವಾದ ಮತ್ತು ಯಾರಿಗೆ ಇನ್ನು ಪುನರ್ಜನ್ಮ–ಮರಣದ ತಡೆಯಿಲ್ಲವೋ ಅಂಥಹ ಮುಕ್ತಜೀವ. ಯಾವ ಜೀವವು ಸಂಸಾರಿಯಾಗಿದೆಯೋ, ಅಂಥಹವು ತಮ್ಮ–ತಮ್ಮ ಕರ್ಮಾನುಸಾರವಾಗಿ ಪರಿಣಮನ ಮಾಡುತ್ತಿವೆ. ಅವು ಜೀವಿಗಳ ಎಂಬತ್ನಾಲ್ಕು (84) ಲಕ್ಷ ಯೋನಿಗಳಲ್ಲಿ ಭ್ರಮಣ ಮಾಡುತ್ತಿವೆ. ಮತ್ತು ಬೇರೆಯವು ಬೇರೆ–ಬೇರೆ ಶರೀರ ಧಾರಣೆ ಮಾಡಿ ಅವರದೇ ಅನುರಾಗದಲ್ಲಿ ರಮಿಸುತ್ತಿವೆ. ಇಂದ್ರಿಯಗಳು ಮೂರು ಪ್ರಕಾರಗಳಿವೆ—ಏಕೇಂದ್ರಿಯ, ವಿಕಲೇಂದ್ರಿಯ ಮತ್ತು ಸಕಲೇಂದ್ರಿಯ. ಇವುಗಳಲ್ಲಿ ಏಕೇಂದ್ರಿಯದಲ್ಲಿ ಪುನಃ ಐದು ಭೇದಗಳೆಂದು ಹೇಳಲ್ಪಟ್ಟಿದೆ. ಇವುಗಳ ವರ್ಣನೆಯನ್ನು ಮುಂದೆ ಮಾಡಲಾಗುವುದು. ಈ ಎಲ್ಲಾ ಪ್ರಕಾರಗಳ ಜೀವಗಳ, ಆಹಾರ, ಶರೀರ, ಇಂದ್ರಿಯ, ಅನಪ್ರಾಣ, ಭಾಷೆ, ಮತ್ತು ಮನರೂಪ ಪರಮಾಣುಗಳ ವಿಶಿಷ್ಠ ರಚನೆ ಮಾಡುವ ಒಂದು ಸಾಮರ್ಥ್ಯವಿದೆಯೋ ಅದನ್ನು ಪರ್ಯಾಪ್ತಿ ಎಂದು ಕರೆಯಲಾಗುತ್ತದೆ. ಈ ಪರ್ಯಾಪ್ತಿಯು ಆಹಾರ ಮುಂತಾದ ಉಕ್ತ ಭೇದಗಳ ಅನುಸಾರ ಆರು ಪ್ರಕಾರಗಳೆಂದು ಹೇಳಲಾಗಿದೆ. ಜೀವದ ಒಂದು ಭವದಲ್ಲಿ ಅತಿಕಡಿಮೆ

ಆಯುಸ್ಥಿತಿ ಅಂತರ್ಮುಹೂರ್ತ (अन्तर्मुहूर्त) ಅರ್ಥಾತ್ ಒಂದು ಮುಹೂರ್ತ ಕಾಲದೊಳಗಿದೆ. ಆದರೆ ನಾರಕೀಯ ಜೀವಿಗಳ ಹಾಗೂ ದೇವತೆಗಳ ನಿಂದ್ಯ (ನೀಚ) ಆಯು ಹತ್ತು ಸಹಸ್ರ ವರ್ಷಗಳ ಹಾಗೂ ಉತ್ಕೃಷ್ಟ ಆಯು 33 ಸಾಗರೋಪಮ ಕಾಲದ್ದೆಂದೂ ಹೇಳಲಾಗಿದೆ. ಮನುಷ್ಯರ ಉತ್ಕೃಷ್ಟ ಆಯು ಮೂರು ಪಲ್ಯೋಪಮ ಕಾಲದ, ಏಕೇಂದ್ರಿಯ ಜೀವಿಗಳ ನಾಲ್ಕು ಪಲ್ಯೋಪಮ ಹಾಗೂ ವಿಕಲೇಂದ್ರಿಯ ಜೀವಿಗಳ ಐದು ಪಲ್ಯೋಪಮ ಕಾಲದ್ದೆಂದೂ ಹೇಳಲಾಗಿದೆ. ಪೂರ್ವೋಕ್ತ ಆಹಾರಾದಿ ಆರು ಪರ್ಯಾಪ್ತಿಗಳಲ್ಲಿ ಅಸಂಜ್ಞೀ ಜೀವಿಗಳ ಮೊದಲ ಐದು ಅರ್ಥಾತ್ ಆಹಾರ, ಶರೀರ, ಇಂದ್ರಿಯ, ಆನ ಪ್ರಾಣ ಮತ್ತು ಭಾಷೆ ಈ ಐದು ಪರ್ಯಾಪ್ತಿಗಳಿರುತ್ತವೆ. ಅವುಗಳಿಗೆ ಮನವಿರುವುದಿಲ್ಲ. ಆದರೆ ಸಂಜ್ಞಿ ಜೀವಿಗಳಿಗೆ ಮನವೂ ಇರುತ್ತದೆ ಮತ್ತು ಈ ಪ್ರಕಾರವಾಗಿ ಅವುಗಳಿಗೆ ಎಲ್ಲಾ ಆರು ಪರ್ಯಾಪ್ತಿಗಳಿರುತ್ತವೆ. ಜೀವವು ಹೊಸ ಜನ್ಮ ಧಾರಣೆ ಮಾಡುವ ಸಮಯದಲ್ಲಿ ಎಲ್ಲಿಯವರೆಗೆ ಅದರ ಈ ಪರ್ಯಾಪ್ತಿಗಳು ಪೂರ್ಣವಾಗುವುದಿಲ್ಲವೋ, ಅರ್ಥಾತ್ ಅವು ಆಹಾರಾದಿಯನ್ನು ಗ್ರಹಣ ಮಾಡಿ ಪೂರ್ಣ ಶರೀರ ಮತ್ತು ಇಂದ್ರಿಯಗಳ ಧಾರಣೆ ಮಾಡುವ ಹಾಗೂ ಶ್ವಾಸೋಚ್ಛ್ವಾಸ ಮಾಡುವ ಮತ್ತು ಶಬ್ದೋಚ್ಚಾರಣೆ ಮಾಡುವ ಯೋಗ್ಯತೆ ಪ್ರಾಪ್ತಿ ಮಾಡಿಕೊಳ್ಳುವುದಿಲ್ಲವೋ, ಅಲ್ಲಿಯವರೆಗೆ ಅವು ಅಪರ್ಯಾಪ್ತವೆಂದು ಕರೆಯಲ್ಪಡುತ್ತವೆ. ತಮ್ಮ ಅಪರ್ಯಾಪ್ತ ಅವಸ್ಥೆಯಲ್ಲಿಯೇ ಜನ್ಮ-ಮರಣ ಮಾಡುವಂಥಹ ಅನೇಕ ಜೀವಗಳೂ ಇರುತ್ತವೆ. ಇಂಥಹವು ಲಬ್ಧಪರ್ಯಾಪ್ತವೆಂದು ಕರೆಯಲ್ಪಡುತ್ತವೆ. ಪರ್ಯಾಪ್ತ ಜೀವಗಳಿಗೆ ತಮ್ಮ ಪರ್ಯಾಪ್ತಿಗಳನ್ನು ಪೂರ್ಣ ಮಾಡಲು ಕಡಿಮೆಯೆಂದರೆ ಒಂದು ಕ್ಷಣ ಹಾಗೂ ಹೆಚ್ಚೆಂದರೆ ಭಿನ್ನ-ಮುಹೂರ್ತ ಅರ್ಥಾತ್ ಒಂದು ಮುಹೂರ್ತದ ಸುಮಾರಿನ ಸಮಯ ಹಿಡಿಯುತ್ತದೆ. ಸಂಸಾರಿ ಜೀವಗಳ ಶರೀರವು ಐದು ಪ್ರಕಾರವುಳ್ಳದ್ದಾಗಿದೆ. ಔದಾರಿಕ, ವೈಕ್ರಿಯಿಕ, ಆಹಾರಕ ಕಾರ್ಮಣ ಮತ್ತು ತೇಜಸ್. ಇವುಗಳಲ್ಲಿ ತಿರ್ಯಂಚ ಮತ್ತು ಮನುಷ್ಯರ ಸ್ಥೂಲ ಶರೀರವು ಔದಾರಿಕವೆಂದು ಕರೆಯಲಾಗುತ್ತದೆ. ದೇವತೆಗಳ ಮತ್ತು ನಾರಕಿ ಜೀವಗಳ ಶರೀರವು ಈ ರೀತಿ ಸ್ಥೂಲವಾಗಿರುವುದಿಲ್ಲ. ಅವು ಇಚ್ಛಾನುಸಾರ ಬದಲಾಗದಂಥವು. ಈ ಶರೀರವು ವೈಕ್ರಿಯಿಕ ಎಂದು ಕರೆಯಲಾಗುತ್ತದೆ. ಆಹಾರ, ಶರೀರವು ಕೇವಲ ಕೆಲವು ವಿಶೇಷ ಋದ್ಧಿಧಾರೀ ಮುನಿಗಳಿಗೆ ಮಾತ್ರ ಇರುತ್ತದೆ. ಇವುಗಳ ಮೂಲಕ ಅವರು ಅನ್ಯ ಕ್ಷೇತ್ರಗಳಲ್ಲಿ ಹೋಗಿ ವಿಶೇಷ ಜ್ಞಾನಿಗಳಿಂದ ತಮ್ಮ ಶಂಖೆಗಳ ನಿವಾರಣೆ ಮಾಡಿಕೊಳ್ಳುತ್ತಾರೆ. ಕಾರ್ಮಣ ಮತ್ತು ತೇಜಸ್ ಶರೀರವು ಎಲ್ಲಾ ಸಂಸಾರಿ ಜೀವಿಗಳಲ್ಲಿ ಯಾವಾಗಲೂ ಇದ್ದೇ ಇರುತ್ತದೆ. ಕಾರ್ಮಣ ಶರೀರದಲ್ಲಿ ಅದರ ಕರ್ಮ-ಸಂಸ್ಕಾರವು ಉಪಸ್ಥಿತವಿರುತ್ತದೆ. ಮತ್ತು ತೇಜಸ್ ಶರೀರದ ಮೂಲಕ ಅದು ಅನ್ಯ ಶರೀರಗಳೊಂದಿಗೆ ಜೊತೆಗೂಡಿ ಇರುತ್ತದೆ.

೨

## ಏಕೇಂದ್ರಿಯಾದಿ ಜೀವಗಳ ಪ್ರಕಾರ

ತಿರ್ಯಂಚ ಜೀವ ಎರಡು ಪ್ರಕಾರದ್ದಾಗಿರುತ್ತದೆ—ತ್ರಸ ಮತ್ತು ಸ್ಥಾವರ. ಇವುಗಳಲ್ಲಿ ಸ್ಥಾವರ ಜೀವಗಳಲ್ಲಿ ಐದು ಭೇದಗಳಿವೆ. ಪೃಥ್ವಿ-ಕಾಯಿಕ, ಜಲ-ಕಾಯಿಕ, ಅಗ್ನಿ-ಕಾಯಿಕ, ವಾಯು-ಕಾಯಿಕ ಹಾಗೂ ನಾನಾ ಪ್ರಕಾರಗಳಿಂದ ಹಸುರಾಗಿರುವ ವನಸ್ಪತಿ-ಕಾಯಿಕ. ಯಾವುಗಳ ಶರೀರವು ಕರಿ, ಕೆಂಪು, ಹಸಿರು, ಹಳದಿ, ಶ್ವೇತ ಅಥವಾ ಧೂಸರ ವರ್ಣದ್ದಾಗಿರುವುವೋ ಅವು ಪೃಥ್ವಿ-ಕಾಯಿಕ ಜೀವಗಳಾಗಿರುತ್ತವೆ, ಮತ್ತು ಈ ಕಾರಣದಿಂದ ಈ ಪೃಥ್ವಿಕಾಯಿಕ ಏಕೇಂದ್ರಿಯ ಜೀವಗಳ ಇವೇ ಐದು ವರ್ಣಗಳೆಂದು ಹೇಳಲಾಗಿದೆ. ಇವು ಮೃದು ಪೃಥ್ವಿಕಾಯಿಕ ಜೀವಗಳಾಗಿರುತ್ತವೆ. ಸುವರ್ಣ, ತಾಮ್ರ, ತ್ರಿಪುಷ ಅರ್ಥಾತ್, ಗಾಜು, ಮಣಿ ಮತ್ತು ಬೆಳ್ಳಿ ಇವು ಖರ ಪೃಥ್ವಿಕಾಯಿಕವೆಂದು ಕರೆಯಲ್ಪಟ್ಟವೆ. ಜಲಕಾಯಿಕ ಜೀವಗಳ ಶರೀರವು ವಾರುಣಿ ಅರ್ಥಾತ್ ಮದ್ಯ, ಕ್ಷೀರ, ಕ್ಷಾರ, ಘೃತ, ಮಧು ಮತ್ತು ಜಲ ಮುಂತಾದ ರೂಪವೆಂದು ಹೇಳಲ್ಪಟ್ಟಿದೆ. ದೂರದಿಂದಲೇ ತಮ್ಮ ಸ್ವರೂಪ ಧೂಮ್ರದಿಂದ ಮಲಿನವಾಗಿ ಕಾಣಿಸುವಂಥಹ ಅಥವಾ ವಜ್ರ, ವಿದ್ಯುತ್, ರವಿ, ಮಣಿಗಳು ಜ್ವಾಲೆಯ ರೂಪ ಜ್ಯೋತಿರ್ಮಯವಾಗಿರುವುವು. ಅಗ್ನಿಕಾಯಿಕಿಗಳು, ನಾನಾ ದಿಕ್ಕುಗಳಲ್ಲಿ ವಿಪುಲ (ಝಂಝಾವಾತ) ಮಂಡಲೀ (ಚಕ್ರವಾತ) ಅಥವಾ ಗುಂಜಾ-ನಿನಾದ ಸ್ವರೂಪವಾದ ವಾಯು ಬೀಸುತ್ತದೆಯೋ ಅದು ವಾಯುಕಾಯವು. ವನಸ್ಪತಿ ಕಾಯಿಕವು ಸುಪ್ರಸಿದ್ಧವಾಗೇ ಇದೆ. ಇದು ಗುಚ್ಛಗಳಲ್ಲಿ, ಗುಲ್ಮಗಳಲ್ಲಿ, ಬಳ್ಳಿಗಳಲ್ಲಿ ಮತ್ತು ತೃಣಗಳಲ್ಲಿ, ಪರ್ವತಗಳಲ್ಲಿ ಹಾಗೂ ವೃಕ್ಷಗಳ ಸಘನ ಶಾಖೆಗಳಲ್ಲಿ ಉತ್ಪನ್ನವಾಗುತ್ತದೆ. ಹೀಗೆಂದು ಯತೀಶ್ವರನು ಹೇಳಿದ್ದಾನೆ.

ವೃಕ್ಷರೂಪೀ ವನಸ್ಪತಿಕಾಯ ಜೀವವು ಪರ್ಯಾಪ್ತವೂ ಆಗಿರುತ್ತದೆ ಮತ್ತು ಅಪರ್ಯಾಪ್ತವೂ ಕೂಡ; ಸೂಕ್ಷ್ಮವೂ ಆಗಿರುತ್ತದೆ ಮತ್ತು ಮೇಘ ಅರ್ಥಾತ್ ಸ್ಥೂಲವೂ ಆಗಿರುವುದು. ಮತ್ತು ಸಾಧಾರಣವೂ ಆಗಿರುತ್ತದೆ ಏವಂ ಪ್ರತ್ತ್ಯೇಕವೂ ಸಹ. ಯಾವುಗಳ ಶ್ವಾಸೋಚ್ಛ್ವಾಸ ಮತ್ತು ಆಹಾರ ಸಾಧಾರಣ ಅರ್ಥಾತ್ ಒಂದೇ ಜೊತೆಯಾಗಿರುವುವೋ ಅಂಥಹವು ಸಾಧಾರಣ ಜೀವಗಳು. ಒಂದೊಂದು ವೃಕ್ಷದಲ್ಲೂ ಬೇರೆ-ಬೇರೆ ರೂಪದಿಂದ ಇರುವ ಹಾಗೂ ಯಾವು ಛೇದನ ಮತ್ತು ಭೇದನ ಕ್ರಿಯೆಗಳಿಂದ ಮೃತ್ತ್ಯುವನ್ನು ಪಡೆಯುವವೋ ಅವು ಪ್ರತ್ತ್ಯೇಕ ವನಸ್ಪತೀ ಜೀವಗಳು.

ದ್ವೀಂದ್ರಿಯ ಜೀವ ತುನ್ನಾಧಿ ಅರ್ಥಾತ್ ಹೊಟ್ಟೆಯ ಕೀಟಾಣು ಕುಕ್ಷಿಕ್ರಿಮಿ ಮತ್ತು ಕ್ಷುಬ್ಧ (ನೀರಿನಲ್ಲಿ ಮುಳುಗಿರುವ) ಶಂಖ ಮುಂತಾದವು ಅಸಂಖ್ಯ ಭೇದರೂಪವೆಂದು ಕರೆಯಲ್ಪಟ್ಟವೆ. ಗೋಮಿ ಮತ್ತು ಪಿಪೀಲಿಕಾ ಅರ್ಥಾತ್ ಇರಿವೆ ಮುಂತಾದವು ತ್ರೀಂದ್ರಿಯವೂ ಮತ್ತು ನೊಣ ಮತ್ತು ಭ್ರಮರ ಮುಂತಾದವು ನಾಲ್ಕು

ಇಂದ್ರಿಯಗಳುಳ್ಳ ಜೀವಗಳು. ಈ ಜೀವಗಳಲ್ಲಿ ಕ್ರಮಶಃ ಏಕೇಂದ್ರಿಯದಿಂದ ಹಿಡಿದು ನಾಲ್ಕು ಇಂದ್ರಿಯಗಳ ತನಕ ಜ್ಞಾನೇಂದ್ರಿಯವಿರುತ್ತದೆ, ಅರ್ಥಾತ್ ಏಕೇಂದ್ರಿಯ ಜೀವದಲ್ಲಿ ಸ್ಪರ್ಶಮಾತ್ರಕ್ಕೆ ಒಂದೇ ಇಂದ್ರಿಯವಿರುತ್ತದೆ. ದ್ವೀಂದ್ರಿಯಗಳಲ್ಲಿ ಸ್ಪರ್ಶ ಮತ್ತು ರಸ ಈ ಎರಡು ಇಂದ್ರಿಯಗಳಿರುತ್ತವೆ. ತ್ರೀಂದ್ರಿಯಗಳಲ್ಲಿ, ಸ್ಪರ್ಶ, ರಸ ಮತ್ತು ಗಂಥ ಈ ಮೂರು ಇಂದ್ರಿಯಗಳೂ ಹಾಗೂ ಚತುರಿಂದ್ರಿಯ ಜೀವಗಳಲ್ಲಿ ಸ್ಪರ್ಶ, ರಸ, ಗಂಧ ಮತ್ತು ನೇತ್ರ ಈ ನಾಲ್ಕು ಇಂದ್ರಿಯಗಳಿರುವವು.

೩

## ಜೀವಗಳ ಸಂಜ್ಞೀ-ಅಸಂಜ್ಞೀ ಭೇದ ಮತ್ತು ದಶಪ್ರಾಣ

ಉಕ್ತ ಪ್ರಕಾರದಲ್ಲಿ ಒಂದರಿಂದ ಹಿಡಿದು ನಾಲ್ಕು ಇಂದ್ರಿಯಗಳವರೆಗೆ ಜೀವ ಗಳಲ್ಲಿ ಕ್ರಮಶಃ ಮೂರು ನಾಲ್ಕು ಮತ್ತು ಐದು ಪರ್ಯಾಪ್ತಿಗಳಿರುತ್ತವೆ. ಅರ್ಥಾತ್ ಏಕೇಂದ್ರಿಯಗಳಲ್ಲಿ ಆಹಾರ, ಶರೀರ ಹಾಗೂ ಸ್ಪರ್ಶೇಂದ್ರಿಯ, ದ್ವಿವೇಂದ್ರಿಯಗಳಲ್ಲಿ ಆಹಾರ, ಶರೀರ, ಪ್ರಥಮ ಎರಡು ಇಂದ್ರಿಯಗಳು ಮತ್ತು ಆನ ಪ್ರಾಣ ಈ ನಾಲ್ಕು ಪರ್ಯಾಪ್ತಿಗಳೂ ಹಾಗೂ ಚತುರೀಂದ್ರಿಯ ಜೀವಗಳಲ್ಲಿ ಆಹಾರ, ಶರೀರ, ನಾಲ್ಕು ಇಂದ್ರಿಯಗಳೂ, ಆನಪ್ರಾಣ ಮತ್ತು ಭಾಷೆ ಈ ಐದು ಪರ್ಯಾಪ್ತಿಗಳಿರುತ್ತವೆ. ಇವುಗಳು ಹತ್ತು ಪ್ರಾಣಗಳಲ್ಲಿ ಕ್ರಮಶಃ ಆರು ಏಳು ಮತ್ತು ಎಂಟು ಪ್ರಾಣಗಳಿರುತ್ತವೆ. ಅರ್ಥಾತ್ ಏಕೇಂದ್ರಿಯ ಜೀವಗಳ ಒಂದು ಸ್ಪರ್ಶ ಇಂದ್ರಿಯ, ಒಂದು ಕಾಯಬಲ, ಆನ ಪ್ರಾಣ ಮತ್ತು ಆಯು ಸಹಿತವಾದ ನಾಲಿಗೆ ಮತ್ತು ವಾಕ್ ಸೇರಿ ದ್ವೀಂದ್ರಿಯದ ಆರು ಪ್ರಾಣಗಳಾದವು. ಇವುಗಳಲ್ಲಿ ಘ್ರಾಣವು ಸೇರುವುದರಿಂದ ತ್ರೀಂದ್ರಿಯದ ಏಳು ಹಾಗೂ ಅವುಗಳಲ್ಲಿ ಚಕ್ಷು ಸೇರುವುದರಿಂದ ಚತುರೀಂದ್ರಿಯದ ಎಂಟು ಪ್ರಾಣಗಳಾದವು. ಈ ರೀತಿ ನಿರ್ಮಲ ಜ್ಞಾನಿ ಮಹಾಮುನಿಗಳು ಹೇಳುತ್ತಾರೆ.

ಪಂಚೇಂದ್ರಿಯ ಜೀವಗಳಲ್ಲಿ ಎರಡು ಭೇದಗಳಿವೆ. ಸಂಜ್ಞಿ ಮತ್ತು ಅಸಂಜ್ಞೀ. ಯಾವುಗಳಿಗೆ ಮನವಿರುವುದಿಲ್ಲವೋ ಅವು ನಿಶ್ಚಯವಾಗಿ ಅಸಂಜ್ಞಿಯೆಂದು ಕರೆಯಲ್ಪಡುತ್ತವೆ. ಅವು ತಮ್ಮ ಪಾಪಗಳ ಫಲಸ್ವರೂಪ ಶಿಕ್ಷಣ ಮತ್ತು ಆಲಾಪ ಮುಂತಾದವನ್ನು ಗ್ರಹಣ ಮಾಡಲಾಗುವುದಿಲ್ಲ. ಅವು ನಿರಂತರವಾಗಿ ಅಜ್ಞಾನದಲ್ಲಿ ಆಳವಾಗಿ ಮುಳುಗಿರುತ್ತವೆ. ಅಜ್ಞಾನಿ ಜೀವಗಳನ್ನು ಜಿನೇಂದ್ರ ಭಗವಾನನು ಹತ್ತು ಪ್ರಾಣ ಗಳಲ್ಲಿ, ಮನವನ್ನು ಬಿಟ್ಟು ಮಿಕ್ಕ ಒಂಬತ್ತು ಪ್ರಾಣ ಹಾಗೂ ಆರು ಪರ್ಯಾಪ್ತಿಗಳಲ್ಲಿ ಮನಪರ್ಯಾಪ್ತಿಯನ್ನು ಬಿಟ್ಟು, ಉಳಿದ ಐದು ಪರ್ಯಾಪ್ತಿಗಳನ್ನು ಹೇಳಿದ್ದಾನೆ. ಸಂಜ್ಞಿ ತಿರ್ಯಂಚ ಜೀವವು ಆರೂ ಪರ್ಯಾಪ್ತಿಗಳಿಂದ ಕೂಡಿದೆ. ಅವು ಸ್ಪರ್ಶ, ರಸ, ಘ್ರಾಣ, ನೇತ್ರ ಮತ್ತು ಶ್ರೋತ್ರ ಈ ಐದೂ ಇಂದ್ರಿಯಗಳನ್ನು ಧಾರಣೆ ಮಾಡುತ್ತವೆ ಹಾಗೂ ಐದೂ ಇಂದ್ರಿಯಗಳು—ಮನ ವಚನ ಮತ್ತು ಕಾಯ ಈ ಮೂರೂ ಬಲಗಳೂ

ಹಾಗೂ ಆನ ಪ್ರಾಣ ಮತ್ತು ಆಯು ಈ ಎರಡರ ಸಹಿತ ಹತ್ತೂ ಪ್ರಾಣಗಳಿಂದ ಯುಕ್ತವಾಗಿ ಜೀವಿತವಾಗಿರುತ್ತವೆ. ಈಗ ನಾನು ಇವುಗಳ ನಾನಾ ಪ್ರಕಾರಗಳನ್ನು ವರ್ಣನೆ ಮಾಡುತ್ತೇನೆ. ಇವುಗಳನ್ನು ಸಾಮಾನ್ಯವಾಗಿ ನೋಡಲು ಆಗುವುದಿಲ್ಲ. ಜಲಚರ, ಪಕ್ಷಗಳು ಮುಂತಾದವು ಐದು ಪ್ರಕಾರಗಳಲ್ಲಿವೆ. ಇವುಗಳಲ್ಲಿ ಕಚ್ಛಪ, ಮೊಸಳೆ ಮತ್ತು ಮಕರಾಪಹರ್ತಾ ಶುಂಶುಮಾರವೂ ಸಹ ಇವೆ. ನಭಚರಗಳು ಅನೇಕ ಪ್ರಕಾರವಿವೆ. ಕೆಲವುಗಳ ರೆಕ್ಕೆಗಳು ದೊಡ್ಡವಾಗಿಯೂ ಮತ್ತು ಸ್ಪಷ್ಟವಾಗಿ ವಿಲಗವಾಗಿರುತ್ತವೆ, ಹಾಗೂ ಕೆಲವುಗಳ ರೆಕ್ಕೆಗಳು ಚರ್ಮದಿಂದ ಕೂಡಿ, ಸಘನ ರೋಮಸಹಿತವಾಗಿರುತ್ತವೆ. ನಾಲ್ಕು ಕಾಲಿನ ಜಲಚರಗಳು ನಾಲ್ಕು ಪ್ರಕಾರಗಳಾಗಿವೆ. ಒಂದು–ಖುರ, ಎರಡು–ಖುರ ಹಸ್ತಿಪದ ಮತ್ತು ಶ್ವಾನಪದ. ಇವುಗಳಲ್ಲಿ ಅಸಂಖ್ಯ ಭೇದಗಳಿವೆ. ಉರುಸರ್ಪಿ, ಮಹೋರಗ, (ಮಹಾ ಉರಗ) ಅಜಗರ ಮುಂತಾದವು ಆನೆಯನ್ನೂ ಸಹ ನುಂಗಬಲ್ಲಂತಹವಾಗಿ ವಿಶಾಲವಾಗಿರುತ್ತವೆ. ಭುಜಸರ್ಪಿ ಸರಡ (ಓತಿಕ್ಯಾತ), ಉಂದುರ (ಮೂಷಕ)ಗೋಧಾ (ಗೋಹ) ಮುಂತಾದ ಹೆಸರುಳ್ಳ ಅನೇಕ ಭೇದಗಳನ್ನು ಹೇಳಲಾಗಿವೆ. ಜಲಚರ ಜೀವಗಳು ಜಲದಲ್ಲಿರುತ್ತವೆ. ಖಗವು ವೃಕ್ಷ ಮತ್ತು ಪರ್ವತದ ಮೇಲೂ ಹಾಗೂ ಸ್ಥಲಚರ ಗ್ರಾಮ, ಪುರ ಮತ್ತು ವನದಲ್ಲಿರುತ್ತವೆ. ದ್ವೀಪ ಮತ್ತು ಸಮುದ್ರಗಳ ವಲಯಾಕಾರ ಮಂಡಲವು ಅಸಂಖ್ಯವಾಗಿವೆ. ಇವುಗಳ ಮಧ್ಯವರ್ತೀ ಪ್ರಥಮದ್ವೀಪವು ಜಂಬೂದ್ವೀಪವೆಂದು ಕರೆಯಲಾಗಿದೆ.

## ೪

## ಗತಿ, ಇಂದ್ರಿಯ ಮುಂತಾದ ಚತುರ್ದಶ ಜೀವ ಮಾರ್ಗಗಳು ಮತ್ತು ಗುಣಸ್ಥಾನ

(1) ಸಂಸಾರಿ ಜೀವವು ಮನುಷ್ಯ, ತಿರ್ಯಂಚ, ನಾರಕ ಮತ್ತು ದೇವತೆ, ಈ ನಾಲ್ಕು ಗತಿಗಳ ಅನುಸಾರವಾಗಿ ನಾಲ್ಕು ಪ್ರಕಾರಗಳಲ್ಲಿದೆ. (2) ಸ್ಪರ್ಶಾದಿ ಐದು ಇಂದ್ರಿಯಗಳ ಭೇದದಿಂದ ಅವು ಐದು ಪ್ರಕಾರಗಳೆಂದು ಹೇಳಲ್ಪಟ್ಟಿದೆ. (3) ಕಾಯದ ಅಪೇಕ್ಷೆಯಿಂದ ಜೀವಗಳ ಆರು ಭೇದಗಳಿವೆ–ಬಾದರ ಮತ್ತು ಸೂಕ್ಷ್ಮ ಏಕೇಂದ್ರಿಯ ಹಾಗೂ ದ್ವೀಂದ್ರಿಯ ಮುಂತಾದ ನಾಲ್ಕು ತ್ರಸಗಳು (4) ಯೋಗದ ಅಪೇಕ್ಷೆಯಿಂದ ಅವು ಮೂರು ಪ್ರಕಾರಗಳಲ್ಲಿವೆ–ಕಾಮಯೋಗಿ, ವಚನ ಯೋಗಿ ಮತ್ತು ಮನಯೋಗಿ. (5) ವೇದದ ಅಪೇಕ್ಷೆಯಿಂದಲೂ ಸಹ ಅವುಗಳಲ್ಲಿ ಮೂರು ಭೇದಗಳಿವೆ. ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ. (6) ಕಷಾಯದ ಅಪೇಕ್ಷೆ ಅವು ಕ್ರೋಧಿ, ಮಾನಿ, ಮಾಯಾವಿ ಮತ್ತು ಮೋಹಿ ಹೀಗೆ ನಾಲ್ಕು ಪ್ರಕಾರಗಳಿವೆ. (7) ಜ್ಞಾನದ ಅಪೇಕ್ಷೆ ಅವುಗಳ ಎಂಟು ಭೇದಗಳಿವೆ–ಮತಿಜ್ಞಾನಿ, ಶ್ರುತಜ್ಞಾನಿ, ಅವಧಿಜ್ಞಾನಿ, ಮನಃಪರ್ಯಜ್ಞಾನಿ ಮತ್ತು ಕೇವಲಜ್ಞಾನಿ ಈ ಐದು

ಹಾಗೂ ಕುಮತಿ, ಕುಶ್ರುತ ಮತ್ತು ಕು ಅವಧಿ ಈ ಮೂರು ಕುಜ್ಞಾನಿಗಳು. (8) ಸಂಯಮದ ದೃಷ್ಟಿಯಿಂದ ಜೀವಗಳಲ್ಲಿ ಮೂರು ಭೇದಗಳಿವೆ–ಸಂಯಮಿ, ಸಂಯಮಾಸಂಯಮಿ ಮತ್ತು ಅಸಂಯಮಿ ಅಥವಾ ಸಾಮಾಯಿಕ ಛೇದೋಪಸ್ಥಾಪನ, ಸೂಕ್ಷ್ಮ ಸಾಂಪರಾಯ ಮತ್ತು ಯಥಾಖ್ಯಾತ ಇವು ನಾಲ್ಕು, ಸಂಯಮಗಳ ದೃಷ್ಟಿಯಿಂದ ನಾಲ್ಕು ಪ್ರಕಾರಗಳಿವೆ. (9) ದರ್ಶನದ ದೃಷಿಯಿಂದ ಕ್ಷಾಯಿಕ, ಔಪಶಮಿಕ ಮತ್ತು ಕ್ಷಾಯೋಪಶಮಿಕ ಈ ಮೂರು ಭೇದಗಳಿವೆ, ಅಥವಾ ಚಕ್ಷು, ಅಚಕ್ಷು, ಅವಧಿ ಮತ್ತು ಕೇವಲ–ಈ ನಾಲ್ಕು ದರ್ಶನರೂಪಗಳಿವೆ. (10) ಲೇಶ್ಯಾ ಭಾವದ ಅನುಸಾರ ಅವುಗಳ ಕೃಷ್ಣ, ನೀಲ, ಕಾಪೋತ, ಪೀರ, ಪದ್ಮ ಮತ್ತು ಶುಕ್ಲ ಈ ಆರು ಭೇದಗಳಿವೆ. (11) ಭವ್ಯತ್ವದ ಅಪೇಕ್ಷೆ ಜೀವಗಳಲ್ಲಿ ಎರಡು ಭೇದಗಳಿವೆ–ಭವ್ಯ ಮತ್ತು ಅಭವ್ಯ (12) ಸಮ್ಯಕ್ತ್ವದ ಅಪೇಕ್ಷೆಯಲ್ಲೂ ಸಹ ಅವು ಎರಡು ಪ್ರಕಾರಗಳಲ್ಲಿವೆ, ಉಪಶಮ–ಸಮ್ಯಕ್ತ್ವ ಮತ್ತು ಕ್ಷಾಯಿಕ–ಸಮ್ಯಕ್ತ್ವ. (13) ಸಂಜ್ಞಿಯ ಅಪೇಕ್ಷೆ ಅವು ಎರಡು ಪ್ರಕಾರಗಳಿವೆ–ಸಂಜ್ಞಿ ಮತ್ತು ಅಸಂಜ್ಞಿ (14) ಆಹಾರದ ಅಪೇಕ್ಷೆ ಜೀವವು ಎರಡು ಪ್ರಕಾರಗಳಲ್ಲಿವೆ. ಸಂಸಾರದ ನಾಲ್ಕೂ ಗತಿಯಲ್ಲಿ ಯಾವ ಜೀವವಿವೆಯೋ, ಅವು ಎಲ್ಲಾ ಆಹಾರಕವಾಗಿವೆ. ಆದರೆ ಯಾವ ಜೀವವು ಕೇವಲಿ ಸಮುದ್‌ಘಾತ ಮಾಡುತ್ತಿದೆಯೋ ವಿಗ್ರಹ (ಸ್ಥಿರ) ಗತಿಯಲ್ಲಿದೆಯೋ ಹಾಗೂ ಯಾರು ಅರಹಂತ, ಅಯೋಗಿ ಮತ್ತು ಸಿದ್ಧ ಪರಮಾತ್ಮರಾಗಿ ಹೋಗಿದ್ದಾರೋ, ಅವರು ಆಹಾರವನ್ನು ತೆಗೆದುಕೊಳ್ಳುವುದಿಲ್ಲ. ಆದ್ದರಿಂದಲೇ ಅವು ಅನಾಹಾರಕರಾಗಿದ್ದಾರೆ. ಮಿಕ್ಕ ಎಲ್ಲಾ ಜೀವಗಳಿಗೂ ಆಹಾರಕವು ಗೊತ್ತಿರಬೇಕು. ಇವು ಹದಿನಾಲ್ಕು ಮಾರ್ಗಣಾ–ಸ್ಥಾನಗಳು, ಏಕೆಂದರೆ ಇವುಗಳ ಮೂಲಕ ನಾನಾ ದೃಷ್ಟಿಗಳಿಂದ ಜೀವಗಳ ಭೇದಗಳನ್ನು ಶೋಧಿಸಿ–ಅರಿಯುಲಾಗುತ್ತದೆ.

ಈಗ ಹದಿನಾಲ್ಕು ಗುಣಸ್ಥಾನಗಳನ್ನು (ಆಧ್ಯಾತ್ಮಿಕ ಉನ್ನತಿಯ ಭೂಮಿಕೆಗಳು) ಕೇಳಿ. ಮೊದಲನೆಯದು ಮಿಥ್ಯಾದೃಷ್ಟಿಗಳದ್ದಾಗಿದೆ, ಇದರಲ್ಲಿ ಸಮ್ಯಜ್ಞಾನದ ಸರ್ವಥಾ ಅಭಾವವಿಸುತ್ತದೆ. ಸಮ್ಯಜ್ಞಾನವನ್ನು ಪ್ರಾಪ್ತಿ ಮಾಡಿಕೊಂಡು ಅಲ್ಲಿಂದ ಮಿಥ್ಯಾತ್ವದ ಕಡೆಗೆ ಬೀಳುತ್ತಿರುವ ಜೀವಗಳ ಸ್ಥಾನವು ಸಾಸಾದನವೆಂದು ಕರೆಯಲ್ಪಡುತ್ತದೆ, ಮತ್ತು ಅದು ಎರಡನೆಯ ಗುಣಸ್ಥಾನವು. ಮೂರನೆಯ ಗುಣಸ್ಥಾನವು ಸಮ್ಯಕ್ತ್ವ ಮತ್ತು ಮಿಥ್ಯಾತ್ತ್ವದ ಮಿಶ್ರಣ ರೂಪವಾದ ಕಾರಣದಿಂದ ಮಿಶ್ರ ಗುಣಸ್ಥಾನವೆಂದು ಕರೆಯಲ್ಪಡುತ್ತದೆ. ನಾಲ್ಕನೆಯ ಗುಣಸ್ಥಾನವು ಯಾವ ಜೀವಗಳಿಗೆ ಸಮ್ಯಗ್‌ದೃಷ್ಟಿಯ ಪ್ರಾಪ್ತಿಯಾಗಿದೆಯಾದರೂ ವಿಷಯಗಳಲ್ಲಿ ವಿರಕ್ತಿರೂಪ ಸಂಯಮ ಉತ್ಪನ್ನವಾಗಿರುವುದಿಲ್ಲವೋ ಅಂತಹವುಗಳದ್ದೆಂದು ಹೇಳಲಾಗಿದೆ. ಆದ್ದರಿಂದಲೇ ಈ ಗುಣಸ್ಥಾನವು ಅವಿರತ ಸಮ್ಯಗ್‌ದೃಷ್ಟಿಯೆಂದು ಕರೆಯಲ್ಪಡುತ್ತದೆ. ಯಾವ ಜೀವಗಳಲ್ಲಿ ಸಮ್ಯಗ್‌ದೃಷ್ಟಿಯೂ ಇದ್ದು ಮತ್ತು

ಪೂರ್ಣರೂಪದಿಂದ ಸಂಯಮಿ ಆಗದೇ ಇದ್ದರೂ ಸಹ ಅಣುವ್ರತಿ ಅರ್ಥಾತ್ ಶ್ರಾವಕವಾಗಿರುವದೋ ಅಂತಹ ಜೀವಗಳದ್ದು ಐದನೆಯ ಗುಣಸ್ಥಾನವಾಗಿದೆ. ಆದ್ದರಿಂದಲೇ ಈ ಗುಣಸ್ಥಾನವನ್ನು ವಿರತಾವಿರತವೆಂಬ ಹೆಸರಿನಿಂದಲೂ ಅರಿಯಲ್ಪಡಬಹುದಾಗಿದೆ. ಯಾರಲ್ಲಿ ಮಹಾವ್ರತಗಳ ಪಾಲನೆಯಾಗುತ್ತಿದ್ದಾಗ್ಯೂ ಸ್ವಲ್ಪ ಪ್ರಮಾದ ಉಳಿದಿರುವುದೋ ಅಂಥ ಸಂಯಮೀ ಮುನಿಗಳದ್ದು ಆರನೆಯ ಗುಣಸ್ಥಾನವಾಗಿದೆ. ಆದ್ದರಿಂದ ಇದು ಪ್ರಮತ್ತ-ಸಂಯಮ ಗುಣಸ್ಥಾನವೆಂದು ಕಯಲ್ಪಡುತ್ತದೆ. ಏಳನೆಯ ಗುಣಸ್ಥಾನವು, ಸುಂದರ, ಗುಣಶಾಲಿ ಅಪ್ರಮತ್ತ-ಸಂಯಮಿ ಮುನಿಗಳದ್ದಾಗಿದೆ. ಎಂಟನೆಯ ಗುಣಸ್ಥಾನದಲ್ಲಿ ಮುನಿಗಳ ಉತ್ತರೋತ್ತರ, ಅಪೂರ್ವ ಭಾವಶುದ್ಧಿಯಾಗುತ್ತದೆ. ಆದ್ದರಿಂದ ಇದು ಗುಣಸ್ಥಾನ ಅಪೂರ್ವಕರಣವೆಂದು ಕರೆಯಲ್ಪಡುತ್ತದೆ. ಎಲ್ಲಿ ಮಾನ ಕಷಾಯದ ಅಭಾವದಿಂದ ಮುನಿಯು ಕೆಳಗೆ ಬೀಳುವ ಸಂಭಾವನೆಯಿರುವುದಿಲ್ಲವೋ ಅಲ್ಲಿ ಒಂಬತ್ತನೆಯ ಗುಣಸ್ಥಾನ ಅನಿವೃತ್ತೀಕರಣವಿರುವುದು. ಹತ್ತನೆಯ ಗುಣಸ್ಥಾನವು ಸೂಕ್ಷ್ಮ-ಸಾಂಪರಾಯ ಅಥವಾ ಸೂಕ್ಷ್ಮ-ರಾಗವೆಂದು ಕರೆಯಲ್ಪಡುತ್ತದೆ. ಏಕೆಂದರೆ ಇಲ್ಲಿ ತಲುಪಿದ ನಂತರ ಮುನಿಗಳ ಕಷಾಯಗಳು ಅತ್ಯಂತ ಮಂದ ಮತ್ತು ಸೂಕ್ಷ್ಮವಾಗಿಬಿಡುತ್ತದೆ. ಹನೊಂದನೆಯ ಗುಣಸ್ಥಾನವು ಉಪಶಾಂತ-ಕಷಾಯವೆಂದು ಹೇಳಲಾಗಿವೆ. ಏಕೆಂದರೆ ಇದರಲ್ಲಿ ಸಾಧಕನ ಎಲ್ಲಾ ಕಷಾಯಗಳ ಉಪಶಮನವಾಗುತ್ತದೆ. ಹನ್ನೆರಡನೆಯ ಗುಣಸ್ಥಾನವು ಕ್ಷೀಣ-ಕಷಾಯವು. ಏಕೆಂಂರೆ ಇದರಲ್ಲಿ ಕಷಾಯಗಳ ಉಪಶಮನ ಮಾತ್ರವೇ ಅಲ್ಲದೆ ಆತ್ಮ ಪ್ರದೇಶಗಳಲ್ಲಿ ಅದು ಪೂರ್ಣವಾಗಿ ಕ್ಷಯವಾಗುತ್ತದೆ. ಹದಿಮೂರನೆಯ ಗುಣಸ್ಥಾನ ಸಯೋಗಿ-ಜಿನ ಅಥವಾ ಸಯೋಗಿ-ಕೇವಲಿ ಎಂದು ಕರೆಯಲ್ಪಡುತ್ತದೆ. ಏಕೆಂದರೆ ಈ ಸ್ಥಾನದಲ್ಲಿ ಆತ್ಮಕ್ಕೆ ಕೇವಲ ಜ್ಞಾನೋತ್ಪತ್ತಿಯಾಗುತ್ತದೆ. ಆದರೆ ಶರೀರದ ವಿನಾಶವಾಗುವುದಿಲ್ಲ. ಆದ್ದರಿಂದ ಈ ಸಯೋಗಿ ಕೇವಲಿಯು ಧರ್ಮದ ಉಪದೇಶವನ್ನು ಮಾಡುವನು ಮತ್ತು ತೀರ್ಥಂಕರನೂ ಸಹ ಆಗಿರುತ್ತಾನೆ. ಯಾರು ಮನ, ವಚನ ಮತ್ತು ಕಾಯ ಈ ಮೂರು ಯೋಗಗಳ ಪರಿತ್ಯಾಗ ಮಾಡಿರುತ್ತಾರೋ ಹಾಗೂ ಔದಾರಿಕ, ತೈಜಸ್ ಮತ್ತು ಕಾರ್ಮಣ ಈ ಮೂರೂ ಶರೀರಗಳ ಭಾರದಿಂದ ಮುಕ್ತರಾಗಿ ಅಕ್ಷಯ ಪದವನ್ನು ಪಡೆದಿರುವರೋ ಅರ್ಥಾತ್ ಪರಮಾತ್ಮರಾಗಿ ಹೋಗಿರುವರೋ ಅಂತಹ ಅಯೋಗಿ ಕೇವಲಿಗಳ ಜೀವಗಳದ್ದು ಕೊನೆಯ ಹದಿನಾಲ್ಕನೆಯ ಗುಣಸ್ಥಾನವಾಗಿರುತ್ತದೆ.

ಜೀವಗಳ ಆಧ್ಯಾತ್ಮಿಕ ಉತ್ಕರ್ಷ ಹಾಗೂ ಕ್ರಮವಿಕಾಸದ ದೃಷ್ಟಿಯಿಂದ ಹದಿನಾಲ್ಕು ಗುಣಸ್ಥಾನಗಳೆಂದು ಹೇಳಲಾಗಿದೆಯೋ ಇವುಗಳಲ್ಲಿ ನಾರಕೀಯ ಜೀವಗಳ ಪ್ರಥಮ ನಾಲ್ಕು ಮಾತ್ರ ಗುಣಸ್ಥಾನವಾಗಬಲ್ಲವು ಮತ್ತು ದೊಡ್ಡ-ದೊಡ್ಡ ದೇವತೆಯೂ ಸಹ ಆ ನಾಲ್ಕು ಗುಣಸ್ಥಾನಗಳನ್ನು ಪಡೆಯಬಹುದು. ತಿರ್ಯಂಚ

ಜೀವಗಳಲ್ಲಿ ಐದು ಗುಣಸ್ಥಾನಗಳೂ ಆಗಬಹುದು ಆದರೆ ಪ್ರಥಮದಿಂದ ಹಿಡಿದು ಹದಿನಾಲ್ಕನೆಯವರೆಗಿನ ಸಮಸ್ತ ಗುಣಸ್ಥಾನಗಳಲ್ಲಿಯಾದರೋ ಮನುಷ್ಯನು ಮಾತ್ರವೇ ಏರಬಲ್ಲನು.

೫

## ಕರ್ಮಬಂಧ ಮತ್ತು ಕರ್ಮಭೇದದಲ್ಲಿ-ಪ್ರಭೇದ

ಸಂಸಾರಿ ಜೀವಗಳು ಶರೀರಧಾರಿಯಾಗಿರುತ್ತವೆ ಮತ್ತು ಅವು ನಿರಂತರವಾಗಿ ತಮ್ಮ ಕರ್ಮಗಳಿಂದ ಪೀಡಿತವಾಗಿರುತ್ತವೆ. ಇವುಗಳಿಗೆ ವಿರುದ್ಧವಾಗಿ ಯಾವುವು ಮುಕ್ತಿಪ್ರಾಪ್ತ ಜೀವಗಳೋ ಅವು ಶಾಶ್ವತ ಭಾವದಿಂದ ಯುಕ್ತವಾಗಿವೆ ಮತ್ತು ತಮ್ಮ ದರ್ಶನ-ಜ್ಞಾನರೂಪಿ ಸ್ವಾಭಾವಿಕ ಸುಖದಲ್ಲಿ ತಲ್ಲೀನವಾಗಿರುತ್ತವೆ. ಈ ಪ್ರಕಾರ ಜೀವಗಳು ನಿಕೃಷ್ಟ ಮತ್ತು ಉತ್ಕೃಷ್ಟವಾಗಿರುತ್ತವೆ. ಜೀವಗಳ ಚೇಷ್ಟೆ ಅರ್ಥಾತ್ ಮನ, ವಚನ ಮತ್ತು ಕಾಯದ ಕ್ರಿಯೆ ಯಾವ ರೀತಿ ಸಮ ಮತ್ತು ಅಸಮ ಅರ್ಥಾತ್ ಶುಭ ಮತ್ತು ಅಶುಭವಾಗುತ್ತದೆಯೋ, ಅದೇ ಪ್ರಕಾರವಾಗಿ ಅವುಗಳಲ್ಲಿ ಶುಭ ಮತ್ತು ಅಶುಭ ಕರ್ಮಗಳ ಗ್ರಹಣ ಮಾಡಲು ನಾನಾ ಭೇದಗಳಿರುತ್ತವೆ. ಯಾವ ಪ್ರಕಾರ ದೀಪದಲ್ಲಿ ಉರಿಯುತ್ತಿರುವ ಎಣ್ಣೆ ಅಗ್ನಿಯ ಶಿಖಾರೂಪವಾಗಿ ಪರಿವರ್ತಿತವಾಗುತ್ತಿರುತ್ತದೆಯೋ ಅದೇ ಪ್ರಕಾರ ಕರ್ಮರೂಪಿ ಪುದ್ಗಲ ಪರಮಾಣುವೂ ಸಹ ಜೀವಗಳ ಮೂಲಕ ಗ್ರಹಣ ಮಾಡಲ್ಪಡುತ್ತದೆ. ಮತ್ತು ತೀವ್ರ ಕಷಾಯರೂಪಿ ರಸಗಳ ಬಲದಿಂದ ಆ ಜೀವದಲ್ಲಿ ಪ್ರಮತ್ತಭಾವವನ್ನು ಉತ್ಪನ್ನ ಮಾಡುತ್ತವೆ. ಈ ಪ್ರಕಾರವಾಗಿ ಕರ್ಮದ ಮೂಲಕವೇ ಕರ್ಮದ ಬಂಧನವು ಅದೇ ಪ್ರಕಾರದಲ್ಲಾಗುತ್ತಿರುತ್ತದೆ, ಹೇಗೆಂದರೆ ಅಗ್ನಿಯಲ್ಲಿ ಬಿದ್ದ ಇಂಧನವು ಅಗ್ನಿಭಾವವನ್ನು ಪ್ರಾಪ್ತ ಮಾಡಿಕೊಳ್ಳುತ್ತದೆಯೋ ಹಾಗೆ. ಅಶುಭ ಭಾವದಿಂದ ಅಶುಭ ಕರ್ಮದ ಹಾಗೂ ಶುಭ ಭಾವದಿಂದ ಶುಭ ಕರ್ಮದ ಸಂಧಾನವಾಗುತ್ತದೆ. ಆದರೆ ಸಿದ್ಧ ಭಗವಾನನು ಯಾವ ಪ್ರಕಾರದ ಕರ್ಮ ಬಂಧನವನ್ನೂ ಮಾಡುವುದಿಲ್ಲ. ಜಿನೇಂದ್ರ ಮತದ ಅನುಸಾರ ಅಭವ್ಯ ಜೀವವು ಒಂದೇ ಇಲ್ಲ. ಅವು ಅನಂತವಾಗಿವೆ. ಕರ್ಮವೂ ಅನಂತ ರೂಪದಲ್ಲಿರುತ್ತವೆ, ಆದರೆ ವಿಶೇಷ ರೂಪದಿಂದ ಅವುಗಳನ್ನು ಎಂಟು ಪ್ರಕಾರದ್ದೆಂದು ಹೇಳಲಾಗಿದೆ. ಮೊದಲನೆಯದು ಜ್ಞಾನಾವರಣ ಕರ್ಮ. ಇದರ ಐದು ಭೇದಗಳಿವೆ—ಮತಿಜ್ಞಾನಾವರಣ, ಶ್ರುತಜ್ಞಾನಾವರಣ, ಅವಧಿಜ್ಞಾನಾವರಣ, ಮನಃಪರ್ಯಯ ಜ್ಞಾನಾವರಣ ಮತ್ತು ಕೇವಲ ಜ್ಞಾನಾವರಣ. ಇವು ತಮ್ಮ ತಮ್ಮ ನಾಮಾನುಸಾರ ಐದು ಪ್ರಕಾರಗಳ ಜ್ಞಾನಗಳನ್ನು ಆವರಿಸುತ್ತದೆ. ಅರ್ಥಾತ್ ಅವುಗಳನ್ನು ಮುಚ್ಚಿಡುತ್ತದೆ. ಈ ಜ್ಞಾನಾವರಣಗಳಿಂದ ಸರ್ವಥಾ ವಿಮುಕ್ತರಾದವರು ಅಶರೀರೀ ಸಿದ್ಧ ಭಗವಾನರಾಗುತ್ತಾರೆ. ದರ್ಶನಾವರಣದ ಒಂಭತ್ತು ಭೇದಗಳಿವೆ-ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ

(ಸ್ತ್ಯಯಾನಗೃಧ್ಧಿ) ನಿದ್ರಾ ಮತ್ತು ಪ್ರಚಲಾ, ಹಾಗೂ ಚಕ್ಷುದರ್ಶನಾವರಣ, ಅಚಕ್ಷು-ದರ್ಶನಾವರಣ, ಅವಧಿ-ದರ್ಶನಾವರಣ, ಮತ್ತು ಕೇವಲ ದರ್ಶನಾವರಣ. ಇವು ಗಳಲ್ಲಿ ಸ್ಪಷ್ಟತಯಾ ಉಕ್ತ ನಿದ್ರಾ ಮುಂತಾದ ಶಾರೀರಿಕ ದೋಷ ಉತ್ಪನ್ನವಾಗುತ್ತದೆ. ಹಾಗೂ ಚಕ್ಷು ಮುಂತಾದ ದರ್ಶನಗಳ ಆವರಣವಿರುತ್ತದೆ. ಮೂರನೆಯ ಕರ್ಮ ವೇದನೀಯವು ಎರಡು ಪ್ರಕಾರದ್ದಾಗಿದೆ—ಸಾತಾವೇದನೀಯ ಮತ್ತು ಅಸಾತಾವೇದನೀಯ. ಈ ವೇದನೀಯ ಕರ್ಮಗಳಲ್ಲಿ ಎರಡು ಪ್ರಕಾರಗಳು. ಇವು ಕ್ರಮಶಃ ಸುಖ ಮತ್ತು ದುಃಖದ ಅನುಭಾವವನ್ನು ಮಾಡಿಸುತ್ತವೆ. ನಾಲ್ಕನೆಯದು ಮೋಹನೀಯ ಕರ್ಮ ಮತ್ತು ಅದರಲ್ಲಿ ಮುಖ್ಯವಾಗಿ ಎರಡು ಭೇದಗಳಿವೆ—ದರ್ಶನ-ಮೋಹನೀಯ ಮತ್ತು ಚಾರಿತ್ರ ಮೋಹನೀಯ. ದರ್ಶನ-ಮೋಹನೀಯದಲ್ಲಿ ಮಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಈ ಮೂರು ಉಪಭೇದಗಳಿವೆ. ಚಾರಿತ್ರ ಮೋಹದಲ್ಲಿ ಪ್ರಥಮತಃ ಕಷಾಯ ಮತ್ತು ನೋಕಷಾಯವೆಂಬ ಈ ಎರಡು ಭೇಧಗಳಿವೆ. ಕಷಾಯದ ಮೊದಲ ನಾಲ್ಕು ಮುಖ್ಯ ಭೇದಗಳು ಮತ್ತು ಆಮೇಲೆ ಆ ನಾಲ್ಕೂ ಭೇದಗಳಲ್ಲಿ ಕ್ರಮಶಃ ನಾಲ್ಕು ನಾಲ್ಕು ಭೇದ. ಈ ಪ್ರಕಾರವಾಗಿ ಹದಿನಾರು ಭೇಧಗಳಿವೆ. ಮತ್ತು ನೋಕಷಾಯದ ಒಂಭತ್ತು ಭೇದಗಳಿವೆ. ಇವು ಗಳನ್ನು ಮುಂದೆ ತಿಳಿಸಲಾಗುವುದು. ನಾಲ್ಕು ಮುಖ್ಯ ಕಷಾಯಗಳು ಬಹಳ ಭೀಷಣವಾಗಿರುತ್ತವೆ. ಅವು ಜೀವಗಳ ಭಾವಗಳಲ್ಲಿ ದೂಷಣೆ ಉತ್ಪನ್ನ ಮಾಡಿ ಅವನ್ನು ಸಪ್ತಮ ನರಕದವರೆಗೆ ತೆಗೆದುಕೊಂಡು ಹೋಗುತ್ತವೆ. ಈ ಕಷಾಯಗಳು ಯಾವು ವೆಂದರೆ—ಕ್ರೋಧ, ಮಾನ, ಮಾಯೆ, ಮತ್ತು ಲೋಭ. ತಮ್ಮ ಕಠೋರ ರೂಪ ದಲ್ಲಿ ಇವು ಎಷ್ಟೊಂದು ದುಷ್ಕರವಾಗಿರುತ್ತವೆಂದರೆ ಅವುಗಳಲ್ಲಿರುವ ಜೀವವು ಉಪಶಾಮ ಭಾವವನ್ನು ಹೊಂದುವುದಿಲ್ಲ. ಒಂದು ವೇಳೆ ಸ್ವಯಂ ತೀರ್ಥಂಕರನೇ ಅವನ್ನು ಸಂಭೋದನೆ ಮಾಡಿದರೂ ಅವು ಪ್ರಾಪ್ತವಾಗುವುದಿಲ್ಲ. ಇದು ಕಷಾಯ ಗಳ ಅನಂತಾನುಬಂಧೀ ಸ್ವರೂಪವು.

೬

## ಕಷಾಯಗಳ ಸ್ವರೂಪ ಹಾಗೂ ಮೋಹನೀಯ ಕರ್ಮಗಳ ಮತ್ತು ಅನ್ಯ ಕರ್ಮಗಳ ಉತ್ತರ ಪ್ರವೃತ್ತಿಗಳು

ಕಷಾಯಗಳ ಎರಡನೆಯ ಪ್ರಕಾರವನ್ನು ಅಪ್ರತ್ಯಾಖ್ಯಾನವೆಂದು ಕರೆಯಲಾಗುತ್ತದೆ. ಇದು ಇದ್ದೂ ಸಹ ಸಮ್ಯಕದರ್ಶನ ಪ್ರಾಪ್ತಿಯಲ್ಲಿ ತಡೆಯಲಾಗುತ್ತದೆ. ಇದು ಇದ್ದೂ ಸಹ ಸಮ್ಯಕದರ್ಶನ ಪ್ರಾಪ್ತಿಯಲ್ಲಿ ತಡೆಯಾಗುವುದಿಲ್ಲ, ಆದರೆ ಗ್ರಹಣ ಮಾಡುವ ವೃತ್ತಿ ಉತ್ಪನ್ನಿಸುವುದಿಲ್ಲ. ಕಷಾಯಗಳ ಮೂರನೆಯ ಪ್ರಕಾರ ಪ್ರತ್ಯಾಖ್ಯಾನವು ಇದರ ಸದ್ಭಾವದಲ್ಲಿ ಸಮ್ಯಕದರ್ಶನ ಹಾಗೂ ಅಣುವ್ರತಗಳ ಗ್ರಹಣ ವೇನೋ ಆಗುತ್ತದೆ. ಆದರೆ ಮಹಾವ್ರತಗಳ ಪಾಲನೆಯಾಗುವುದಿಲ್ಲ. ನಾಲ್ಕನೆಯ

ಕಷಾಯಭೇದವು ಸಂಜ್ವಲನವು. ಇದರಿಂದ ಜೀವವು ಮಹಾವ್ರತಿ ಮುನಿಯೇನೋ ಆಗುತ್ತಾನೆ ಆವಾಗ್ಯೂ ಅವನು ಸೂಕ್ಷ್ಮರೂಪದಲ್ಲಿ ಕಷಾಯಕ್ಕೋಸ್ಕರ ಇರುತ್ತಾನೆ, ಇದರ ಸ್ವರೂಪವನ್ನು ಹತ್ತನೆಯ ಸೂಕ್ಷ್ಮ-ಸಾಂಪರಾಯವೆಂಬ ಗುಣಸ್ಥಾನದಲ್ಲಿ ಮಾಡಲಾಗುತ್ತದೆ. ನಾಲ್ಕೂ ಕಷಾಯಗಳ ತ್ರೀವ್ರತೆಯಿಂದ ಇಳಿಯುತ್ತಾ ಅವುಗಳ ಮಂದತವ ರೂಪವನ್ನು ತೋರ್ಪಡಿಸುವ ಈ ನಾಲ್ಕು ಪ್ರಕಾರಗಳ ಕಷಾಯಗಳಿರುತ್ತವೆ. ಮತ್ತು ಈ ಪ್ರಕಾರವಾಗಿ ಉಕ್ತ ನಾಲ್ಕು ಕಷಾಯಗಳ ಹದಿನಾರು ಭೇದಗಳಾಗುತ್ತವೆ. ಈ ಎಲ್ಲಾ ಕಷಾಯಗಳನ್ನು ಸಿದ್ಧ ಭಗವಾನನು ತ್ಯಾಗ ಮಾಡಿದ್ದಾನೆ. ಇನ್ನು ಮುಂದೆ ಆ ಒಂಭತ್ತು ಕಷಾಯಗಳನ್ನು ಹೇಳುತ್ತೇವೆ, ಇವುಗಳ ಉಲ್ಲೇಖವನ್ನು ಮೇಲೆ ಮಾಡಲಾಗಿದೆ. ಇವು-ಸ್ತ್ರೀವೇದ, ಪುಂವೇದ ಹಾಗೂ ನಪುಂಸಕ ವೇದರೂಪ ವಾದ ಮೂರೂ ರಾಗ, ಭಯ, ರತಿ, ಅರತಿ, ಜುಗುಪ್ಸಾ, ಹಾಸ್ಯ ಮತ್ತು ಶೋಕ ಇವುಗಳನ್ನೂ ಸಹ ಜಿವಭಗವಾನನು ಹಾರಿಸಿಬಿಟ್ಟದ್ದಾನೆ, ಗೆದ್ದಿದ್ದಾನೆ ಮತ್ತು ಅಂತ ರಂಗದಿಂದ ಹೊರಕ್ಕೆಸೆದುಬಿಟ್ಟದ್ದಾನೆ. ಈ ಪ್ರಕಾರವಾಗಿ ಮೋಹನೀಯ ಕರ್ಮವು ಸಮಗ್ರರೂಪದಿಂದ ಈ $(4 \times 4+9=25)$ ಇಪ್ಪತ್ತೈದು ಭೇದಗಳಾದವು.

ಜೀವವು ಕೆಲವೊಮ್ಮೆ ದೇವತೆಯ ಆಯುವನ್ನು ಬಂಧಿಸುತ್ತದೆ. ಕೆಲವೊಮ್ಮೆ ನರಕವನ್ನು, ಯಾವಾಗಲಾದರೂ ಮನುಷ್ಯನನ್ನು ಮತ್ತು ಕೆಲವೊಮ್ಮೆ ತಿರ್ಯಂಚ ಯೋನಿಯನ್ನು, ಈ ಪ್ರಕಾರವಾಗಿ ಆಯುಕರ್ಮದ ನಾಲ್ಕು ಭೇದಗಳಿವೆ.

ನಾಮಕರ್ಮದಲ್ಲಿ ನಲ್ವತ್ತೆರಡು ಭೇದಗಳಿವೆ. ಇವುಗಳ ಹೆಸರು ಈ ರೀತಿ ಇವೆ. (1) ಗತಿ (2) ಜಾತಿ (3) ಶರೀರ (4) ನಿಬಂಧನ (5) ಶರೀರ-ಸಂಘಾತ (6) ಶರೀರ-ಸಂಸ್ಥಾನ (7) ಶರೀರ-ಅಂಗೋಪಾಂಗ (8) ಶರೀರ-ಸಂಹನನ (9) ವರ್ಣ (10) ಗಂಧ (11) ರಸ (12) ಸ್ಪರ್ಶ (13) ಅನುಪೂರ್ವಿ (14) ಅನುರುಲಘು (15) ಉಪಘಾತ (16) ಪರಘಾತ (17) ಉಚ್ಛ್ವಾಸ (18) ಆತಾಪ (19) ಉಧ್ಯೋತ (20) ವಿಹಾಯೋಗತಿ (21) ತ್ರಸಕಾಯ (22) ಸ್ಥಾವರಕಾಯ (23) ಬಾದರಕಾಯ (24) ಸೂಕ್ಷ್ಮಕಾಯ (25) ಪರ್ಯಾಪ್ತಿ (26) ಅಪರ್ಯಾಪ್ತಿ (27) ಪ್ರತ್ಯೇಕ-ಶರೀರ (28) ಸಾಧಾರಣ ಶರೀರ (29) ಸ್ಥಿರ (30) ಅಸ್ಥಿರ (31) ಶುಭ (32) ಅಶುಭ (33) ಸುಭಗ (34) ದುರ್ಭಗ (35) ಸುಸ್ವರ (36) ದುಸ್ವರ (37) ಆದೇಯ (38) ಅನಾದೇಯ (39) ಯಶಸ್ ಕೀರ್ತಿ (40) ಅಯಶಸ್‌ಕೀರ್ತಿ (41) ನಿರ್ವಾಣ ಮತ್ತು (42) ತೀರ್ಥಂಕರತ್ವ. ಇವು ನಲ್ವತ್ತೆರಡು ಪ್ರಕಾರಗಳ ನಾಮ ಕರ್ಮಗಳು. ಇವುಗಳ ಮೂಲಕ ಶರೀರದಲ್ಲಿ ಅವುಗಳ ನಾಮಾನುಸಾರವಾಗಿ ವಿವಿಧ ಪ್ರಕಾರಗಳ ಗುಣಧರ್ಮಗಳು ಉತ್ಪನ್ನವಾಗುತ್ತವೆ. ಇವುಗಳಲ್ಲಿ ಬಹುತೇಕಗಳಲ್ಲಿ ಸ್ವಲ್ಪ ಉಪಭೇದಗಳೂ, ಇವೆ-ಹೇಗೆಂದರೆ ಗತಿನಾಮ ಕರ್ಮ, ನರಕ, ತಿರ್ಯಕ್,

ಮನುಷ್ಯ ಮತ್ತು ದೇವ, ಈ ಗತಿಗಳಾನುಸಾರ ನಾಲ್ಕು ಪ್ರಕಾರಗಳಿವೆ. ಏಕೇಂದ್ರಿಯ ಮುಂತಾದ ಐದು ಇಂದ್ರಿಯಗಳವರೆಗೆ ಭೇಧಾನುಸಾರ ಜಾತಿನಾಮ ಕರ್ಮಗಳಲ್ಲಿ ಐದು ಭೇದಗಳಿವೆ.

೭

## ನಾಮ, ಆಯು, ಗೋತ್ರ ಮತ್ತು ಅಂತರಾಯ ಕರ್ಮಗಳ ಭೇದ

ಔದಾರಿಕ, ವೈಕ್ರಿಯಿಯ, ಆಹಾರಕ, ತೈಜಸ, ಮತ್ತು ಕಾರ್ಮಣಗಳ ಭೇದ ದಿಂದ ಶರೀರ ನಾಮಕರ್ಮವು ಐದು ಪ್ರಕಾರದ್ದಾಗಿದೆ. ಈ ಐದೂ ಶರೀರಗಳ ಭಿನ್ನ-ಭಿನ್ನ ಬಂಧನವಿರುತ್ತವೆ. ಇವು ಶರೀರ-ಬಂಧನ ನಾಮಕರ್ಮದಿಂದ ಉತ್ಪನ್ನವಾದ ವಾಗಿರುತ್ತವೆ. ಅಗವುಗಳದೇ ಅನುಸಾರ ಆ ಶರೀರಗಳ ಐದು ಸಂಘಾತವಾಗುತ್ತವೆ. ಶರೀರ–ಸಂಸ್ಥಾನದಲ್ಲಿ ಆರು ಪ್ರಕಾರಗಳಿವೆ–ಸಮ–ಚತುರಸ್ರ, ನ್ಯಗ್ರೋಧ ಪರಿಮಂಡಲ ಸ್ವಾತಿ, ಕುಬ್ಜ, ವಾಮನ ಮತ್ತು ಹುಂಡ, ಶರೀರಾಂಗೋಪಾಂಗದಲ್ಲಿ ಔದಾರಿಕ, ವೈಕ್ರಿಯಿಕ ಮತ್ತು ಆಹಾರಕ ಈ ಮೂರು ಭೇದಗಳಿವೆ. ಶರೀರ ಸಂಹನನದಲ್ಲಿ ಆರು ಭೇದಗಳಿವೆ–ವಜ್ರ–ವೃಷಭ-ನಾರಾಚ, ನಾರಾಚ–ನಾರಾಚ, ನಾರಾಚ, ಅರ್ಧ ನಾರಾಚ ಕಬ್ಬಿಣದ ಬಾಣ ಕೀಲಿತ ಮತ್ತು ಅಸಂಪ್ರಾಪ್ತಾಸೃಪಾಟಿಕಾ, ವರ್ಣ ಗಳು ಐದಿವೆ–ಕೃಷ್ಣ, ನೀಲ, ರಕ್ತ, ಹರಿಕ ಮತ್ತು ಶುಕ್ಲ. ಸುಗಂಧ ಮತ್ತು ದುರ್ಗಂಧ ಗಳ ಭೇದದಿಂದ ಗಂಧ ನಾಮಕರ್ಮವು ಎರಡು ಪ್ರಕಾರಗಳದ್ದಾಗಿವೆ. ಐದು ರಸ ಗಳಿವೆ ತಿಕ್ತ, ಕಟು, ಕಷಾಯ, ಅಮ್ಲ ಮತ್ತು ಮಧುರ ಸ್ಪರ್ಶನಾಮಕರ್ಮದಲ್ಲಿ ಎಂಟು ಭೇದಗಳಿವೆ–ಕಠೋರ, ಮೃದು, ಗುರು, ಲಘು, ಸ್ನಿಗ್ಧ ರೂಕ್ಷ, ಶೀತ ಮತ್ತು ಉಷ್ಣ. ನರಕ ಮುಂತಾದ ನಾಲ್ಕೂ ಗತಿಗಳ ಅನುಸಾರ ಆನುಪೂರ್ದೀ ನಾಮಕರ್ಮವು ನಾಲ್ಕು ಪ್ರಕಾರದ್ದಾಗಿದೆ. ವಿಹಾಯೋಗತಿಯಲ್ಲಿ ಎರಡು ಭೇಧಗಳಿವೆ–ಪ್ರಶಸ್ತ ಮತ್ತು ಅಪ್ರ ಶಸ್ತ. ಈ ಎಲ್ಲಾ ಉಪಭೇದಗಳನ್ನು ಸೇರಿಸಿ ನಾಮಕರ್ಮಗಳ (93) ಭೇದಗಳಾಗು ತ್ತವೆ. ಇವುಗಳ ಅನುಸಾರ ಸಮಸ್ತ ಸಂಸಾರಿ ಜೀವಗಳ ಶರೀರದಲ್ಲಿ ಕಾಣಲ್ಪಡುವ ನಾನಾ ಭೇದಗಳ ನಿರ್ಮಾಣವಾಗುತ್ತದೆ.

ಗೋತ್ರಕರ್ಮ ಎರಡು ಪ್ರಕಾರದ್ದಾಗಿದೆ. ಸಮಲ ಅರ್ಥಾತ್ ಪಾಪಪ್ರವೃತ್ತಿ ಮಾಡಿಸುವುದು ಮತ್ತು ಅಮಲ ಅರ್ಥಾತ್ ಶುದ್ಧ–ಪ್ರವೃತ್ತಿ ಮಾಡಿಸುವುದು ಈ ಎರಡನ್ನೂ ಸಿದ್ಧಾತ್ಮಗಳು ದೂರ ಮಾಡುತ್ತವೆ. ಅಂತರಾಯ ಕರ್ಮದಲ್ಲಿ ಐದು ಬೇದಗಳಿವೆ–ದಾನಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ ವೀರ್ಯಾಂತರಾಯ ಮತ್ತು ಲಾಭಾಂತರಾಯ. ಇವು ಆಯಾಯ ಗುಣಗಳ ಪ್ರಾಪ್ತಿಯಲ್ಲಿ ಭಾಧಕವಾಗಿರುತ್ತವೆ. ಉಕ್ತ ಎಂಟೂ ಕರ್ಮಗಳ ಉತ್ತರ ಪ್ರಕೃತಿ ಗಳನ್ನು ಸೇರಿಸುವುದರಿಂದ ಆ ಎಲ್ಲಾ ಒಂದುನೂರ ನಲ್ವತ್ತೆಂಟಾ (148) ಗುತ್ತವೆ.

ಈ ಎಲ್ಲವನ್ನು ವಿನಾಶಮಾಡಿ ಜೀವವು ಶುದ್ಧವಾಗುತ್ತದೆ ಮತ್ತು ನಿರ್ವಾಣವನ್ನು ಪಡೆಯುತ್ತದೆ. ಈ ಕರ್ಮ ಪ್ರಕೃತಿಗಳ ಸಹಿತವಾಗಿ ತನ್ನ ಮಾನವ ಶರೀರವನ್ನು ಬಿಟ್ಟು ಹಾಗೂ ಆತ್ಮದ ಸ್ವಯಂ ಶುದ್ಧ ಸ್ವಭಾವವನ್ನು ಪಡೆದು ಯಾವ ಜೀವಗಳು ದುಃಖ-ರಹಿತ, ಶಾಶ್ವತ-ಸ್ಥಾನ-ಸ್ವರೂಪವಾದ ಪರಮ ನಿರ್ವಾಣವನ್ನು ಪಡೆಯುವವೋ (ಹೊಂದುವವೋ) ಅವು ತಮ್ಮ ಅಂತಿಮ ಮಾನವ ಶರೀರದ ಪ್ರಮಾಣಕ್ಕಿಂತ ಸ್ವಲ್ಪ ಚಿಕ್ಕದಾಗಿರುತ್ತವೆ. ಅವುಗಳಿಗೆ ರೋಗ-ಶೋಕಗಳಿರುವುದಿಲ್ಲ ಹಾಗೂ ಅವು ಯಾವಾಗಲೂ ಮೃತ್ಯುವನ್ನು ಪಡೆಯುವುದಿಲ್ಲ. (ಹೊಂದುವುದಿಲ್ಲ) ಅವು ಯಾವಾಗಲೂ ನಿರ್ಮಲ, ನಿರುಪಮ, ನಿರಹಂಕಾರ, ಜೀವ-ದ್ರವ್ಯದಿಂದ ಸಂಘನ ಮತ್ತು ಜ್ಞಾನ ಶರೀರಿಯಾಗಿರುತ್ತವೆ. ಅವು ಮಧ್ಯ ಲೋಕದಿಂದ ಸ್ವಭಾವತಃ ಊರ್ಧ್ವಗಮನ ಮಾಡುತ್ತವೆ. ಮತ್ತು ಸಮಸ್ತ ಊರ್ಧ್ವಲೋಕದ ಉಲ್ಲಂಘನೆ ಮಾಡಿ ಎಲ್ಲಕ್ಕೂ ಮೇಲೆ ಅಷ್ಟಮ ಪೃಥ್ವಿಯ ಪೃಷ್ಟದ ಮೇಲೆ ನೆಲೆಸುತ್ತವೆ. ಅವುಗಳಿಗೆ ಪುನರ್ಜನ್ಮವಿರುವುದಿಲ್ಲ. ಇಂಥಹ ಈ ಮುಕ್ತ ಜೀವಗಳ ಸ್ವರೂಪವನ್ನು ಜಿನೇಂದ್ರನು ಹೇಳಿದ್ದಾನೆ. ಈ ಮುಕ್ತ ಜೀವಗಳು ತಮ್ಮ ಈ ಮುಕ್ತಾವಸ್ಥೆಯ ದೃಷ್ಟಿಯಿಂದ ಸಾದಿ ಮತ್ತು ಅನಂತವಾಗಿವೆ. ಹಾಗೂ ಅವುಗಳು ಜೀವದ್ರವ್ಯದ ದೃಷ್ಟಿಯಿಂದ ಅನಾದಿ ಮತ್ತು ಅನಂತವಾಗಿವೆ, ಏಕೆಂದರೆ ಅವು ಈಗ ಮತ್ತೆ ಮರಣಿಸುವುದಿಲ್ಲ. ಮತ್ತು ವಿವಿಧ ದುಃಖಗಳಿಂದ ಪೂರ್ಣವಾದ ಸಂಸಾರದ ಬಾಯಲ್ಲಿ ಬೀಳುವುದಿಲ್ಲ.

೮

## ಸಿದ್ಧ ಜೀವಗಳ ಸ್ವರೂಪ

ಆ ಸಿದ್ಧಜೀವಗಳು ಬಾಲಕರಾಗಿಯಾಗಲೀ, ಯಾ ವೃದ್ಧ, ಮೂರ್ಖ ಮತ್ತು ಚತುರರಾಗಿಯಾಗಲೀ ಇರುವುದಿಲ್ಲ. ಅವು ಯಾರಿಗೂ ಶಾಪ ಮತ್ತು ತಾಪ ಕೊಡುವುದಿಲ್ಲ. ಗರ್ವವಿಟ್ಟಿರುವುದಿಲ್ಲ. ಮತ್ತು ಪಾಪ ಮಾಡುವುದಿಲ್ಲ. ಅವು ಜ್ಞಾನಶರೀರಿಗಳಾಗಿರುತ್ತವೆ. ಆದರೆ ಅವುಗಳಿಗೆ ಬುದ್ಧಿ ಅರ್ಥಾತ್ ಮಸ್ತಿಷ್ಕ ಮತ್ತು ಇಂದ್ರಿಯ-ಜನ್ಯ ಬೋಧವಿರುವುದಿಲ್ಲ. ಅವುಗಳಲ್ಲಿ ಯಾವ ತರಹವಾದ ಸ್ನೇಹವಾಗಲೀ, ದೇಹವಾಗಲೀ ಇಲ್ಲ. ಅವು ಕ್ರೋಧರಹಿತ, ಲೋಭರಹಿತ, ಮಾನರಹಿತ ಮತ್ತು ಮೋಹರಹಿತವಾಗಿರುತ್ತವೆ. ಅವುಗಳಿಗೆ ಯಾವ ಸ್ತ್ರೀ ಪುರುಷ ಮುಂತಾದ ಲಿಂಗಭೇದವಿಲ್ಲ ಮತ್ತು ಯಾವ ತರಹವಾದ ಮನ, ವಚನ, ಕಾಯ ರೂಪ ಯೋಗಗಳ ಭೇದಗಳಿಲ್ಲ, ಯಾವ ತರಹದ ರಾಗ, ಭೋಗ, ರಮ್ಯ ಕಾಮಗಳು ಅವುಗಳಿಗಿಲ್ಲ. ಅವು ಇಂದ್ರಿಯ ಸುಖದಿಂದ ಮತ್ತು ಜನನ-ಮರಣದಿಂದ ರಹಿತವಾಗಿವೆ. ಅವು ನಿರ್ಬಾಧವಾಗಿವೆ ಮತ್ತು ನಿರ್ಧಾಮವಾಗಿವೆ. ಅವುಗಳಿಗೆ ದ್ವೇಷವಾಗಲೀ ಲೇಶ್ಯಾವಾಗಲೀ ಇಲ್ಲ. ಆ ಮಹಾನುಭಾವ ಜೀವಗಳು ಗಂಧಸ್ಪರ್ಶ, ರಸ, ಶಬ್ದ ಮತ್ತು ರೂಪ ಈ ಇಂದ್ರಿಯ

ವಿಷಯಗಳಿಂದ ರಹಿತವಾಗಿವೆ. ಅವು ಅವ್ಯಕ್ತವಾಗಿವೆ. ಚಿನ್ಮಾತ್ರ, ನಿಶ್ಚಿಂತ ಮತ್ತು ನಿವೃತ್ತವಾಗಿವೆ. ಅವು ಕೇವಲ ಕ್ಷುಧೆಯ ವಶೀಭೂತವಾಗಿಯಾಗಲೀ ಮತ್ತು ತೃಷೆ ಯಿಂದ ಆತುರವಾಗಿಯಾಗಲೀ, ರೋಗಗಳಿಂದ ಕ್ಷೀಣವಾಗುತ್ತಲಾಗಲೀ ಮತ್ತು ರತಿ ಯಿಂದ ಪೀಡಿತವಾಗಿ ಆಗಲೀ, ಆಗುವುದಿಲ್ಲ. ಅವು ಆಹಾರ-ಭೋಜನ ಮತ್ತು ಔಷಧಿಯ ಉಪಯೋಗವನ್ನಾಗಲೀ ಮಾಡುವುದಿಲ್ಲ. ಅವು ಮಲದಿಂದ ಲಿಪ್ತವಾಗು ವುದಿಲ್ಲ ಮತ್ತು ಅದನ್ನು ಜಲದಿಂದ ತೊಳೆಯುವ ಆವಶ್ಯಕತೆಯೇ ಇರುವುದಿಲ್ಲ. ಅವು ನಿದ್ರೆ ಮಾಡುವುದಿಲ್ಲ. ನೇತ್ರಗಳಿಲ್ಲದಿದ್ದರೂ ಕೂಡ ಎಲ್ಲವನ್ನೂ ನೋಡುತ್ತವೆ. ಅವುಗಳಿಗೆ ಮನವಿರುವುದಿಲ್ಲ. ಆದರೂ ಕೂಡ ಅವು ನಿರಂತರವಾಗಿ ಸಚರಾಚರ ಜಗತ್ತನ್ನು ಅರಿಯುತ್ತವೆ. ಸಿದ್ಧರಲ್ಲಿ ಯಾವ ಸುಖವಿದೆಯೋ, ಅದನ್ನು ಈ ಚರ್ಮ ಚಕ್ಷು, ಯಾರಾದರೂ ಮಾನವ, ಸುರದೇವ ಅಥವಾ ವಿದ್ಯಾಧರರು ಹೇಗೆ ವರ್ಣನೆ ಮಾಡಬಲ್ಲರು ? ಪಂಚೇಂದ್ರಿಯಗಳಿಂದ ಮುಕ್ತರಾಗಿ ಯಾವ ಸುಖವನ್ನು ಶುದ್ಧ ಪರಮಾತ್ಮ ಪದವನ್ನು ಪಡೆದ ಸಿದ್ಧರು ಹೊಂದುವರೋ, ಅದು ಈ ಭುವನತಳದ ಬೇರೆ ಯಾವ ಜೀವಕ್ಕೂ ಸಿಗುವುದಿಲ್ಲ.

೯

## ಅಜೀವ ತತ್ವಗಳ ಸ್ವರೂಪ

ಈ ಪ್ರಕಾರವಾಗಿ ಸಂಸಾರಿ ಮತ್ತು ಸಿದ್ಧ ಈ ಎರಡೂ ಪ್ರಕಾರಗಳ ಜೀವಗಳ ವ್ಯಾಖ್ಯಾನ ಮಾಡಲಾಗಿದೆ. ಈಗ ನಾನು ಆ ಅಜೀವ ತತ್ವದ ವಿಷಯದಲ್ಲಿ ಏನು ಸ್ವಲ್ಪ ತಿಳಿದಿರುವೆನೋ ಅದರ ವರ್ಣನೆ ಮಾಡುತ್ತೇನೆ. ಧರ್ಮ ಮತ್ತು ಅಧರ್ಮ ಈ ಎರಡೂ ತತ್ವ, ಹಾಗೂ ಆಕಾಶ ಮತ್ತು ಕಾಲ ಈ ಪ್ರಕಾರವಾಗಿ ಈ ನಾಲ್ಕೂ ಅಜೀವ ತತ್ವಗಳು ರೂಪರಹಿತ ಅರ್ಥಾತ್ ಅಮೂರ್ತಿಕವೆಂದು ತಿಳಿಯಲಾಗಿದೆ. ಇವುಗಳ ಸ್ವರೂಪವನ್ನು ವಿಶೇಷ ಜ್ಞಾನಿಗಳು ಮತ್ತು ವಿದ್ವಾಂಸರು ಈ ಪ್ರಕಾರವಾಗಿ ತಿಳಿದಿದ್ದಾರೆ. ಧರ್ಮದ್ರವ್ಯದ ಸ್ವಭಾವವು ಅನ್ಯ ಜೀವ ಮುಂತಾದ ದ್ರವ್ಯಗಳ ಕಾರ್ಯದಲ್ಲಿ ಸಹಾಯಕವಾಗಿರುತ್ತದೆ ಮತ್ತು ಅಧರ್ಮ ದ್ರವ್ಯದ ಚಲಿಸುವ ಸ್ವಭಾ ವವೂ ಚಲಿಸುತ್ತಿರುವ ದ್ರವ್ಯಗಳನ್ನು ನಿಲ್ಲಿಸುವುದರಲ್ಲಿ ಸಹಾಯಕವಾಗುವುದು. ಆಕಾಶದ ಕಾರ್ಯವು ಮಿಕ್ಕ ಎಲ್ಲಾ ದ್ರವ್ಯಗಳಿಗೂ ಅವಕಾಶ ಪ್ರಧಾನ ಮಾಡುವು ದಾಗಿದೆ. ಮತ್ತು ಕಾಲದ ಲಕ್ಷಣವೂ ವರ್ತನೆ ಅರ್ಥಾತ್ ಭೂತ, ಭವಿಷ್ಯತ್ ಮತ್ತು ವರ್ತಮಾತ ಸಮಯಗಳ ವಿಭಜನೆ ಮಾಡುವುದಾಗಿದೆ. ಈ ಪ್ರಕಾರವಾಗಿ ಕಾಲವು ಅನಾದಿ ಮತ್ತು ಅನಂತ ಸಮಯರೂಪವಾಗಿದೆ. ಅದರ ಯಾವ ಯುಗ, ವರ್ಷ, ಮಾಸ ಮುಂತಾದ ರೂಪವು ವ್ಯಾವಹಾರಿಕ ಸ್ವರೂಪವಾಗಿದೆಯೋ ಅದರ ಪ್ರಚಲನೆಯು ನರಲೋಕ ಮಾತ್ರದಲ್ಲಿ ಇದೆ. ಧರ್ಮ ಮತ್ತು ಅಧರ್ಮದ್ವವ್ಯಾಪ್ತಿ

ಸಮಸ್ತ ತ್ರಿಲೋಕದಲ್ಲಿ ಮಾತ್ರ ಇದೆ. ಆಕಾಶವು ಅನಂತವಾಗಿದೆ ಮತ್ತು ಶಬ್ದ ಗುಣಾತ್ಮಕವಾಗಿದೆ. ಅದರ ಎರಡು ವಿಭಜನೆಗಳನ್ನು ಪಡೆಯಲಾಗುತ್ತದೆ, ಒಂದು ಲೋಕಾಕಾಶ ಎರಡನೆಯದು ಅಲೋಕಾಕಾಶ. ಲೋಕಾಕಾಶದಲ್ಲಿ ಎಲ್ಲಾ ದ್ರವ್ಯಗಳ ವಾಸ ಹಾಗೂ ಗಮನಾಗಮನವಿದೆ. ಇದು ಎಲ್ಲರ ಅನುಭವದ ಮಾತಾಗಿದೆ. ಆದರೆ ಇದರ ಹೊರತು ಯಾವ ಅನ್ಯ ದ್ರವ್ಯಗಳಿಂದ ರಹಿತವಾದ ಅಲೋಕಾಕಾಶ ವಿದೆಯೋ, ಅದರ ವರ್ಣನೆ ಕೇವಲ ಯೋಗಿಗಳ ಮೂಲಕ ಮಾಡಲಾಗಿದೆ.

ಪುದ್‌ಗಲ ದ್ರವ್ಯ ಐದೂ ಗುಣಗಳಿಂದ ಯುಕ್ತವಾಗಿದೆ—ಶಬ್ದ, ಗಂಧ, ರೂಪ, ಸ್ಪರ್ಶ ಮತ್ತು ರಸ. ರೂಪದ ಅಪೇಕ್ಷೆಯಿಂದ ಪುದ್‌ಗಲ ದ್ರವ್ಯವು ಕೃಷ್ಣಾದಿ ನಾನಾ ವರ್ಣಗಳಿಂದ ಯುಕ್ತವಾಗಿದೆ. ಪ್ರಮಾಣದ ಅಪೇಕ್ಷೆಯಲ್ಲಿ ಅದು ಸ್ಕಂಧ, ದೇಶ, ಪ್ರದೇಶ, ಅರ್ಧಪ್ರದೇಶ, ಅರ್ಧಾರ್ಧ ಪ್ರದೇಶ ಮುಂತಾದ ರೂಪದಿಂದ ವಿಭಾಜ್ಯವಾಗುತ್ತಾ ಪರಮಾಣುವಿನ ತನಕ ಮುಟ್ಟುತ್ತದೆ. ಅಲ್ಲಿ ಪುನಃ ಅದರ ವಿಭಜನೆಯಾಗಲಾಗುವುದಿಲ್ಲ. ಈ ಪ್ರಕಾರ ಈ ಪುದ್‌ಗಲ ಸೂಕ್ಷ್ಮವೂ, ಸ್ಥೂಲವೂ, ಸ್ಥೂಲ-ಸೂಕ್ಷ್ಮವೂ ಮತ್ತು ಸ್ಥೂಲ-ಸ್ಥೂಲವೂ ಆಗಿದೆ. ಈ ಪ್ರಕಾರವಾಗಿ ಪುದ್‌ಗಲ ದ್ರವ್ಯವು ಚತುರ್ಭೇದ ರೂಪವೆಂದು ತಿಳಿಯಲ್ಪಡುತ್ತದೆ.

## ೧೦

## ಪುದ್‌ಗಲ ದ್ರವ್ಯದ ಗುಣ ಉಪದೇಶವನ್ನು ಕೇಳಿ ಅನೇಕ ನರೇಶರು ಪ್ರವ್ರಜ್ಯರಾಗುವಿಕೆ

ಪುದ್‌ಗಲ ದ್ರವ್ಯವು ಗಂಧ, ವರ್ಣ, ರಸ, ಸ್ಪರ್ಶ ಮತ್ತು ಶಬ್ದವೆಂಬ ಪಂಚ ಗುಣಾತ್ಮಕವಾಗಿದೆ. ಅದನ್ನು ಸೂಕ್ಷ್ಮ, ಸ್ಥೂಲ, ಸ್ಥೂಲಸೂಕ್ಷ್ಮ ಮತ್ತು ಸ್ಥೂಲ ಸ್ಥೂಲ ಈ ನಾಲ್ಕು ಪ್ರಕಾರಗಳಲ್ಲಿ ಪಡೆಯಲಾಗುತ್ತದೆ. ಪ್ರಕಾಶ ಮತ್ತು ನೆರಳು ಇವು ಪುದ್‌ಗಲ ದ್ರವ್ಯದ ಸ್ಥೂಲಸೂಕ್ಷ್ಮದ ಉದಾಹರಣೆ. ಜಲವು ಸ್ಥೂಲದ ಉದಾಹರಣೆ. ಈ ಧರಣೀಮಂಡಲ ಹಾಗೂ ಮಣಿಗಳ ಸಮಾನವಾದ ಸ್ವರ್ಗ—ವಿಮಾನಪಟಲವು ಸ್ಥೂಲಸ್ಥೂಲದ ಉದಾಹರಣೆ. ಸೂಕ್ಷ್ಮ ಪುದ್‌ಗಲವನ್ನು ತಮ್ಮ-ತಮ್ಮ ಹೆಸರುಳ್ಳ ನಾನಾ ಕರ್ಮಗಳ ರೂಪಗಳಲ್ಲಿ ಪಡೆಯಬಹುದು. ಹಾಗೂ ಮನ ಮತ್ತು ಭಾಷಾರೂಪ ವರ್ಗಣೆಗಳೂ ಸಹ ಅದರದೇ ಪರಿಣಾಮ. ಈ ರೀತಿ ಯಾಗಿ ದಯಾಪೂರ್ವಕವಾಗಿ ಭಗವಾನನು ಹೇಳಿದ್ದಾನೆ. ಈ ಪುದ್‌ಗಲ ದ್ರವ್ಯವು ಅನೇಕ ವರ್ಣಗಳು, ಅನೇಕ ರಸಗಳು ಮುಂತಾದ ರೂಪ ಪರಿಣಾಮ ಮಾಡುತ್ತವೆ ಮತ್ತು ಅದರ ಸಂಯೋಗ ಅರ್ಥಾತ್ ಜೋಡಣೆ ಮತ್ತು ವಿಯೋಗ ಅರ್ಥಾತ್ ವಿಭಜನೆಯೂ ಸಹ ಆಗುತ್ತದೆ.

ಈ ಪ್ರಕಾರವಾಗಿ ಯಾವ ನಾನಾವಿಧದ ಪುದ್‌ಗಲಗಳ ವರ್ಣನೆ ಮಾಡಲಾಗಿದೆಯೋ, ಆ ಪುದ್‌ಗಲಶಬ್ದದ ಈ ನಿರ್ಯುಕ್ತಿ ಅರ್ಥಾತ್ ವ್ಯುತ್ಪತ್ತಿ ಮತ್ತು ಶಬ್ದಸಾಧನೆಯ ಅನುರೂಪವಾಗಿದೆ. ಯಾವ ದ್ರವ್ಯದ ಸ್ವಭಾವವು ಪೂರಣ ಮತ್ತು ಗಲನ ರೂಪವೋ ಅದು ಪುದ್ಗಲವು.

ಯಾವಾಗ ಆದಿದೇವನಾದ ಭಗವಾನ್ ವೃಷಭದೇವ ತೀರ್ಥಂಕರನು ಧರ್ಮದ ಈ ವ್ಯಾಖ್ಯಾನವನ್ನು ಮಾಡಿದನೋ ಆಗ ಸದ್ಧರ್ಮದಿಂದ ಆನಂದಿತನಾಗಿ ಹಾಗೂ ಶುಭ ಭಾವನೆಗಳಿಂದ ಪ್ರೇರಿತನಾಗಿ ಪುರಿಮತಾಲನಗರದ ಸ್ವಾಮಿ ವೃಷಭಸೇನನು ಪ್ರವ್ರಜಿತನಾದನು. ಸೋಮಪ್ರಭ ಮತ್ತು ಶ್ರೇಯಾಂಸ ನರೇಶ್ವರರೂ ಕೂಡ ತಮ್ಮ ಮಾನರೂಪಿ ಸ್ವರದ ವಿನಾಶ ಮಾಡಿ ಪ್ರವ್ರಜ್ಯ ಗ್ರಹಣ ಮಾಡಿದರು. ಈ ಪ್ರಕಾರವಾಗಿ ತಮ್ಮ ವಿಷಾದವನ್ನು ಬಿಟ್ಟು 84 ರಾಜರು ವೃಷಭ ತೀರ್ಥಂಕರರ ಗಣಧರರಾದರು.

ಇತಿ ತೀರ್ಥಂಕರ ಧರ್ಮೋಪದೇಶ ವಿಷಯಕ ಹನ್ನೆರಡನೆಯ ಸಂಧಿ ಸಮಾಪ್ತ.

ಇತಿ ವೀರ-ಜಿನೇಂದ್ರ-ಚರಿತ್ರ ಸಮಾಪ್ತಂ.

# ವೀರ ಜಿನಸ್ತವ

೧. ಅಲಂಘ್ಯಂ ತ್ರಿಜಗತ್ಸಾರಂ ಯಸ್ಯಾನಂತ ಚತುಷ್ಟಯಂ ।
ನಮಸ್ತಸ್ಮೈ ಜಿನೇಂದ್ರಾಯ ಮಹಾವೀರಾಯ ತಾಯಿನೇ ॥

— ಮಹಾವೀರಾಚಾರ್ಯರು

ಅಲಂಘ್ಯವೂ, ಮೂರು ಲೋಕಗಳಲ್ಲಿ ಸಾರಭೂತವಾದುವೂ ಆದ ಅನಂತ ಜ್ಞಾನ, ಅನಂತ ದರ್ಶನ, ಅನಂತ ಸುಖ ಮತ್ತು ಅನಂತ ವೀರ್ಯರೂಪವಾದ ಅನಂತ ಚತುಷ್ಟಯದ ಜ್ಞಾನದಿಂದ ಮೂರು ಲೋಕಗಳಲ್ಲಿ ವ್ಯಾಪ್ತನಾದ ಆ ಮಹಾವೀರ ಜಿನೇಂದ್ರನಿಗೆ ನಮಸ್ಕಾರ

೨. ಆಯತ ದಿವ್ಯ ಶರೀರಂ ಶಿವಸೌಖ್ಯಕರಂ ಸುದೃಗ್ಭಿರಾಶಾಸ್ಯಮ್ ।
ರತಿರಾಗಹೀನ ಮಿಾಡೇಽಪೂರ್ವಂ ಶ್ರೀ ವರ್ಧಮಾನ ಕಂದರ್ಪಂ ॥

— ಹರಿಶ್ಚಂದ್ರ ಕವಿ

ದೀರ್ಘವೂ ದಿವ್ಯವೂ ಆದ ಶರೀರವುಳ್ಳ, ಮೋಕ್ಷಸುಖ ನೀಡುವ, ಸಮ್ಯಕ್ ದೃಷ್ಟಿಯಿಂದ ಅಪೇಕ್ಷ್ಯನಾದ, ರತಿರಾಗರಹಿತನಾದ ಅಪೂರ್ವ ಶ್ರೀ ವರ್ಧಮಾನನೆಂಬ ಮನ್ಮಥನನ್ನು ಸ್ತುತಿಸುತ್ತೇನೆ.

೩. ಏಸ ಸುರಾಸುರ ಮಣುಸಿಂದ ವಂದಿದಂ ಧೋದ ಘಾಇ ಕಮ್ಮಮಲಂ ।
ಪಣಮಾಮಿ ವಡ್ಢಮಾಣಂ ತಿತ್ಥಂ ಧಮ್ಮಸ್ಸ ಕತ್ತಾರಂ ॥

— ಕುಂದ ಕುಂದಾಚಾರ್ಯರು

ಸುರೇಂದ್ರ, ಅಸುರೇಂದ್ರ, ಮಾನವೇಂದ್ರರುಗಳು ಯಾರಿಗೆ ವಂದಿಸುತ್ತಾರೋ, ಮತ್ತು ಯಾರು ಘಾತಿ ಕರ್ಮವೆಂಬ ಮಲವನ್ನು ತೊಳೆದುಹಾಕಿರುವರೋ, ಯಾರು ತೀರ್ಥರೂಪರೋ ಯಾರು ಧರ್ಮದ ಕರ್ತೃಗಳಾಗಿರುವರೋ ಅಂತಹ ವರ್ಧಮಾನರಿಗೆ ನಾನು ಪ್ರಣಾಮ ಮಾಡುತ್ತೇನೆ.

೪. ಕಾಊಣ ಣಮುಕ್ಕಾರಂ ಜಿಣವರ ವಸಹಸ್ಸ ವಡ್ಢಮಾಣಸ್ಸ ।
ದಂಸಣಮಗ್ಗಂ ವೋಚ್ಛಾಮಿ ಜಹಾಕಮ್ಮಂ ಸಮಾಸೇಣ ॥

— ಕುಂದ ಕುಂದಾಚಾರ್ಯರು

ಜಿನಶ್ರೇಷ್ಠರಲ್ಲಿ ಶ್ರೇಷ್ಠನಾದ ವರ್ಧಮಾನಸ್ವಾಮಿಗೆ ಮೊದಲು ನಮಸ್ಕಾರ ಮಾಡಿ, ಅನಂತರ ಸಂಗ್ರಹವಾಗಿ ಯಥಾ ಕರ್ಮ ದರ್ಶನ ಮಾರ್ಗವನ್ನು ನಿರೂಪಿಸುತ್ತೇನೆ.

೫. ಕೀರ್ತ್ಯಾ ಮಹತ್ಯಾ ಭುವಿ ವರ್ಧಮಾನಂ।
ತ್ವಾಂ ವರ್ಧಮಾನಂ ಸ್ತುತಿಗೋಚರತ್ವಂ॥
ನಿನೀಷವಃ ಸ್ಮೋವಯಮದ್ಯ ವೀರಂ।
ವಿಶೀರ್ಣ ದೋಷಾಶಯ ಪಾಶ ಬಂಧನಮ್॥

— ಸಮಂತಾಭದ್ರ ಆಚಾರ್ಯರು

ಲೋಕದಲ್ಲಿ ಪೂರ್ವಾಪರ ವಿರೋಧಗಳಿಲ್ಲದ ದಿವ್ಯ ಉಪದೇಶದಿಂದ ಪರೀಕ್ಷಕ ಜನರ ತತ್ವವಿಷಯಕವಾದ ಸಂಶಯವನ್ನು ನಾಶಮಾಡಿ ವೃದ್ಧಿ ಹೊಂದಿದ, ಜ್ಞಾನಾವರಣ, ದರ್ಶನಾವರಣ, ಮೋಹನೀಯ ಅಂತರಾಯಗಳೆಂಬ ದ್ರವ್ಯಕರ್ಮ ಮತ್ತು ಅದರ ನಿಮಿತ್ತದಿಂದಾಗುವ ಆಶಯ (ವಿಭಾವ, ಭಾವ-ರೂಪದ ಭಾವಕರ್ಮ) ವೆಂಬ ಪಾಶಬಂಧವು ಯಾರಲ್ಲಿ ಚೂರು ಚೂರಾಗಿದೆಯೋ, ಯಾರ ಜ್ಞಾನವು ಲೋಕಾಲೋಕಗಳನ್ನು ವ್ಯಾಪಿಸಿದೆಯೋ ಆ(ಸರ್ವಜ್ಞನೂ ಹಿತೋಪದೇಶಿಯೂ ವೀತರಾಗನೂ ಆದ) ವೀರ ಜಿನನನ್ನು ನಾನು ಇಂದು ಸ್ತುತಿಸುತ್ತೇನೆ.

೬. ಜರಾಜರತ್ಯಾಽಸ್ಮರಣೀಯಮೀಶ್ವರಂ
ಸ್ವಯಂ ವರೀಭೂತಮನಶ್ವರ ಶ್ರಿಯಃ।
ನಿರಾಮಯಂ ವೀತಭಯಂ ಭವಚ್ಛಿದಂ
ನಮಾಮಿ ವೀರಂ ನೃಸುರಾಸುರೈಃ ಸ್ತುತಮ್॥

ಜರೆ (ಮುಪ್ಪು) ಎಂಬ ಮುದುಕಿಯಿಂದ ಅಸ್ಮರಣೀಯನಾದ, ಶಾಶ್ವತ ಲಕ್ಷ್ಮಿಯ ಪತಿಯಾದ, ರೋಗ–ಭಯ–ರಹಿತನಾದ, ಸಂಸಾರವನ್ನು ಕತ್ತರಿಸಿದವನಾದ ಮನುಷ್ಯ-ಸುರರು-ಅಸುರರು ಇವರಿಂದ ಸ್ತುತ್ಯನಾದ ವೀರಜಿನನಿಗೆ ನಮಸ್ಕರಿಸುತ್ತೇನೆ.

೭. ಣಮಿ ಊಣ ಜಿಣಂ ವೀರಂ ಅನಂತವರಣಾಣ ದಂಸಣ ಸಹಾವಂ।
ವೋಚ್ಛಾಮಿ ಣಿಯಮಸಾರಂ ಕೇವಲಿಸುದ ಕೇವಲೀ ಭಣಿದಂ॥

— ಕುಂದ ಕುಂದಾಚಾರ್ಯರು

ಅನಂತವೂ ಶ್ರೇಷ್ಠವೂ ಆದ ಜ್ಞಾನ-ದರ್ಶನಗಳನ್ನೇ ಸ್ವಭಾವವಾಗುಳ್ಳ ವೀರ ಜಿನನಿಗೆ ನಮಸ್ಕರಿಸಿ ಕೇವಲಿ, ಶ್ರುತಕೇವಲಿಗಳಿಂದ ಉಪದೇಶಿತವಾಗಿರುವ ನಿಯಮಸಾರವನ್ನು ನಿರೂಪಿಸುತ್ತೇನೆ.

೮. ಣಿಸ್ಸಂಶಯಕರೋ ವೀರೋ ಮಹಾವೀರೋ ಜಿಣೋತ್ತಮೋ।
ರಾಗದೋಸ ಭಯಾದೀದೋ ಧಮ್ಮತಿತ್ಥಸ್ಸ ಕಾರಓ॥

— ಜಯಧವಲಾ ಟೀಕಾ

ಸಂಶಯಗಳನ್ನು ದೂರಮಾಡುವವರೂ ಮಹಾಪರಾಕ್ರಮಿಗಳೂ ಜಿನರಲ್ಲಿ ಶ್ರೇಷ್ಠರೂ ರಾಗದ್ವೇಷ ಭಯಗಳಿಂದ ಅತೀತರೂ ಧರ್ಮತೀರ್ಥದ ಪ್ರವರ್ತಕರೂ ಆದವರು ಮಹಾವೀರರು.

೯. ಜಯತ್ಯಮರನಾಗೇಂದ್ರ ಪೂಜಿತಾಂಘ್ರಿಯುಗಂ ಪ್ರಭೋಃ।
ವರ್ಧಮಾನ ಜಿನೇಂದ್ರಸ್ಯ ಶಾಸನಂ ಕರ್ಮನಾಶನಮ್ ॥

— ಶಾಸನದಿಂದ

ಅಮರೇಂದ್ರರಿಂದಲೂ ನಾಗೇಂದ್ರರಿಂದಲೂ ಪೂಜಿತವಾದ ಪಾದಗಳನ್ನು ಹೊಂದಿರುವ ಪ್ರಭುವಾದ ಆ ವರ್ಧಮಾನ ಜಿನೇಂದ್ರನಿಂದ ಪ್ರಣೀತವಾದ ಕರ್ಮ ನಾಶಕ ಶಾಸನವು ಜಯಶೀಲವಾಗಲಿ.

೧೦. ನಮಃ ಶ್ರೀ ವರ್ಧಮಾನಾಯ ನಿರ್ಧೂತ ಕಲಿಲಾತ್ಮನೇ।
ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ ॥

— ಸಮಂತ ಭದ್ರಾಚಾರ್ಯರು

ಕರ್ಮಮಲದ ಸ್ವರೂಪವನ್ನು ನಷ್ಟಗೊಳಿಸಿದ, ಯಾರ ಜ್ಞಾನವು ಅಲೋಕ ಸಹಿತವಾದ ಮೂರೂ ಲೋಕಗಳಿಗೆ ಕನ್ನಡಿಯಂತೆ ಆಚರಿಸುತ್ತಿದೆಯೋ (ಯಾರ ಜ್ಞಾನದಲ್ಲಿ ಲೋಕಾಲೋಕಗಳು ನಿಚ್ಚಳವಾಗಿ ಹೊಳೆಯುತ್ತಿವೆಯೋ) ಅಂತಹ ಅಂತರಂಗ ಬಹಿರಂಗ ಲಕ್ಷ್ಮೀ ಸಂಪನ್ನರಾದ ಶ್ರೀ ವರ್ಧಮಾನರಿಗೆ ನಮಸ್ಕಾರ.

೧೧. ಪಾವಾಪುರ[ವರ]ಸರಸಾಂ ಮಧ್ಯಗತಃ
ಸಿದ್ಧಿವೃದ್ಧಿತಪಸಾಂ ಮಹಸಾಮ್ ।
ವೀರೋನೀರದನಾದೋ ಭೂರಿಗುಣ–
ಶ್ಚಾರುಶೋಭಮಾಸ್ಪದಮಗಮತ್ ॥ [ಸೌಖ್ಯ]

— ಪೂಜ್ಯಪಾದಾಚಾರ್ಯರು

ಪಾವಾಪುರದ ಶ್ರೇಷ್ಠವಾದ ಸರೋವರಗಳ, ಸಿದ್ಧಿವೃದ್ಧಿ ತಪಸ್ಸುಗಳ ತೇಜಸ್ಸು ಗಳ ಮಧ್ಯವನ್ನು ಪಡೆದಂಥ, ಮೇಘದ ಗರ್ಜನೆಯಂತೆ ಗಂಭೀರವಾದ ನಾದ, ದಿವ್ಯ ಧ್ವನಿಯನ್ನು ಪಡೆದ, ಅನಂತಗುಣಧಾರಿಯಾದ ವೀರ ಜಿನೇಂದ್ರನು ಸುಂದರ ಶೋಭೆ ಯಿಂದೊಡಗೂಡಿದ ಮೋಕ್ಷವನ್ನು ಪಡೆದನು.

೧೨. ಶ್ರೀಯೆಂಬನಂತವಿದ್ಯಾ
ಶ್ರೀಯೆಂಬೀಯೆರಡು ಸೌಖ್ಯಹೇತುಗಳದಱಿಂ।
ಶ್ರೀಯುಮನನಂತ ವಿದ್ಯಾ
ಶ್ರೀಯುಮನೆಮಗೀಗೆ ವರ್ಧಮಾನ ಜಿನೇಂದ್ರಂ ॥

— ಅಜ್ಞಾತ ಕವಿ–ಪರಮಾಗಮಸಾರ, ಸು. ೧೪೦೦

೧೩. ಶ್ರೀವರ್ಧಮಾನನಾನತ
ದೇವೇಂದ್ರ ಕಿರೀಟ ಕೋಟಿ ತಾಟಿತ ಚರಣಂ।
ಕೈವಲ್ಯ ಬೋಧಧಾಮಂ
ಕೈವಲ್ಯಾಸ್ಪದಮನೀಗೆ ನಮಗೆ ಜಿನೇಂದ್ರಂ॥

— ಸಿಂಹರಾಜ–ಹರದನೀತಿ

೧೪. ಪ್ರಣಮ್ಯ ಸರ್ವವಿಜ್ಞಾನ ಮಹಾಸ್ಪದಮುರುಶ್ರಿಯಮ್।
ನಿರ್ಧೌತ ಕಲ್ಮಷಂ ವೀರಂ ವಕ್ಷ್ಯೇ ತತ್ತ್ವಾರ್ಥವಾರ್ತಿಕಮ್॥

— ಭಟ್ಟಾಕಲಂಕದೇವ

ಸಮಸ್ತ ವಿಜ್ಞಾನದ ಮಹಾ ಆಶ್ರಯಸ್ಥಾನರೂ, ಅಂತರಂಗ ಬಹಿರಂಗ ಮಹಾ ವಿಭೂತಿ ಯುಕ್ತರೂ, ಕರ್ಮಮಲವನ್ನು ತೊಳೆದುಹಾಕಿದವರೂ ಆದಂತಹ ವೀರ ಜಿನೇಂದ್ರರಿಗೆ ನಮಸ್ಕರಿಸಿ ತತ್ತ್ವಾರ್ಥಸೂತ್ರ ಕೃತಿಯನ್ನು ಕುರಿತು ಭಾಷ್ಯರೂಪವಾದ ವಾರ್ತಿಕವನ್ನು ಹೇಳುತ್ತೇನೆ.

೧೫. ಭೂಯಾದಗಾಧಃ ಸ ವಿಬೋಧವಾರ್ಧಿರ್ವೀರಸ್ಯ ರತ್ನತ್ರಯ ಲಬ್ಧಯೇ ವಃ
ಸ್ಫುರತ್ಪಯೋ ಬುದ್ಬುಧ ಬಿಂದುಮುದ್ರಾಮಿದಂ ಯದಂತಸ್ತ್ರಿ ಜಗತ್ತನೋತಿ॥

—ಹರಿಶ್ಚಂದ್ರ ಕವಿ

ಯಾವ ಜ್ಞಾನದೊಳಗೆ ಮೂರೂ ಲೋಕವು ಹೊಳೆಯುವ ನೀರಿನ ಗುಳ್ಳೆಗಳ ಮುದ್ರೆಯನ್ನು ಧರಿಸುತ್ತದೆಯೋ ಅಂತಹ ಅಗಾಧವಾದ ಜ್ಞಾನರೂಪಿಯಾದ ಮೂರು ರತ್ನಗಳು ಲಭಿಸುವ ಸಮುದ್ರವನ್ನುಳ್ಳ ವೀರಸ್ವಾಮಿಗೆ ನಮಸ್ಕಾರ.

೧೬. ಯೋ ವಿಶ್ವಂ ವೇದವಿದ್ಯಂ ಜನನ
ಜಲನಿಧೇರ್ಭಂಗಿನಃ ಪಾರದೃಶ್ವಾ।
ಪೌರ್ವಾಪರ್ಯಾವಿರುದ್ಧಂ ವಚನಮನುಪಮಂ
ನಿಷ್ಕಲಂಕಂ ಯದೀಯಮ್॥
ತಂ ವಂದೇ ಸಾಧುವಂದ್ಯಂ ಸಕಲ
ಗುಣನಿಧಿಂ ಧ್ವಸ್ತದೋಷ ದ್ವಿಷಂತಂ।
ಬದ್ಧಂ ವಾ ವರ್ಧಮಾನಂ ಶತದಲ
ನಿಲಯಂ ಕೇಶವಂ ವಾ ಶಿವಂ ವಾ॥

— ಅಕಲಂಕ ಸ್ತೋತ್ರ

ಯಾರು ಅರಿಯಲು ತಕ್ಕುದಾದ ವಿಶ್ವವನ್ನು ಅರಿತಿದ್ದಾರೋ, ಅನೇಕ ಅಲೆಗಳಿಂದ ಕೂಡಿದ ಕ್ಷಣಕ್ಷಣವೂ ವಿನಾಶಶೀಲವಾದ ಸಂಸಾರ ಸಮುದ್ರದ ಪಾರವನ್ನು ಕಂಡಿರುವರೋ, ಯಾರ ವಚನವು ಪೂರ್ವಾಪರ ವಿರೋಧ ದೋಷದಿಂದ ರಹಿತವೂ

ಎಣೆಯಿಲ್ಲದ್ದೂ ಆಗಿದೆಯೋ, ಸಾಧುಗಳಿಂದ ವಂದನೀಯರಾಗಿರುವರೋ, ಸಕಲಗುಣ ನಿಧಿಯಾಗಿರುವರೋ, ರಾಗದ್ವೇಷಗಳೆಂಬ ಅಷ್ಟಾದಶ ದೋಷಗಳ ಶತ್ರುಗಳನ್ನು ಧ್ವಂಸಮಾಡಿರುವರೋ ಅಂತಹ ಆ ಪರಮಾತ್ಮರನ್ನು ನಾನು ವಂದಿಸುತ್ತೇನೆ; ಅವರು ಹೆಸರಿನಿಂದ ಬುದ್ಧನಿರಲಿ, ವರ್ಧಮಾನನಿರಲಿ, ಶತದಲನಿಲಯನಾಗಿರಲಿ, ಶಿವನಾಗಿರಲಿ, ಯಾರು ಸರ್ವಜ್ಞನೂ ಹಿತೋಪದೇಶಿಯೂ ವೀತರಾಗನೂ ಆಗಿರುವನೋ ಆ ಶುದ್ಧಾತ್ಮನಾದ ಪರಂಜ್ಯೋತಿಗೆ ಪ್ರಣಾಮಗಳು.

೧೭. ಶ್ರೀಮತೇ ವರ್ಧಮಾನಾಯ ನಮೋ ನಮಿತ ವಿದ್ವಿಷೇ।
ಯಜ್ಞಾನಾಂತರ್ಗತಂ ಭೂತ್ವಾತ್ರೈಲೋಕ್ಯಂ ಗೋಷ್ಪದಾಯತೇ ॥

— ಗೌತಮ ಸ್ವಾಮಿ

ಯಾರು ಕಷಾಯಗಳೆಂಬ ಶತ್ರುಗಳನ್ನು ಬಗ್ಗಿಸಿದ್ದಾರೆಯೋ, ಮೂರೂ ಲೋಕಗಳು ಯಾರ ತಿಳಿವಳಿಕೆಯಲ್ಲಿ ಒಳಗೊಂಡು ಹಸುವಿನ ಹೆಜ್ಜೆಯಂತೆ ಸ್ಪಷ್ಟವಾಗಿ ತೋರುತ್ತದೆಯೋ ಅಂತಹ ಅಂತರಂಗ-ಬಹಿರಂಗ ಲಕ್ಷ್ಮಿಯಿಂದ ಕೂಡಿದ ವರ್ಧಮಾನ ಸ್ವಾಮಿಗೆ ನಮಸ್ಕರಿಸುವೆ.

೧೮. ಸಿದ್ಧಂ ಸಂಪೂರ್ಣ ಭವಾರ್ಥಸಿದ್ಧೇಃ ಕಾರಣಮುತ್ತಮಮ್।
ಪ್ರಶಸ್ತ ದರ್ಶನಜ್ಞಾನ ಚಾರಿತ್ರ ಪ್ರತಿಪಾದನಮ್ ॥
ಸುರೇಂದ್ರ ಮುಕುಟಾಶ್ಲಿಷ್ಟ ಪಾದಪದ್ಮಾಂಶು ಕೇಸರಮ್।
ಪ್ರಣಮಾಮಿ ಮಹಾವೀರಂ ಲೋಕತ್ರಿತಯ ಮಂಗಲಮ್ ॥

— ಸಾಮಾಯಿಕ ಪಾಠ

ಯಾರು ಸ್ವಯಂಸಿದ್ಧ (ಕೃತಕೃತ್ಯ ಸ್ವರೂಪ-ದ್ರವ್ಯಕರ್ಮ ಭಾವಕರ್ಮಗಳ ಅಭಾವದಿಂದ) ಶುದ್ಧಾತ್ಮ ಸ್ವರೂಪವನ್ನು ಪಡೆದಿರುವರೋ, ಎಲ್ಲ ಭವ್ಯ ಪ್ರಾಣಿಗಳ ಅರ್ಥಸಿದ್ಧಿಗೆ (ಮೋಕ್ಷ ಪುರುಷಾರ್ಥ ಸಿದ್ಧಿಗೆ) ಉತ್ತಮ ಕಾರಣರಾದರೊ, ಯಥಾರ್ಥ ದರ್ಶನಜ್ಞಾನ ಚಾರಿತ್ರ ಸ್ವರೂಪ ಮೋಕ್ಷ ಮಾರ್ಗವನ್ನು ಪ್ರತಿಪಾದಿಸುವವರಾಗಿರುವರೋ ಯಾರ ಚರಣ ಕಮಲಗಳ ಕಾಂತಿರೂಪಿ ಕಿರಣಗಳು ದೇವೇಂದ್ರರ ಮುಕುಟಗಳಲ್ಲಿ ಆಶ್ಲಿಷ್ಟ (ಪ್ರತಿಬಿಂಬಿತ) ವಾಗುತ್ತಿವೆಯೋ ಅಂತಹ, ಮೂರು ಲೋಕಗಳಿಗೂ ಮಂಗಲ ಸ್ವರೂಪರಾದ ಮಹಾವೀರಸ್ವಾಮಿಗೆ ನಮಸ್ಕಾರ ಮಾಡುತ್ತೇನೆ.

೧೯. ಶ್ರೀಮನ್ನಾಕಾಧಿನಾಥಾನತ ಮುಕುಟಮಣಿ ದ್ಯೋತಿತಾಂಘ್ರಿದ್ವಯಂ ನಿ
ಷ್ಕಾಮಂ ಶ್ರೀವರ್ಧಮಾನ ಪ್ರವರ ಮುನಿಜನಾನಂದ ಸಂಸ್ತುತ್ಯ ಸಿಂಧು।
ಸ್ತೊಮಾಳಂಕಾರಿತಾಂಭೋ ನಿಧಿ ನಿರುಪಮ ಬೋಧಾಕರಂ ಮೋಕ್ಷಲಕ್ಷ್ಮೀ
ಧಾಮಂ ತ್ರೈಲೋಕ್ಯನಾಥಂ ಕುಡುಗೆಮಗಮೃತಾವಾಸಮಂ ವೀರನಾಥಂ ॥

ಪುರುಪರಮಜಿನಾದಿ ಪರಂ
ಪರೆಯಿಂ ಶ್ರೀ ವರ್ಧಮಾನ ಜಿನಪರ್ಯಂತಂ।
ಬರಮರ್ಹದ್ದೀಕ್ಷಿತರಾ
ದರಚರಣ ಸರೋಜಮೆಮಗೆ ಶರಣಕ್ಕೆಂದುಂ ॥

— ಶಾಂತಿನಾಥ ಕವಿ, ಸುಕುಮಾರ ಚರಿತೆ

೩೦. ನಮಸ್ತುಭ್ಯಂ ಜಿನೇಂದ್ರಾಯ ವರ್ಧಮಾನ ಸ್ವಯಂಭುವೇ।
ಸರ್ವಜ್ಞಾಯ ಮುನೀಂದ್ರಾಯ ಮುಕ್ತಿಮಾರ್ಗೋಪದೇಶಿನೇ ॥
ಶ್ರೀಮತ್ ಸಿದ್ಧಾರ್ಥಪುತ್ರಾಯ ಧರ್ಮಾಮೃತ ಪ್ರವರ್ಷಿಣೇ।
ಸೂನವೇ ಪ್ರಿಯಕಾರಿಣ್ಯಾಃ ಕುಮಾರ ಬ್ರಹ್ಮಚಾರಿಣೇ ॥

ಯದ್ಪಾದ ಮೂಲಮಾಸದ್ಯ ಗೌತಮಶ್ಚ ದ್ವಿಜೋತ್ತಮಃ।
ಮುಕ್ತಿ ಲಕ್ಷ್ಮೀಂ ಪರಾಂ ಲೇಭೇ ನಮೋ ವೀರಾಯ ತಾಯಿನೇ ॥
ಧರ್ಮತೀರ್ಥಂಕರಂ ವಂದೇ ಮಹಾವೀರಂ ಜಿನಾಂತಿಮಮ್।
ಯತ್ತೀರ್ಥಂ ಪ್ರಚಲತ್ಯದ್ಯ ಸರ್ವಜೀವ ಸುಖಪ್ರದಮ್ ॥

ಖ್ಯಾತಂ ಕುಂಡಪುರಂ ಚ ಯಜ್ಜನನಭಂ ಸ್ವಾತೀತು ಸಿಂಹಧ್ವಜಃ।
ಸಾಲೋದ್ರುಃ ಪ್ರಿಯಕಾರಿಣೀ ಚ ಜನನೀ ಪಾವಾಪುರಂ ನಿರ್ವೃತೇಃ ॥
ಉತ್ಸೇಧಃ ಕರಸಪ್ತಕಂ ಕನಕಭಾಸ್ಸಿದ್ಧಾಯಿನೀ ಸೇವಿಕಾ।
ಮಾತಂಗೋಪಿ ಚ ಯಸ್ಸವೀರ ಜಿನಪಃ ಸಿದ್ಧಾರ್ಥಜಃ ಪಾತುವಃ ॥

* * *

೩೧. ಶ್ರೀಮದಮರೇಂದ್ರ ನತಚರಣಯುಗ ನಳಿನನಂ
ತಾಮರಸನೇತ್ರನಂ ಭೂತ್ರಯ ಪವಿತ್ರನಂ
ಸೋಮರವಿಕೋಟಿ ತೇಜೋಧಿಕಾಂಗ ಪ್ರಭಾವಲಯನಂ ಗುಣನಿಲಯನಂ।
ಸಾಮಜಾರಾತಿ ದೃತದಿಷ್ಟರ ನಿಧಿಷ್ಟನಂ
ಶ್ರೀಮಹಾವೀರನಂ ಮೇರುಗಿರಿ ಧೀರನಂ
ಮೂಮೆ ಬಲವಂದು ನಾಂ ಪ್ರೇಮದಿ ಕೈ ಮುಗಿ[ವೆ] ತ್ರಿಸಂಧ್ಯಾಕಾಲದಲಿ ॥

— ಕಲ್ಯಾಣಕೀರ್ತಿ, ಜ್ಞಾನ ಚಂದ್ರಾಭ್ಯುದಯ, ೧೪೩೦
(ಈ ಕಾವ್ಯಕ್ಕೆ ಜ್ಞಾನಚಂದ್ರೋದಯ, ಜ್ಞಾನಚಂದ್ರ ಷಟ್ಪದಿ ಎಂಬ ಹೆಸರುಗಳೂ ಇವೆ.)

೨೨. ಯಃ ಸರ್ವಾಣಿ ಚರಾಚರಾಣಿ ವಿವಿಧ ದ್ರವ್ಯಾಣಿ ತೇಷಾಂ ಗುಣಾನ್ ।
ಪರ್ಯಾಯಾನಪಿ ಭೂತ ಭಾವಿವತಃ ಸರ್ವಾನ್ ಸದಾ ಸರ್ವಥಾ ॥
ಜಾನೀತೇ ಯುಗಪತ್ ಪ್ರತಿಕ್ಷಣಮತಃ ಸರ್ವಜ್ಞ ಇತ್ಯುಚ್ಯತೇ
ಸರ್ವಜ್ಞಾಯ ಜಿನೇಶ್ವರಾಯ ಮಹತೇ ವೀರಾಯ ತಸ್ಮೈ ನಮಃ ॥

— ಭಗವದ್ದೇವನಂದಿ (ದಶಭಕ್ತಿ)

ಯಾವ ಶ್ರೀ ಭಗವಂತರು ಚರಾಚರವಾದ ಜೀವಾದಿ ಸಮಸ್ತ ದ್ರವ್ಯಗಳನ್ನೂ, ಆ ಸಮಸ್ತ ದ್ರವ್ಯಗಳ ಸಮಸ್ತಗುಣಗಳನ್ನೂ ಮತ್ತು ಆ ಸಮಸ್ತ ದ್ರವ್ಯಗಳಲ್ಲಾಗುವ ಭೂತ ಭವಿಷ್ಯತ್ ವರ್ತಮಾನಗಳೆಂಬ ಮೂರೂ ಕಾಲಗಳಲ್ಲಾಗುವ ಎಲ್ಲಾ ಪರ್ಯಾಯಗಳನ್ನೂ ಕೂಡ ಸದಾ ಸರ್ವಥಾ ಪ್ರತಿ ಕ್ಷಣದಲ್ಲಿಯೂ ಒಂದೇ ಸಾರಿಗೆ ತಿಳಿಯುತ್ತಾರೆಯೋ ಮತ್ತು ಆ ಕಾರಣದಿಂದಲೇ ಯಾರನ್ನು ಸರ್ವಜ್ಞರೆಂದು ಹೇಳುವರೋ ಆ ಸರ್ವಜ್ಞರೂ ಜಿನೇಶ್ವರರೂ ಆದ ಮಹಾವೀರ, ಮಹತಿ ಮಹಾವೀರ (ಸನ್ಮತಿ, ವೀರ)ರಾದ ವರ್ಧಮಾನ ಜಿನೇಂದ್ರರಿಗೆ ನಮಸ್ಕಾರವು.

೨೩. ಧರ್ಮತೀರ್ಥಸ್ಯ ಕರ್ತಾರಂ ಅಂಗಪೂರ್ವೋಪದೇಶಿನಮ್ ।
ಶ್ರೀವರ್ಧಮಾನಮಾನಮ್ಯ ವಕ್ಷ್ಯೇ ತಚ್ಚರಿತಂ ಶುಭಮ್ ॥

—ಶ್ರೀ ಭಗವದ್ದೇವನಂದಿ

ಧರ್ಮತೀರ್ಥದ ಕರ್ತೃಗಳೂ ಆಚಾರಾಂಗಾದಿ ಹನ್ನೆರಡು ಅಂಗಗಳನ್ನೂ, ಉತ್ಪಾದ ಪೂರ್ವಾದಿ ಹದಿನಾಲ್ಕು ಪೂರ್ವಗಳನ್ನೂ ಮೃದು ಮಧುರ ಗಂಭೀರವಾದ ದಿವ್ಯ ಧ್ವನಿಯಿಂದ ಭವ್ಯಜೀವಿಗಳಿಗೆ ಬೀಜಪದಗಳಿಂದ ಉಪದೇಶಿಸಿದವರೂ ಆದ ಶ್ರೀ ವರ್ಧಮಾನರಿಗೆ ನಾನು ಭಕ್ತಿಯಿಂದ ನಮಿಸಿ ಅವರ ಪರಮ ಪಾವನವೂ ಶುಭವೂ ಆದ ಚರಿತೆಯನ್ನು ಹೇಳುವೆನು.

## ವೀರಜಿನೇಶ್ವರ ಸ್ತುತಿ

೨೪. ನಿನ್ನ ನಾಮಮರೀಚಿ ಮಂಜರಿ ಕರ್ಣಭೂಷಣವಾಗಿರೆ।
ನನ್ನ ಚಿದ್ಗೃಹದಿಂದ ಕತ್ತಲೆ ಹೋಗಲಾಕ್ಷಣಮಾಕ್ಷಣಂ।
ನಿನ್ನ ಸದ್ಗುಣ ರತ್ನರಾಶಿಯು ಕಂಡು ಸೋಲ್ತಿದೆ ಮುಕ್ತಿಯಂ।
ಮನ್ನಿಸಯ್ಯ ಮಹಾನುಭಾವನೆ ಸಂದ ವೀರಜಿನೇಶ್ವರಾ ॥

— ಅಜ್ಞಾತಕವಿ ಕರ್ತೃಕ. ೧೬ನೆ ಶ.

೨೫. ಜಯತಿ ಜಗತಿ ವೀರಃ ಶುದ್ಧಭಾವಾಸ್ತಮಾರಃ
ತ್ರಿಭುವನಜನಪೂಜ್ಯಃ ಪೂರ್ಣಬೋಧೈಕರಾಜ್ಯಃ ।
ನತದಿವಿಜ ಸಮಾಜಃ ಪ್ರಾಸ್ತ ಜನ್ಮದ್ರುಬೀಜಃ
ಸಮವಸೃತಿನಿವಾಸಃ ಕೇವಲಶ್ರೀ ನಿವಾಸಃ ॥

—ಪದ್ಮಪ್ರಭಮಲಧಾರಿದೇವ

ಯಾವನು ತನ್ನ ಶುದ್ಧಭಾವದಿಂದ ಕಾಮವಿಕಾರಗಳನ್ನು ನಾಶಪಡಿಸಿರುವನೋ, ಮೂರೂ ಲೋಕಗಳಲ್ಲಿನ ಜನರಿಂದ ಪೂಜಿಸಿಕೊಳ್ಳಲು ಅರ್ಹನಾಗಿರುವನೋ, ಸಂಪೂರ್ಣಜ್ಞಾನವೆಂಬ ಎಣೆಯಿಲ್ಲದ ರಾಜ್ಯವನ್ನು ಪಡೆದಿದ್ದಾನೆಯೋ, ದೇವ ಸಮೂಹದ ನಮಸ್ಕಾರ ಪಡೆದಿರುವನೋ, ಜನ್ಮವೆಂಬ ವೃಕ್ಷದ ಬೀಜವನ್ನು ನಷ್ಟಗೊಳಿಸಿರುವನೋ, ಸಮವಸರಣದಲ್ಲಿ ವಿರಾಜಮಾನನಾಗಿರುವನೋ, ಅಸಹಾಯ ಅಂತರಂಗ ಬಹಿರಂಗ ಲಕ್ಷ್ಮಿಯ ನಿವಾಸವಾಗಿರುವನೋ ಅಂತಹ ವೀರಜಿನನು ಜಗತ್ತಿನ ಜಯಶಾಲಿಯಾಗಿದ್ದಾನೆ.

೨೬. ಜಿನೇಶೇ ವಿಶ್ವನಾಥಾಯಹ್ಯನಂತ ಗುಣಸಿಂಧವೇ
ಧರ್ಮಚಕ್ರಭೃತೇ ಮೂರ್ಧ್ನಾ ಶ್ರೀ ವೀರಸ್ವಾಮಿನೇ ನಮಃ ॥
ಯಸ್ಯಾವತಾರತಃ ಪೂರ್ವಂ ಪಿತ್ರೋಃ ಸೌಧೇಧನಾಧಿಪಃ
ಮಾಸಾನ್ ಷಣ್ಣವ ಸಂಪೂರ್ಣಾಂಶ್ಚಕ್ರೇ ರತ್ನಾದಿವರ್ಷಣಮ್ ॥
ಯದ್ರೂಪಾತಿಶಯಂ ವೀಕ್ಷ್ಯ ಮೇರೌ ಜನ್ಮಮಹೋತ್ಸವೇ
ತೃಪ್ತಿ ಮಪ್ರಾಪ್ಯ ಶಕ್ರೋಽಭೂತ್ ಸಹಸ್ರಾಕ್ಷಃ ಸವಿಸ್ಮಯಃ ॥
ವರ್ಧಮಾನಶ್ರಿಯಾ ವರ್ಧಮಾನ ಕೀರ್ತ್ಯಾ ಜಗತ್ರಯೇ
ವರ್ಧಮಾನೇನ ಯೋ ವರ್ಧಮಾನಂ ನಾಮಾಪವಾಸವೈಃ ॥
ಯೋ ಬಾಲ್ಯೇಽಪಿ ಜಗತ್ಸಾರಾಂ ಶ್ರಿಯಂ ಜೀರ್ಣತೃಣಾದಿವತ್
ತ್ಯಕ್ತ್ವಾ ಹತ್ವಾಕ್ಷ ಕಾಮಾರೀಂ ಸ್ತ್ವಪಸೇಽಯಾತ್ ತಪೋವನಮ್ ॥
ಯಸ್ಯಾನ್ನದಾನ ಮಾಹಾತ್ಮ್ಯಾಚ್ಚಂದನಾಖ್ಯಾ ನೃಪಾತ್ಮಜಾ
ಆಸೀಜ್ಜಗತ್ರಯೇ ಖ್ಯಾತಾ ಪಂಚಾಶ್ಚರ್ಯೈರ್ವಿಬಂಧನಾ ॥
ಜಿತ್ವಾರುದ್ರಕೃತಾನ್ ಘೋರಾನುಪಸರ್ಗಾನನೇಕಶಃ
ಯೋ ಮಹಾತಿಮಹಾವೀರನಾಮಾಪ ತತ್ಕೃತಂ ಪರಮ್ ॥
ಯೋ ನಿಹತ್ಯ ಮಹಾವೀರ್ಯಃ ಶುಕ್ಲಧ್ಯಾನಾಸಿನಾಚಿರಾತ್
ಘಾತಿಕರ್ಮರಿಪೂಂಶ್ಚಾಪತ್ ಕೇವಲಂ ನೃಸುರಾರ್ಚನಮ್ ॥
ಯೇನ ಪ್ರಕಾಶಿತೋ ಧರ್ಮಃ ಸ್ವಮುಕ್ತಿಶ್ರೀ ಸುಖಪ್ರದಃ
ದ್ವಿಧಾ ಪ್ರವರ್ತತೇಽದ್ಯಾಪಿಸ್ಥಾಸ್ಯತ್ಯಗ್ರೇಯುಗಾವಧೌ ॥
ಇತ್ಯಾದ್ಯಂತಾತಿಗೈರ್ವಿಶ್ವೈರ್ಗುಣೈಶ್ಚಾತಿಶಯೈಃ ಪರೈಃ
ಸಂಪೂರ್ಣೋ ಯೋ ಮುದಾಸ್ತೌಮಿತಂ ವೀರಂ ತದ್ಗುಣಾಪ್ತಯೇ ॥

— ಶ್ರೀ ಸಕಲಕೀರ್ತಿ, ವೀರವರ್ಧಮಾನಚರಿತ

ಸಮಸ್ತ ಜಗತ್ತಿನ ಒಡೆಯನೂ, ಅನಂತಗುಣಗಳ ಸಮುದ್ರನೂ, ಧರ್ಮಚಕ್ರವನ್ನು ಧರಿಸುವವನೂ ಆದ ಜಿನೇಶ್ವರ ವೀರಸ್ವಾಮಿಗೆ ನಮಸ್ಕಾರ. ಆ ಭಗವಂತನ ಅವತಾರದ ಮುನ್ನ ೧೫ ತಿಂಗಳ ತನಕ ಆತನ ತಾಯಿತಂದೆಯರಅರಮನೆಯ ಮೇಲೆ ಧನದನು ರತ್ನಾದಿಗಳ ಮಳೆಗರೆದನು. ಆ ಪ್ರಭುವಿಗೆ ಮೇರುಪರ್ವತದ ಮೇಲೆ ಆದ ಜನ್ಮೋತ್ಸವದ ರೂಪಾತಿಶಯದಿಂದ ಇಂದ್ರನು ಅಚ್ಚರಿಗೊಂಡು ಸಾವಿರ ಕಣ್ಣುಗಳನ್ನು ಪಡೆದು ನೋಡತೊಡಗಿದನು. ಬೆಳೆಯುತ್ತಿರುವ ಸಂಪತ್ತಿನಿಂದಲೂ, ತ್ರಿಲೋಕಗಳಲ್ಲಿ ಹಬ್ಬುತ್ತಿರುವ ಕೀರ್ತಿಯಿಂದಲೂ ಕೂಡಿದ ವೀರ ಪ್ರಭುವಿಗೆ ಇಂದ್ರನು ವರ್ಧಮಾನನೆಂದು ಹೆಸರಿಟ್ಟನು. ವರ್ಧಮಾನನು ಚಿಕ್ಕಂದಿನಲ್ಲೇ ಸಾರಭೂತವಾದ ರಾಜಸಂಪತ್ತನ್ನು ಕೊಳೆತ ಹುಲ್ಲಿನಂತೆ ತೊರೆದು, ಇಂದ್ರಿಯ ಮನಸ್ಸು ಕಾಮವೆಂಬ ಹಗೆಗಳನ್ನು ಇಲ್ಲದಂತೆ ಮಾಡಿ ತಪೋವನಕ್ಕೆ ತೆರಳಿದನು. ಈ ಭಗವಂತನಿಗೆ ರಾಜಪುತ್ರಿ ಚಂದನೆಯು ಅನ್ನದಾನಮಾಡಿದ ಮಾಹಾತ್ಮ್ಯದಿಂದ ಬಂಧನರಹಿತಳಾಗಿ ಪಂಚಾಶ್ಚರ್ಯದಿಂದ ಮೂರುಲೋಕಗಳಲ್ಲಿಯೂ ಖ್ಯಾತನಾಮಳಾದಳು. ಈ ವೀರ ಪ್ರಭುವು ತನಗೆ ರುದ್ರನಿಂದ ಬಂದ ನಾನಾ ತರದ ಘೋರ ಉಪಸರ್ಗಗಳನ್ನು ಸಹಿಸಿ ಆ ರುದ್ರನಿಂದಲೇ 'ಮಹಾತಿ ಮಹಾವೀರ'ನೆಂಬ ಹೆಸರನ್ನು ಪಡೆದನು. ಪರಾಕ್ರಮಿಯಾದ ವೀರಪ್ರಭುವು ಶುಕ್ಲಧ್ಯಾನವೆಂಬ ಕತ್ತಿಯಿಂದ ಘಾತಿಕರ್ಮಗಳೆಂಬ ಶತ್ರುಗಳನ್ನು ಸೋಲಿಸಿದನು. ದೇವಮಾನವ ಪೂಜಿತವಾದ ಕೇವಲಜ್ಞಾನ (ಸರ್ವಜ್ಞತ್ವ) ವನ್ನು ಪಡೆದನು; ಸ್ವರ್ಗ–ಮೋಕ್ಷಗಳ ಸುಖ ನೀಡುವ ಧರ್ಮವನ್ನು ಉಪದೇಶಿಸಿದನು. ಆ ಧರ್ಮವು ಇಂದಿಗೂ ಶ್ರಾವಕಧರ್ಮ ಮತ್ತು ಮುನಿಧರ್ಮವೆಂದು ಪ್ರವರ್ತಿಸುತ್ತಿದೆ. ಇದು ದುಃಷಮಾಕಾಲದ ಅಂತ್ಯದವರೆಗೂ ಇರುತ್ತದೆ. ಅನಂತವಾದ ಸಂಪೂರ್ಣ ಗುಣಗಳಿಂದಲೂ ಶ್ರೇಷ್ಠ ಅತಿಶಯಗಳಿಂದಲೂ ಪರಿಪೂರ್ಣನಾಗಿರುವ ಆ ವೀರ ಜಿನೇಂದ್ರನನ್ನು ಆತನ ಗುಣಗಳ ಪ್ರಾಪ್ತಿಯಾಗಲೆಂದು ಪ್ರಾರ್ಥಿಸುತ್ತೇನೆ.

೨೭. ಶ್ರೀವರ್ಧಮಾನಮಕಲಂಕಮನಿಂದ್ಯವಂದ್ಯ
ಪಾದಾರವಿಂದಯುಗಲಂ ಪ್ರಣಿಪತ್ಯಮೂರ್ಧ್ನಾ ।
ಭವ್ಯೈಕಲೋಕನಯನಂ ಪರಿಪಾಲಯಂತಂ
ಸ್ಯಾದ್ವಾದವರ್ತ್ಮ ಪರಿಣೌಮಿ ಸಮಂತಭದ್ರಂ ॥

— ಅಕಲಂಕದೇವ, ಅಷ್ಟಶತೀ

ರಾಗದ್ವೇಷ ಮೋಹ ಅಜ್ಞಾನಾದಿ ಕಲಂಕಗಳಿಂದ ದೂರನಾದವನೂ, ಸ್ತುತಿ ನಮಸ್ಕಾರಗಳಿಗೆ ಯೋಗ್ಯವಾದ ಚರಣಕಮಲಯುಗಲವುಳ್ಳವನೂ, ಅಂತರಂಗ

ಬಹಿರಂಗ ಲಕ್ಷ್ಮೀ ಸಂಪನ್ನನೂ ಆದ ವರ್ಧಮಾನ ಜಿನಪತಿಯನ್ನು ಮಸ್ತಕದಿಂದ ನಮಸ್ಕರಿಸಿ, ಅನಂತರ ಭವ್ಯಜನರಿಗೆ ವಸ್ತುತತ್ವವನ್ನು ನೋಡಲು ಬೇಕಾದ ಅದ್ವಿತೀಯ ಕಣ್ಣುಗಳಂತಿರುವ ಸರ್ವರೀತಿಯಿಂದಲೂ ಕಲ್ಯಾಣಕಾರಿಯಾದ ಸ್ಯಾದ್ವಾದ ಮಾರ್ಗವನ್ನು ರಕ್ಷಿಸುತ್ತಿರುವ ಸಮಂತಭದ್ರಸ್ವಾಮಿಯನ್ನು ವಂದಿಸುತ್ತೇನೆ.

---